ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ

ಸ್ಕಾಂದಪುರಾಣಾಂತರ್ಗತ

ಶಿವಪುರಾಣಮಾಹಾತ್ಮ್ಯಸಹಿತಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೨

## ರುದ್ರಸಂಹಿತಾ—ಸೃಷ್ಟಿಖಂಡ



ಅನುವಾದಕ:

ನಡ ಪಂಡಿತ ವೆಂಕಟರಾವ್



ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೫

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ,

ಸ್ಕಾಂದಪುರಾಣಾಂತರ್ಗತ

**ಶಿವಪುರಾಣಮಾಹಾತ್ಮ್ಯಸಹಿತಂ**

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೨

## ರುದ್ರಸಂಹಿತಾ—ಸೃಷ್ಟಿಖಂಡ



ಅನುವಾದಕ:

**ಹಾಸನದ ಪಂಡಿತ ವೆಂಕಟರಾವ್**

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೫



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರುದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ವಡೆಯರ್ ಬಹದ್ದೂರ್,**
**ಜಿ. ಸಿ. ಎಸ್. ಐ. ರವರು**




## ಶ್ರೀ ಪ್ರಸನ್ನ ಶಂಕರ

ವಾಮಾಂಕನ್ಯಸ್ಯವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ಪಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲುಲಿತವಪುಃ ಸಂಪದೇ ಪಾರ್ವತೀಶಃ ॥

# ಮುನ್ನುಡಿ

ಈ ಶಿವಪುರಾಣದಲ್ಲಿರುವ ಏಳು ಸಂಹಿತೆಗಳಲ್ಲಿ ಎರಡನೆಯದಾದ ರುದ್ರಸಂಹಿತೆಯಲ್ಲಿ, ಸೃಷ್ಟಿಖಂಡ, ಸತೀಖಂಡ, ಪಾರ್ವತೀಖಂಡ, ಕುಮಾರಖಂಡ ಯುದ್ಧಖಂಡಗಳೆಂದು ಐದು ಖಂಡಗಳಿರುವುವು. ಶಿವಕಥಾದಿಗಳನ್ನು ವಿವರಿಸುವುದಕ್ಕೆ ಪೀಠಿಕಾರೂಪವಾಗಿ ಈ ಖಂಡದಲ್ಲಿ ಪ್ರಪಂಚಸೃಷ್ಟಿಕ್ರಮವನ್ನು ಸೂಕ್ಷ್ಮವಾಗಿ ಹೇಳಿ, ಉಳಿದ ನಾಲ್ಕು ಖಂಡಗಳಲ್ಲಿ ಶಿವಕಥೆಗಳು ವಿಸ್ತಾರವಾಗಿ ವರ್ಣಿಸಲ್ಪಟ್ಟಿರುವುವು.

ಸೃಷ್ಟಿವಿಚಾರದಲ್ಲಿ ಸ್ವಲ್ಪ ಪ್ರಸ್ತಾಪಿಸುವುದು ಅಪ್ರಕೃತವೆನಿಸಲಾರದು. ಶ್ರುತಿಯಲ್ಲಿ ಹೇಳಿರುವಂತೆ **"ನಾಸದಾಸೀನ್ನೋ ಸದಾಸೀತ್ತದಾನೀಂ" "ತಸ್ಮಾದಾತ್ಮನ ಆಕಾಶಃ ಸಂಭೂತಃ"** ಎಂದರೆ ಸೃಷ್ಟಿಗೆ ಪೂರ್ವದಲ್ಲಿ ಯಾವ ಸ್ಥಿತಿ ಇದ್ದಿತು? ಬಳಿಕ ಪರಮಾತ್ಮನಿಂದ ಯಾವ ಕ್ರಮದಲ್ಲಿ ಸೃಷ್ಟಿಯು ನಡೆಯಿತು? ಈ ದೃಶ್ಯಪ್ರಪಂಚವು ಹೇಗೆ ರೂಪುಗೊಂಡಿತು? ಇವೇ ಮೊದಲಾದ ಗಹನವಿಚಾರಗಳು ಶ್ರುತಿಗಳಲ್ಲಿ ಸೂಕ್ಷ್ಮವಾಗಿ ಹೇಳಿರುವುದನ್ನೇ ಪುರಾಣಗಳಲ್ಲಿ ವಿಸ್ತಾರವಾಗಿ ಸರ್ವರಿಗೂ ಸುಲಭವಾಗಿ ತಿಳಿಯುವಂತೆ ವಿವರಿಸಲ್ಪಟ್ಟಿರುವುದು. ಈ ಸೃಷ್ಟಿಕ್ರಮವು ಪುರಾಣಗಳಿಗೆ ಇರಬೇಕಾದ ಪಂಚಲಕ್ಷಣಗಳಲ್ಲಿ ಒಂದಾಗಿದೆ. ಎಂದರೆ ಪ್ರತಿ ಪುರಾಣದಲ್ಲಿಯೂ ಈ ವಿಷಯವು ಇದ್ದೇ ಇರಬೇಕೆಂದಾಯಿತು.

ನಮಗೆ ಕಣ್ಣಿಗೆ ಕಾಣಿಸುವ ಪದಾರ್ಥಗಳು ಆಕಾರದಲ್ಲಿಯೂ, ಸ್ವಭಾವದಲ್ಲಿಯೂ ಬೇರೆ ಬೇರೆಯಾಗಿ ತೋರುತ್ತಿದ್ದರೂ, ಈ ಪದಾರ್ಥಗಳೆಲ್ಲಾ ಮೂಲಭೂತವಾದ ಮತ್ತು ಅತಿಸೂಕ್ಷ್ಮವಾದ ಒಂದೇ ವಸ್ತುವಿನಿಂದ (Basic Element) ನಿರ್ಮಿತವಾಗಿರುವುವು. ಈ ವಿಷಯವನ್ನು ಆಧುನಿಕ ವಿಜ್ಞಾನಿಗಳೂ (Modern Scientists) ಒಪ್ಪುವರು. ಇದಲ್ಲದೆ ಸಜೀವ ಮತ್ತು ನಿರ್ಜೀವ ವಸ್ತುಗಳೆರಡರಲ್ಲಿಯೂ ಪರಮಾತ್ಮನ ಅಂಶವು ಎಂದರೆ ಚೈತನ್ಯವು ಇದ್ದೇ ಇರುವುದು. ಚೈತನ್ಯವಿಲ್ಲದ ವಸ್ತುವೇ ಈ ಪ್ರಪಂಚದಲ್ಲಿಲ್ಲ. ಚಲನವಲನವುಳ್ಳ ಪ್ರಾಣಿಗಳಿಗೆ ಮಾತ್ರ ಚೈತನ್ಯವಿರುವುದೆಂದು ನಾವು ಸ್ವಾಭಾವಿಕವಾಗಿ ಹೇಳುವೆವು. ಆದರೆ ಪಾರಮಾರ್ಥಿಕ ದೃಷ್ಟಿಯಿಂದಲೂ, ವಿಜ್ಞಾನದೃಷ್ಟಿಯಿಂದಲೂ ನೋಡಿದಲ್ಲಿ ಪ್ರತಿವಸ್ತುವಿನಲ್ಲಿಯೂ ಚೈತನ್ಯವಿರುವುದು ಕಂಡುಬರುವುದು. ಆದರೆ ಎಲ್ಲದರಲ್ಲಿಯೂ ಒಂದೇ ಸಮನಾಗಿರುವುದಿಲ್ಲ ಪ್ರಾಣಿಗಳಲ್ಲಿ ಹೆಚ್ಚಾಗಿರುವುದು. ಅದಕ್ಕಿಂತ ಕಡಮೆ ಪ್ರಮಾಣದಲ್ಲಿ ಉದ್ಭಿಜ್ಜಗಳು ಎಂದರೆ ವೃಕ್ಷಾದಿಗಳು, ಲೋಹಗಳು, ಪೃಥ್ವಿಮೊದ

ಲಾದ ಪಂಚಭೂತಗಳು ಮೊದಲಾದುವುಗಳಲ್ಲಿ ಚೈತನ್ಯವು ಕಡಮೆಯಾಗುತ್ತ ಹೋಗುವುದು. ಈ ಚೈತನ್ಯವನ್ನು ವಿದ್ಯುದ್ವಾಹಕಶಕ್ತಿಗೆ (Conductivity of Electricity) ಹೋಲಿಸಬಹುದು. ಈ ಶಕ್ತಿಯು ಸಜೀವವಸ್ತುಗಳಲ್ಲಿ ಹೆಚ್ಚಾಗಿಯೂ ಜಡವಸ್ತುಗಳಲ್ಲಿ (Non-Metalic) ಬಹು ಕಡಮೆಯಾಗಿಯೂ ಇರುವುದು. ಆದುದರಿಂದ ಶ್ರುತಿಯಲ್ಲಿ ಹೇಳಿರುವ **" ತತ್ಸೃಷ್ಟ್ವಾ " " ತದೇವಾನುಪ್ರಾವಿಶತ್ "** ಎಂಬ ವಾಕ್ಯಗಳಂತೆ ಪರಮಾತ್ಮನು ಪ್ರಪಂಚವನ್ನು ಸೃಷ್ಟಿಮಾಡಿ ಅದರಲ್ಲಿ ತಾನು ಅಂತರಾತ್ಮನಾಗಿ ಎಂದರೆ ಚೈತನ್ಯಸ್ವರೂಪದಿಂದ ಇರುವನೆಂದರ್ಥವು. ಎಂದರೆ ಸೃಷ್ಟಿಗೆ ಪೂರ್ವದಲ್ಲಿ ಅವ್ಯಕ್ತಾವಸ್ಥೆಯಲ್ಲಿದ್ದ ಪರಬ್ರಹ್ಮವು ಸೃಷ್ಟಿಕಾಲದಲ್ಲಿ ವ್ಯಕ್ತಾವಸ್ಥೆಯಾಗಿ ಮಾರ್ಪಟ್ಟು ಚೈತನ್ಯದೊಂದಿಗೆ ದೃಶ್ಯಪ್ರಪಂಚರೂಪವಾಗಿ ನಮಗೆ ಕಾಣಿಸುತ್ತಿರುವುದು ಎಂದು ಅಭಿಪ್ರಾಯವು.

ಈ ಪುರಾಣದಲ್ಲಿ ಕಥಾಭಾಗಕ್ಕಿಂತಲೂ, ಉಪಾಸನಾ ಮತ್ತು ತತ್ತ್ವಭಾಗಗಳಿಗೇ ಹೆಚ್ಚಾಗಿ ಪ್ರಾಧಾನ್ಯತೆ ಇರುವುದು. ಆದುದರಿಂದ ಪುರಾಣಗಳಲ್ಲಿ ಇದು ಅತಿಶ್ರೇಷ್ಠವಾದುದೆಂದು ಹೇಳುವುದು ಸಹಜವಾಗಿಯೇ ಇದೆ. ಇಂತಹ ಸದ್ಗ್ರಂಥದ ಪಠನ ಶ್ರವಣಾದಿಗಳಿಂದ ಜನರು ಐಹಿಕಾಮುಷ್ಮಿಕ ಸುಖಗಳನ್ನು ಹೊಂದುವ ವಿಚಾರದಲ್ಲಿ ಸಂದೇಹವೇನೂ ಇಲ್ಲ. ಸಂಸ್ಕೃತಭಾಷೆಯನ್ನರಿಯದ ಸಾಮಾನ್ಯ ಜನರಿಗೆ ಈ ಗ್ರಂಥದ ಉಪಯೋಗವಾಗಲೆಂದು ಕನ್ನಡದಲ್ಲಿ ಇದನ್ನು ಪ್ರಕಟಿಸಲು ಉದಾರಾಶ್ರಯವನ್ನಿತ್ತಿರುವ, ಪ್ರಜಾವತ್ಸಲರೂ ಧರ್ಮಮಾರ್ಗನಿರತರೂ ಆದ ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ.,** ಮಹಾಪ್ರಭುಗಳವರಿಗೂ, ಅವರ ಬಂಧುವರ್ಗಕ್ಕೂ ಪ್ರಜಾವರ್ಗಕ್ಕೂ ಸಹ ಪಾರ್ವತೀಪತಿಯಾದ ಪರಮೇಶ್ವರನು ಸಕಲಸನ್ಮಂಗಳಗಳನ್ನೂ ಅನುಗ್ರಹಿಸಲೆಂದು ಭಕ್ತಿಭಾವದಿಂದ ಪ್ರಾರ್ಥಿಸುತ್ತೇನೆ.

ಮೈಸೂರು
ಪಾರ್ಥಿವ ಸಂ॥ ಜ್ಯೇಷ್ಠ ಶುದ್ಧ ಪಂಚಮಿ
ತಾ॥ 15-6-45.

ಅನುವಾದಕ,
**ಹಾಸನದ ಪಂಡಿತ್ ವೆಂಕಟರಾವ್**



# ಶಿವಮಹಾಪುರಾಣದಲ್ಲಿ ಸೃಷ್ಟಿಖಂಡದ

# ವಿಷಯಾನುಕ್ರಮಣಿಕೆ.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಸೃಷ್ಟಿಖಂಡೇ
## ಪ್ರಥಮೋಽಧ್ಯಾಯಃ

ವಿಶ್ವೋದ್ಭವಸ್ಥಿತಿಲಯಾದಿಷು ಹೇತುಮೇಕಂ
ಗೌರೀಪತಿಂ ವಿದಿತತತ್ತ್ವಮನಂತಕೀರ್ತಿಂ ।
ಮಾಯಾಶ್ರಯಂ ವಿಗತಮಾಯಮಚಿನ್ತ್ಯರೂಪಂ
ಬೋಧಸ್ವರೂಪಮಮಲಂ ಹಿ ಶಿವಂ ನಮಾಮಿ ॥ ೧ ॥

ವಂದೇ ಶಿವಂ ತಂ ಪ್ರಕೃತೇರನಾದಿಂ
ಪ್ರಶಾನ್ತಮೇಕಂ ಪುರುಷೋತ್ತಮಂ ಹಿ ।
ಸ್ವಮಾಯಯಾ ಕೃತ್ಸ್ನಮಿದಂ ಹಿ ಸೃಷ್ಟ್ವಾ
ನಭೋವದಂತರ್ಬಹಿರಾಸ್ಥಿತೋ ಯಃ ॥ ೨ ॥

### ಮೊದಲನೆಯ ಅಧ್ಯಾಯವು

೧. ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಏಕಮಾತ್ರ ಕಾರಣನಾಗಿಯೂ ಗೌರೀದೇವಿಯ ವಲ್ಲಭನಾಗಿಯೂ ತತ್ತ್ವಜ್ಞಾನಿಯಾಗಿಯೂ, ಅನಂತವಾದ ಕೀರ್ತಿಯನ್ನು ಪಡೆದಿರುವನಾಗಿಯೂ, ಮಾಯೆಗೆ ಆಶ್ರಯನಾಗಿದ್ದರೂ, ಮಾಯಾ ಪಾಶಕ್ಕೆ ಸಿಲುಕದಿರುವಂಥ, 'ತನ್ನ ರೂಪವಿಂಥದು' ಎಂದು ಚಿಂತಿಸಲೂ ಅಸಾಧ್ಯನೂ ಆದ, ಕೇವಲ ಜ್ಞಾನಸ್ವರೂಪನಾದ ಶಿವನನ್ನು ನಮಸ್ಕರಿಸುವೆನು.

೨. ಆ ಶಿವನು ಆದ್ಯಂತರಹಿತನಾದವನು. ಶಾಂತಿಸುಖದಲ್ಲಿ ಓಲಾಡತಕ್ಕವನು. ಪುರುಷರಲೆಲ್ಲಾ ಶ್ರೇಷ್ಠನಾದವನು ತನ್ನ ಮಾಯೆಯಿಂದ ಈ ಚರಾಚರ

ವಂದೇಽನ್ತರಸ್ಥಂ ನಿಜಗೂಢರೂಪಂ
ಶಿವಂ ಸ್ವತಃ ಸ್ರಷ್ಟುಮಿದಂ ವಿಚಷ್ಟೇ ।
ಜಗನ್ತಿ ನಿತ್ಯಂ ಪರಿತೋ ಭ್ರಮನ್ತಿ
ಯತ್ಸನ್ನಿಧೌ ಚುಂಬಕಲೋಹವತ್ತಂ ॥ ೩ ॥

॥ ವ್ಯಾಸಉವಾಚ ॥

ಜಗತಃ ಪಿತರಂ ಶಂಭುಂ ಜಗತೋ ಮಾತರಂ ಶಿವಾಂ ।
ತತ್ಪುತ್ರಂ ಚ ಗಣಾಧೀಶಂ ನತ್ವೈತದ್ವರ್ಣಯಾಮಹೇ ॥ ೪ ॥

ಏಕದಾ ಮುನಯಸ್ಸರ್ವೇ ನೈಮಿಶಾರಣ್ಯವಾಸಿನಃ ।
ಪಪ್ರಚ್ಛುಃ ಪರಯಾ ಭಕ್ತ್ಯಾ ಸೂತಂ ತೇ ಶೌನಕಾದಯಃ ॥ ೫ ॥

॥ ಋಷಯ ಊಚುಃ ॥

ವಿದ್ಯೇಶ್ವರಸಂಹಿತಾಯಾಃ ಶ್ರುತಾ ಸಾ ಸತ್ಕಥಾ ಶುಭಾ ।
ಸಾಧ್ಯಸಾಧನಖಂಡಾಖ್ಯಾ ರಮ್ಯಾದ್ಯಾ ಭಕ್ತವತ್ಸಲಾ ॥ ೬ ॥

---

ಪ್ರಪಂಚವೆಲ್ಲವನ್ನೂ ಸೃಷ್ಟಿಸಿ ಆಕಾಶದಂತೆ ಅದರ ಒಳಗೂ ಹೊರಗೂ ವ್ಯಾಪಿಸಿರತಕ್ಕವನು. ಇಂತಹ ಶಿವನನ್ನು ಮತ್ತೊಮ್ಮೆ ನಮಿಸುವೆನು.

೩. ಯಾವನ ಬಳಿಯಲ್ಲಿ, ಸೂಜಿಗಲ್ಲಿನ ಸುತ್ತಲೂ ಅದರ ಆಕರ್ಷಣೆಗೆ ಸಿಲುಕಿ ಕಬ್ಬಿಣ ಮೊದಲಾದ ಲೋಹಗಳು ತಿರುಗುತ್ತಿರುವಂತೆ, ಜಗತ್ತುಗಳೆಲ್ಲವೂ ಸದಾ ಸುತ್ತುತ್ತವೆಯೋ, ಅಂತಹ, ನಮ್ಮ ಹೃದಯಾಕಾಶದಲ್ಲಿ ಬೆಳಗುತ್ತಿರುವ, ನಿಜಚೈತನ್ಯ ಸ್ವರೂಪನಾದ ಶಿವನನ್ನು ಇನ್ನೊಮ್ಮೆ ವಂದಿಸುವೆನು.

೪. ವ್ಯಾಸಮಹರ್ಷಿಯು ಹೇಳಿದನು :—ಈ ಪ್ರಪಂಚಕ್ಕೆಲ್ಲಾ ತಂದೆಯಾದ ಶಿವನನ್ನೂ, ಜಗನ್ಮಾತೆಯೂ ಮಂಗಲಸ್ವರೂಪವೂ ಆದ ಪಾರ್ವತಿಯನ್ನೂ, ಇವರೀರ್ವರ ಮಗನಾದ ಗಣಪತಿಯನ್ನೂ ವಂದಿಸಿ ಇದನ್ನು ವಿವರಿಸತೊಡಗುವೆವು.

೫. ಒಂದಾನೊಂದು ಸಮಯದಲ್ಲಿ, ಶೌನಕಾದಿ ಮಹರ್ಷಿಗಳು ಸೂತಪುರಾಣಿಕನನ್ನು ಕುರಿತು ಶ್ರೇಷ್ಠವಾದ ಭಕ್ತಿಯಿಂದ ಯುಕ್ತರಾಗಿ ಇಂತು ಕೇಳಿದರು.

೬. ಮನೋಹರವಾದುದಾಗಿಯೂ, ಭಕ್ತರನ್ನು ಅನುಗ್ರಹಿಸುವಂಥದೂ ಆದ, ಸಾಧ್ಯಸಾಧನ ಖಂಡವೆಂಬ ವಿದ್ಯೇಶ್ವರಸಂಹಿತೆಯೊಳಗಣ ಸತ್ಕಥೆಯನ್ನು ಕೇಳಿದುದಾಯಿತು.

**ಸೂತ ಸೂತ ಮಹಾಭಾಗ ಚಿರಂ ಜೀವ ಸುಖೀ ಭವ ।**
**ಯಚ್ಛ್ರಾವಯಸಿ ನಸ್ತಾತ ಶಾಂಕರೀಂ ಪರಮಾಂ ಕಥಾಂ ॥ ೭ ॥**

**ಪಿಬನ್ತಸ್ತ್ವನ್ಮುಖಾಂಭೋಜಚ್ಯುತಂ ಜ್ಞಾನಾಮೃತಂ ವಯಂ ।**
**ಅವಿತೃಪ್ತಾಃ ಪುನಃ ಕಿಂಚಿತ್ ಪ್ರಷ್ಟುಮಿಚ್ಛಾಮಹೇಽನಘ ॥ ೮ ॥**

**ವ್ಯಾಸಪ್ರಸಾದಾತ್ಸರ್ವಜ್ಞೋ ಪ್ರಾಪ್ತೋಽಸಿ ಕೃತಕೃತ್ಯತಾಂ ।**
**ನಾಜ್ಞಾತಂ ವಿದ್ಯತೇ ಕಿಂಚಿದ್ಭೂತಂ ಭವ್ಯಂ ಭವಚ್ಚ ಯತ್ ॥ ೯ ॥**

**ಗುರೋರ್ವ್ಯಾಸಸ್ಯ ಸದ್ಭಕ್ತ್ಯಾ ಸಮಾಸಾದ್ಯ ಕೃಪಾಂ ಪರಾಂ ।**
**ಸರ್ವಂ ಜ್ಞಾತಂ ವಿಶೇಷೇಣ ಸರ್ವಂ ಸಾರ್ಥಂ ಕೃತಂ ಜನುಃ ॥ ೧೦ ॥**

**ಇದಾನೀಂ ಕಥಯ ಪ್ರಾಜ್ಞ ಶಿವರೂಪಮನುತ್ತಮಂ ।**
**ದಿವ್ಯಾನಿ ವೈ ಚರಿತ್ರಾಣಿ ಶಿವಯೋರಪ್ಯಶೇಷತಃ ॥ ೧೧ ॥**

---

೭. ಪೂಜ್ಯನಾದ ಸೂತಮುನಿಯೇ, ನೀನು ಚಿರಂಜೀವಿಯಾಗು. ಸುಖವಾಗಿರು. ಎಲೈ ಪೂಜ್ಯನೇ, ಶಂಕರನ ದಿವ್ಯವಾದ ಕಥೆಯನ್ನು ನಮಗೆ ಶ್ರವಣ ಮಾಡಿಸುತ್ತಿರುವೆ.

೮. ಎಲೈ ಪಾಪರಹಿತನೇ, ನಿನ್ನ ಮುಖಕಮಲದಿಂದ ಹೊರಸೂಸಿದಂಥಾ ಜ್ಞಾನಾಮೃತವನ್ನು ಕುಡಿದು ಕುಡಿದು ನಮಗೆ ತೃಪ್ತಿಯಿಲ್ಲವಾಗಿದೆ. ನಿನ್ನನ್ನು ಇನ್ನೂ ಕೇಳಬೇಕೆಂದು ಇಚ್ಛಿಸುತ್ತೇವೆ.

೯. ವ್ಯಾಸಮುನಿಯ ಅನುಗ್ರಹದಿಂದ ಎಲ್ಲವನ್ನೂ ತಿಳಿದಿರುವುದರಿಂದ ನೀನೀಗ ಕೃತಕೃತ್ಯನಾಗಿರುವೆ. ನೀನು ತಿಳಿಯದಿರುವಂಥ ಯಾವುದೊಂದು ವಿಷಯವೂ, ಹಿಂದೆ ನಡೆದಿಲ್ಲ. ಈಗ ನಡೆಯುತ್ತಿಲ್ಲ. ಮುಂದೆ ನಡೆಯುವುದಿಲ್ಲ.

೧೦ ನೀನು ಅಕೃತ್ರಿಮವಾದ ಭಕ್ತಿಯಿಂದ ಗುರುಗಳಾದ ವ್ಯಾಸರ ಪರಮಾನುಗ್ರಹವನ್ನು ಸಂಪಾದಿಸಿ ಪ್ರತಿಯೊಂದನ್ನೂ ವಿವರವಾಗಿ ತಿಳಿದಿರುವೆ. ಜನ್ಮವನ್ನೆಲ್ಲಾ ಸಾರ್ಥಕಗೊಳಿಸಿರುವೆ.

೧೧. ಓ ಪ್ರಾಜ್ಞ! ಈಗೆಮಗೆ ಶ್ರೇಷ್ಠವಾದ ಶಿವಸ್ವರೂಪವನ್ನು ತಿಳಿಸು. ಮೊದಲಿನಿಂದ ಕೊನೆಯವರೆಗೂ ಶಿವಪಾರ್ವತಿಯರ ಚರಿತ್ರೆಗಳು ಅದ್ಭುತವಾದುವು.

**ಅಗುಣೋ ಗುಣತಾಂ ಯಾತಿ ಕಥಂ ಲೋಕೇ ಮಹೇಶ್ವರಃ ।**
**ಶಿವತತ್ತ್ವಂ ವಯಂ ಸರ್ವೇ ನ ಜಾನೀಮೋ ವಿಚಾರತಃ ॥ ೧೨ ॥**

**ಸೃಷ್ಟೇಃ ಪೂರ್ವಂ ಕಥಂ ಶಂಭುಃ ಸ್ವರೂಪೇಣಾವತಿಷ್ಠತೇ ।**
**ಸೃಷ್ಟಿಮಧ್ಯೇ ಸ ಹಿ ಕಥಂ ಕ್ರೀಡನ್ ಸಂವರ್ತತೇ ಪ್ರಭುಃ ॥ ೧೩ ॥**

**ತದಂತೇ ಚ ಕಥಂ ದೇವಃ ಸ ತಿಷ್ಠತಿ ಮಹೇಶ್ವರಃ ।**
**ಕಥಂ ಪ್ರಸನ್ನತಾಂ ಯಾತಿ ಶಂಕರೋ ಲೋಕಶಂಕರಃ ॥ ೧೪ ॥**

**ಸ ಪ್ರಸನ್ನೋ ಮಹೇಶಾನಃ ಕಿಂ ಪ್ರಯಚ್ಛತಿ ಸತ್ಫಲಂ ।**
**ಸ್ವಭಕ್ತೇಭ್ಯಃ ಪರೇಭ್ಯಶ್ಚ ತತ್ಸರ್ವಂ ಕಥಯಸ್ವ ನಃ ॥ ೧೫ ॥**

**ಸದ್ಯಃ ಪ್ರಸನ್ನೋ ಭಗವಾನ್ ಭವತೀತ್ಯನುಶುಶ್ರುಮ ।**
**ಭಕ್ತಪ್ರಯಾಸಂ ಸ ಮಹಾನ್ ನ ಪಶ್ಯತಿ ದಯಾಪರಃ ॥ ೧೬ ॥**

---

೧೨. ಗುಣತ್ರಯಗಳ ಸಂಬಂಧವೇ ಇಲ್ಲದೆ, ನಿರ್ಗುಣನಾದ ಆ ಮಹೇಶ್ವರನು ಈ ಪ್ರಪಂಚದಲ್ಲಿ ಸಗುಣನಾಗುವ ಬಗೆಯಾವುದು? ನಾವೆಲ್ಲರೂ ಶಿವನ ಸ್ವರೂಪವಿಂಥದೆಂದು ವಿಮರ್ಶಾಪೂರ್ವಕವಾಗಿ ತಿಳಿದಿಲ್ಲ.

೧೩. ಪ್ರಭುವಾದ ಆ ಶಿವನು ಈ ಸೃಷ್ಟಿಯ ಮೊದಲು ಸ್ವಸ್ವರೂಪದಿಂದ ಯಾವ ರೀತಿಯಲ್ಲಿರುವನು? ಸೃಷ್ಟಿಯಾದನಂತರ ಯಾವ ರೀತಿ ವಿಹರಿಸುತ್ತಲಿರುವನು?

೧೪. ಸೃಷ್ಟಿಯ ಕೊನೆಯಲ್ಲಿ ಆ ಮಹೇಶ್ವರು ಎಂತಿರುವನು? ಲೋಕಕ್ಕೆ ಕಲ್ಯಾಣವನ್ನುಂಟುಮಾಡುವುದರಲ್ಲಿ ಬದ್ಧಕಂಕಣನಾದ ಆ ಶಂಕರದು ಪ್ರಸನ್ನನಾಗುವ ಬಗೆ ಹೇಗೆ?

೧೫. ಸುಪ್ರಸನ್ನನಾದ ಆತನು ಯಾವ ಒಳ್ಳೆಯ ಫಲವನ್ನು ಕೊಡುತ್ತಾನೆ? ತನ್ನ ಭಕ್ತರಿಗೆ ಹೇಗೆ? ಇತರರಿಗೆ ಹೇಗೆ? ಇದೆಲ್ಲವನ್ನೂ ನಮಗೆ ತಿಳಿಸು.

೧೬. ಆ ಭಗವಂತನು ಬೇಗನೆ ಒಲಿಯುವನೆಂದು ಕೇಳಿರುವೆವು. ಕೃಪಾನಿಧಿಯಾದ ಆ ಮಹಾತ್ಮನು ಭಕ್ತರು ಕಷ್ಟಪಡುವುದನ್ನು ಎಂದಿಗೂ ನೋಡಲಾರನು.

ಬ್ರಹ್ಮಾ ವಿಷ್ಣುರ್ಮಹೇಶಶ್ಚ ತ್ರಯೋ ದೇವಾಃ ಶಿವಾಂಗಜಾಃ ।
ಮಹೇಶಸ್ತತ್ರ ಪೂರ್ಣಾಂಶಃ ಸ್ವಯಮೇವ ಶಿವೋಽಪರಃ ॥ ೧೭ ॥

ತಸ್ಯಾವಿರ್ಭಾವಮಾಖ್ಯಾಹಿ ಚರಿತಾನಿ ವಿಶೇಷತಃ ।
ಉಮಾವಿರ್ಭಾವಮಾಖ್ಯಾಹಿ ತದ್ವಿವಾಹಂ ತಥಾ ಪ್ರಭೋ ॥ ೧೮ ॥

ತದ್ಗಾರ್ಹಸ್ಥ್ಯಂ ವಿಶೇಷೇಣ ತಥಾ ಲೀಲಾಃ ಪರಾ ಅಪಿ ।
ಏತತ್ಸರ್ವಂ ತದನ್ಯಚ್ಚ ಕಥನೀಯಂ ತ್ವಯಾನಘ ॥ ೧೯ ॥

॥ ವ್ಯಾಸಉವಾಚ ॥

ಇತಿ ಪೃಷ್ಟಸ್ತದಾ ತೈಸ್ತು ಸೂತೋ ಹರ್ಷಸಮನ್ವಿತಃ ।
ಸ್ಮೃತ್ವಾ ಶಂಭುಪದಾಮ್ಭೋಜಂ ಪ್ರತ್ಯುವಾಚ ಮುನೀಶ್ವರಾನ್ ॥ ೨೦ ॥

೧೭. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಪ್ರಸಿದ್ಧರಾದ ತ್ರಿಮೂರ್ತಿಗಳೂ ಆ ಶಿವನ ಅವಯುವದಿಂದ ಹುಟ್ಟಿರುವರು. ಅವರಲ್ಲಿ ಪೂರ್ಣವಾದ ಅಂಶವನ್ನು ಪಡೆದ ಮಹೇಶ್ವರನು ಎರಡನೆಯ ಶಿವನೆಂದೇ ತಿಳಿ.

೧೮. ಓ ಪ್ರಭು, ಆ ಶಿವನ ಪ್ರಾದುರ್ಭಾವವನ್ನು ತಿಳಿಸು. ಅಲ್ಲದೆ ವಿಸ್ತಾರವಾಗಿ ಅವನ ಚರಿತ್ರಗಳನ್ನೂ ವಿವರಿಸು. ಹಾಗೆಯೇ ಪಾರ್ವತಿಯು ಆವಿರ್ಭವಿಸಿದುದನ್ನೂ ಅವರೀರ್ವರ ವಿವಾಹಮಹೋತ್ಸವವು ಬೆಳೆದುದನ್ನೂ ನಮಗೆ ತಿಳಿಯಪಡಿಸು.

೧೯. ವಿಶೇಷವಾಗಿ ಅವರ ಗೃಹಸ್ಥಜೀವನವನ್ನೂ ಅದರಂತೆಯೇ, ಅವರ ಅದ್ಭುತವಾದ ವಿಲಾಸಗಳನ್ನೂ ಇದಲ್ಲದೆ ಇನ್ನೇನಾದರೂ ವಿಶೇಷವಿದ್ದರೆ ಅದನ್ನೂ, ಒಂದೂ ಬಿಡದೆ, ನೀನು ನಮಗೆ ತಿಳಿಸಬೇಕು.

೨೦. ಹೀಗೆಂಬುದಾಗಿ ಆ ಶೌನಕಾದಿಮಹರ್ಷಿಗಳು ಕೇಳಲು ಆ ಸೂತಪುರಾಣಿಕನು ಸಂತೋಷಗೊಂಡು ಭಕ್ತಿಯಿಂದ ಶಿವನ ಅಡಿದಾವರೆಗಳನ್ನು ಧ್ಯಾನಿಸಿ ಆ ಶೌನಕಾದಿಗಳನ್ನು ಕುರಿತು ಇಂತೆಂದನು.

॥ ಸೂತ ಉವಾಚ ॥

ಸಮ್ಯಕ್ ಪೃಷ್ಟಂ ಭವದ್ಭಿಶ್ಚ ಧನ್ಯಾ ಯೂಯಂ ಮುನೀಶ್ವರಾಃ ।
ಸದಾಶಿವಕಥಾಯಾಂ ವೋ ಯಜ್ಜಾತಾ ನೈಷ್ಠಿಕೀ ಮತಿಃ ॥ ೨೧ ॥

ಸದಾಶಿವಕಥಾಪ್ರಶ್ನಃ ಪುರುಷಾಂಸ್ತ್ರೀನ್ ಪುನಾತಿ ಹಿ ।
ವಕ್ತಾರಂ ಪೃಚ್ಛಕಂ ಶ್ರೋತೄನ್ ಜಾಹ್ನವೀಸಲಿಲಂ ಯಥಾ ॥ ೨೨ ॥

ಶಂಭೋರ್ಗುಣಾನುವಾದಾತ್ಕೋ ವಿರಜ್ಯೇತ ಪುಮಾನ್ ದ್ವಿಜಾಃ ।
ವಿನಾ ಪಶುಘ್ನಂ ತ್ರಿವಿಧಜನಾನಂದಕರಾತ್ಸದಾ ॥ ೨೩ ॥

ಗೀಯಮಾನೋ ವಿತೃಷ್ಣೈಶ್ಚ ಭವರೋಗೌಷಧೋಽಪಿ ಹಿ ।
ಮನಃ ಶ್ರೋತ್ರಾಭಿರಾಮಶ್ಚ ಯತಸ್ಸರ್ವಾರ್ಥದಸ್ಸ ವೈ ॥ ೨೪ ॥

---

೨೧. ಎಲೈ ಮುನಿಶ್ರೇಷ್ಠರೇ, ನೀವು ಚೆನ್ನಾಗಿ ಕೇಳಿದಿರಿ. ನಿಜವಾಗಿ ನೀವು ಧನ್ಯರು. ಸರ್ವದಾ ಮಂಗಲಸ್ವರೂಪನಾದ ಆ ಶಿವನ ಕಥೆಯನ್ನು ಕೇಳಬೇಕೆಂಬ ನಿಷ್ಠೆಯಿಂದ ನಿಮಗೆ ಈರೀತಿ ಬುದ್ಧಿ ಯುತ್ಪನ್ನವಾಯಿತು.

೨೨. ಶಿವನ ಚರಿತ್ರವನ್ನು ಕೇಳಬೇಕೆಂಬ ಈ ಪ್ರಶ್ನೆಯು, ಗಂಗೆಯ ಜಲದಂತೆ, ಆ ಪ್ರಶ್ನೆಯನ್ನು ಕೇಳಿದವನನ್ನೂ ಆ ಚರಿತ್ರವನ್ನು ತಿಳಿಸುವವನನ್ನೂ ಅದನ್ನು ಆಲಿಸುವವನನ್ನೂ ಪಾವನಗೊಳಿಸುವುದು.

೨೩. ಓ ಬ್ರಾಹ್ಮಣೋತ್ತಮರೇ, ಪಶುಹಿಂಸಾನಿರತನಾದವನೊಬ್ಬನನ್ನು ಬಿಟ್ಟು ಯಾವ ಪುರುಷನು ತಾನೇ, ಉತ್ತಮ, ಮಧ್ಯಮ, ಅಧಮರೆಂಬ ಮೂರು ವಿಧವಾದ ಜನಗಳನ್ನೂ ಆನಂದಗೊಳಿಸುವ ಆ ಶಿವನ ಗುಣಸಂಕೀರ್ತನದಲ್ಲಿ ಬೇಸರಗೊಳ್ಳುವನು ?

೨೪. ಸಂಸಾರವೆಂಬ ರೋಗಕ್ಕೆ ಔಷಧವಾಗಿರುವ ಶಿವನ ಆ ಗುಣಗಳು, ಮನಸ್ಸಿಗೆ ಆಹ್ಲಾದಕರವಾಗಿಯೂ, ಕಿವಿಗಿಂಪಾಗಿಯೂ ಇರುವುದಲ್ಲದೆ, ಆಸಕ್ತಿಯಿಲ್ಲದೆ ಸಂಕೀರ್ತನೆಮಾಡುವವರಿಗೂ ಸಹ ಸಕಲ ಇಷ್ಟಾರ್ಥಗಳನ್ನೂ ಕೊಡುವವು.

**ಕಥಯಾಮಿ ಯಥಾಬುದ್ಧಿ ಭವತ್ಪ್ರಶ್ನಾನುಸಾರತಃ ।**
**ಶಿವಲೀಲಾಂ ಪ್ರಯತ್ನೇನ ದ್ವಿಜಾಸ್ತಾಂ ಶೃಣುತಾದರಾತ್ ॥ ೨೫ ॥**

**ಭವದ್ಭಿಃ ಪೃಚ್ಛ್ಯತೇ ಯದ್ವತ್ತತ್ತಥಾ ನಾರದೇನ ವೈ ।**
**ಪೃಷ್ಟಂ ಪಿತ್ರೇ ಪ್ರೇರಿತೇನ ಹರಿಣಾ ಶಿವರೂಪಿಣಾ ॥ ೨೬ ॥**

**ಬ್ರಹ್ಮಾ ಶ್ರುತ್ವಾ ಸುತವಚಃ ಶಿವಭಕ್ತಃ ಪ್ರಸನ್ನಧೀಃ ।**
**ಜಗೌ ಶಿವಯಶಃ ಪ್ರೀತ್ಯಾ ಹರ್ಷಯನ್ ಮುನಿಸತ್ತಮಂ ॥ ೨೭ ॥**

**॥ ವ್ಯಾಸಉವಾಚ ॥**

**ಸೂತೋಕ್ತಮಿತಿ ಪದ್ವಾಕ್ಯಮಾಕರ್ಣ್ಯ ದ್ವಿಜಸತ್ತಮಾಃ ।**
**ಪ್ರಪಚ್ಛುಸ್ತತ್ಸುಸಂವಾದಂ ಕುತೂಹಲಸಮನ್ವಿತಾಃ ॥ ೨೮ ॥**

**॥ ಋಷಯ ಊಚುಃ ॥**

**ಸೂತ ಸೂತ ಮಹಾಭಾಗ ಶೈವೋತ್ತಮ ಮಹಾಮತೇ ।**
**ಶ್ರುತ್ವಾ ತವ ವಚೋ ರಮ್ಯಂ ಚೇತೋ ನಃ ಸಕುತೂಹಲಂ ॥ ೨೯ ॥**

೨೫. ಎಲೈ ದ್ವಿಜಶ್ರೇಷ್ಠರೇ, ನಿಮ್ಮ ಕೋರಿಕೆಯಂತೆ, ನನಗೆ ತಿಳಿದಮಟ್ಟಿಗೆ ಪ್ರಯತ್ನಪೂರ್ವಕವಾಗಿ ಶಿವನ ಲೀಲೆಗಳನ್ನು ವರ್ಣಿಸುವೆನು. ಆದರದಿಂದ ಕೇಳಿರಿ.

೨೬. ನೀವೀಗ ನನ್ನನ್ನು ಕೇಳಿದಂತೆಯೇ, ಹಿಂದೆ, ವಿಶ್ವಸ್ವರೂಪನಾದ ವಿಷ್ಣುವಿನಿಂದ ಪ್ರೇರಿಸಲ್ಪಟ್ಟ ನಾರದನು ತನ್ನ ತಂದೆಯಾದ ಬ್ರಹ್ಮನನ್ನು ಕೇಳಿದನು.

೨೭. ಶಿವನಲ್ಲಿ ಭಕ್ತಿಯುಳ್ಳ ಬ್ರಹ್ಮನು ಮಗನ ಮಾತನ್ನು ಕೇಳಿ ಪ್ರಸನ್ನಚಿತ್ತನಾಗಿ ಆ ನಾರದನ ಮನಸ್ಸನ್ನು ಸಂತೋಷಗೊಳಿಸುತ್ತಾ ಪ್ರೀತಿಯಿಂದ ಶಿವನ ಗುಣಗಳನ್ನು ವರ್ಣಿಸತೊಡಗಿದನು.

೨೮. ಹೀಗೆಂದು ನುಡಿದ ಸೂತಪುರಾಣಿಕನ ಮಾತನ್ನು ಕೇಳಿ ಆ ಬ್ರಾಹ್ಮಣೋತ್ತಮರು, ಕುತೂಹಲದಿಂದ ಕೂಡಿದವರಾಗಿ, ಬ್ರಹ್ಮನಿಗೂ, ಆತನ ಮಗನಾದ ನಾರದನಿಗೂ ಮಾತುಕತೆಯನ್ನು ಕುರಿತು ಪ್ರಶ್ನಿಸಿದರು.

೨೯. ಋಷಿಗಳು ಕೇಳಿದರು :—ಎಲೈ ಸೂತನೇ, ನೀನು ಮಹಾನುಭಾವನು, ಶಿವಭಕ್ತಾಗ್ರೇಸರನು ಮತ್ತು ಮಹಾಜ್ಞಾನಿಯು. ಮನೋಹರನಾದ ನಿನ್ನ ಮಾತುಗಳನ್ನು ಕೇಳಿ ನಮ್ಮ ಮನಸ್ಸು ಕುತೂಹಲಗೊಂಡಿದೆ.

**ಕದಾ ಬಭೂವ ಸುಖಕೃದ್ವಿಧಿನಾರದಯೋರ್ಮಹಾನ್ ।**
**ಸಂವಾದೋ ಯತ್ರ ಗಿರಿಶಸುಲೀಲಾ ಭವಮೋಚಿನೀ ॥ ೩೦ ॥**

**ವಿಧಿನಾರದಸಂವಾದಪೂರ್ವಕಂ ಶಾಂಕರಂ ಯಶಃ ।**
**ಬ್ರೂಹಿ ನಸ್ತಾತ ತತ್ಪ್ರೀತ್ಯಾ ತತ್ತತ್ಪ್ರಶ್ನಾನುಸಾರತಃ ॥ ೩೧ ॥**

**ಇತ್ಯಾಕರ್ಣ್ಯ ವಚಸ್ತೇಷಾಂ ಮುನೀನಾಂ ಭಾವಿತಾತ್ಮನಾಂ ।**
**ಸೂತಃ ಪ್ರೋವಾಚ ಸುಪ್ರೀತಸ್ತತ್ಸಂವಾದಾನುಸಾರತಃ ॥ ೩೨ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಮುನಿಪ್ರಶ್ನವರ್ಣನೋನಾಮ ಪ್ರಥಮೋಽಧ್ಯಾಯಃ**



---

೩೦. ಸಂಸಾರಬಂಧವನ್ನು ತೊಡೆದುಹಾಕುವಂಥ ಶಿವನ ಲೀಲೆಗಳು ವರ್ಣಿತವಾಗಿರುವ ವಿಸ್ತಾರವಾದ ಬ್ರಹ್ಮನಾರದ ಸಂವಾದವು ಯಾವಾಗ ನಡೆಯಿತು ?

೩೧. ಓ ಪೂಜ್ಯನೇ, ಬ್ರಹ್ಮನಾರದರ ಸಂವಾದ ರೂಪವಾಗಿ, ನಮ್ಮ ಪ್ರಶ್ನೆಗಳು ಬಗೆಹರಿಯುವಂತೆ, ಶಿವನ ಯಶಸ್ಸನ್ನು ನಮಗೆ ವಿಶ್ವಾಸದಿಂದ ತಿಳಿಸು.

೩೨. ಈರೀತಿಯಾಗಿ ಆತ್ಮನಿಷ್ಠರಾದ ಆ ಶೌನಕಾದಿಮಹರ್ಷಿಗಳ ಮಾತನ್ನು ಕೇಳಿ ಸೂತಪುರಾಣಿಕನು ಸಂತೋಷಗೊಂಡು ಬ್ರಹ್ಮನಾರದಸಂವಾದವನ್ನನುಸರಿಸಿ ಹೇಳತೊಡಗಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಮುನಿಪ್ರಶ್ನವರ್ಣನವೆಂಬ ಮೊದಲನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಸೃಷ್ಟಿಖಂಡೇ
## ದ್ವಿತಿಯೋಽಧ್ಯಾಯಃ

---

॥ ಸೂತ ಉವಾಚ ॥

ಏಕಸ್ಮಿನ್ ಸಮಯೇ ವಿಪ್ರಾ ನಾರದೋ ಮುನಿಸತ್ತಮಃ ।
ಬ್ರಹ್ಮಪುತ್ರೋ ವಿನೀತಾತ್ಮಾ ತಪೋಽರ್ಥಂ ಮನ ಆದಧೇ ॥ ೧ ॥

ಹಿಮಶೈಲಗುಹಾ ಕಾಚಿದೇಕಾ ಪರಮಶೋಭನಾ ।
ಯತ್ಸಮೀಪೇ ಸುರನದೀ ಸದಾ ವಹತಿ ವೇಗತಃ ॥ ೨ ॥

ತತ್ರಾಶ್ರಮೋ ಮಹಾದಿವ್ಯೋ ನಾನಾಶೋಭಾಸಮನ್ವಿತಃ ।
ತಪೋಽರ್ಥಂ ಸ ಯಯೌ ತತ್ರ ನಾರದೋ ದಿವ್ಯದರ್ಶನಃ ॥ ೩ ॥

---

## ಎರಡನೆಯ ಅಧ್ಯಾಯವು

೧. ಎಲೈ ಬ್ರಾಹ್ಮಣೋತ್ತಮರೇ, ಒಂದಾನೊಂದುಸಮಯದಲ್ಲಿ ಋಷಿಶ್ರೇಷ್ಠನಾದ ನಾರದಮಹರ್ಷಿಯು ತಪಸ್ಸನ್ನು ಮಾಡಬೇಕೆಂದು ಮನಸ್ಸುಮಾಡಿದನು.

೨. ಹಿಮವತ್ಪರ್ವತದ ತಪ್ಪಲಲ್ಲಿ ಬಹು ಮನೋಹರವಾದ ಗುಹೆಯೊಂದು ಇದ್ದಿತು. ಅದರ ಬಳಿ ಯಾವಾಗಲೂ ವೇಗದಿಂದ ಗಂಗಾನದಿಯು ಹರಿಯುತ್ತಿತ್ತು.

೩. ಅದರ ದಡದಲ್ಲಿ ವಿಶಾಲವಾಗಿಯೂ, ದಿವ್ಯವಾಗಿಯೂ, ಕಾಂತಿಯುಕ್ತವಾಗಿಯೂ ಇರುವ ಆಶ್ರಮವಿತ್ತು. ದಿವ್ಯಜ್ಞಾನಿಯಾದ ನಾರದನು ತಪಸ್ಸನ್ನು ಮಾಡಲು ಅಲ್ಲಿಗೆ ತೆರಳಿದನು.

ತಾಂ ದೃಷ್ಟ್ವಾ ಮುನಿಶಾರ್ದೂಲಸ್ತೇಪೇ ಸ ಸುಚಿರಂ ತಪಃ ।
ಬದ್ಧ್ವಾಸನಂ ದೃಢಂ ಮೌನೀ ಪ್ರಾಣಾನಾಯಾಮ್ಯ ಶುದ್ಧಧೀಃ ॥ ೪ ॥

ಚಕ್ರೇ ಮುನಿಸ್ಸಮಾಧಿಂ ತಮಹಂ ಬ್ರಹ್ಮೇತಿ ಯತ್ರ ಹ ।
ವಿಜ್ಞಾನಂ ಭವತಿ ಬ್ರಹ್ಮಸಾಕ್ಷಾತ್ಕಾರಕರಂ ದ್ವಿಜಾಃ ॥ ೫ ॥

ಇತ್ಥಂ ತಪತಿ ತಸ್ಮಿನ್ ವೈ ನಾರದೇ ಮುನಿಸತ್ತಮೇ ।
ಚಕಂಪೇಽಥ ಶುನಾಸೀರೋ ಮನಸ್ಸಂತಾಪವಿಹ್ವಲಃ ॥ ೬ ॥

ಮನಸೀತಿ ವಿಚಿಂತ್ಯಾಸೌ ಮುನಿರ್ಮೇ ರಾಜ್ಯಮಿಚ್ಛತಿ ।
ತದ್ವಿಘ್ನಕರಣಾರ್ಥಂ ಹಿ ಹರಿರ್ಯತ್ನಮಿಯೇಷ ಸಃ ॥ ೭ ॥

ಸಸ್ಮಾರ ಸ ಸ್ಮರಂ ಶಕ್ರಶ್ಚೇತಸಾ ದೇವನಾಯಕಃ ।
ಆಜಗಾಮ ದ್ರುತಂ ಕಾಮಸ್ಸಮಧೀರ್ಮಹಿಷೀಸುತಃ ॥ ೮ ॥

೪. ಆ ಗುಹೆಯನ್ನು ಕಂಡು ಮುನಿಶ್ರೇಷ್ಠನಾದ ನಾರದನು, ದೃಢವಾದ ಆಸನದಲ್ಲಿ ಕುಳಿತು, ಮೌನದಿಂದ, ಪ್ರಾಣಾಯಾಮಪುರಸ್ಸರವಾಗಿ ಬಹುದಿವಸಗಳವರೆಗೂ, ಶುದ್ಧಹೃದಯನಾಗಿ ತಪಸ್ಸನ್ನಾಚರಿಸಿದನು.

೫. ಓ ಬ್ರಾಹ್ಮಣಶ್ರೇಷ್ಠರೇ, ಯಾವ ಸಮಾಧಿಯಲ್ಲಿ, ನಾನೇ ಪರಬ್ರಹ್ಮನೆಂಬ ದಿವ್ಯವಾದ ಆತ್ಮಾನುಭವವು ಉಂಟಾಗುವುದೋ, ಅಂತಹ ಪರಬ್ರಹ್ಮವಸ್ತುವನ್ನು ಸಾಕ್ಷಾತ್ಕರಿಸುವ ಸಮಾಧಿಯಲ್ಲಿ ಆ ಮುನಿಯು ಮಗ್ನನಾದನು

೬. ಈರೀತಿಯಾಗಿ ಮುನಿಶ್ರೇಷ್ಠನಾದ ನಾರದನು ತಪಸ್ಸನ್ನು ಮಾಡುತ್ತಿರಲು ಇಂದ್ರನು ಮನಸ್ಸಿನ ಸಂತಾಪದಿಂದ ಕಳವಳಗೊಂಡನು.

೭. ಈ ನಾರದನು ನನ್ನ ರಾಜ್ಯವನ್ನು ಪಡೆಯಬೇಕೆಂದು ತಪಸ್ಸುಮಾಡುತ್ತಿರುವನೆಂದು ಇಂದ್ರನು ನಿರ್ಧರಿಸಿ ಅದನ್ನು ಕೆಡಿಸಲು ಪ್ರಯತ್ನಿಸಬೇಕೆಂದು ಯೋಚಿಸಿದನು.

೮. ಹೀಗೆ ಯೋಚಿಸಿದೊಡನೆಯೇ ದೇವರಾಜನಾದ ಇಂದ್ರನು ಮನ್ಮಥನನ್ನು ಮನಸ್ಸಿನಲ್ಲಿ ನೆನೆಸಿದನು. ಎಮ್ಮೆಯಕರುವಿನಂತೆ ಸ್ಥೂಲಬುದ್ಧಿಯುಳ್ಳ ಆ ಮನ್ಮಥನು, ಬೇಗನೆ ಅವನಲ್ಲಿಗೆ ಬಂದನು.

**ಅಥಾಗತಂ ಸ್ಮರಂ ದೃಷ್ಟ್ವಾ ಸಂಬೋಧ್ಯ ಸುರರಾಟ್ಪ್ರಭುಃ ।**
**ಉವಾಚ ತಂ ಪ್ರಪಶ್ಯಾಶು ಸ್ವಾರ್ಥೇ ಕುಟಿಲಶೇಮುಷಿಃ ॥ ೯ ॥**

**॥ ಇಂದ್ರಉವಾಚ ॥**

**ಮಿತ್ರವರ್ಯ ಮಹಾವೀರ ಸರ್ವದಾ ಹಿತಕಾರಕ ।**
**ಶೃಣು ಪ್ರೀತ್ಯಾ ವಚೋ ಮೇ ತ್ವಂ ಕುರು ಸಾಹಾಯ್ಯಮಾತ್ಮನಾ ॥ ೧೦ ॥**

**ತ್ವದ್ಬಲಾನ್ಮೇ ಬಹೂನಾಂ ಚ ತಪೋಗರ್ವೋ ವಿನಾಶಿತಃ ।**
**ಮದ್ರಾಜ್ಯಸ್ಥಿರತಾ ಮಿತ್ರ ತ್ವದನುಗ್ರಹತಸ್ಸದಾ ॥ ೧೧ ॥**

**ಹಿಮಶೈಲಗುಹಾಯಾಂ ಹಿ ಮುನಿಸ್ತಪತಿ ನಾರದಃ ।**
**ಮನಸೋದ್ದಿಶ್ಯ ವಿಶ್ವೇಶಂ ಮಹಾಸಂಯಮವಾನ್ ದೃಢಃ ॥ ೧೨ ॥**

**ಯಾಚೇನ್ನ ವಿಧಿತೋ ರಾಜ್ಯಂ ಸ ಮಮೇತಿ ವಿಶಂಕಿತಃ ।**
**ಅದ್ಯೈವ ಗಚ್ಛ ತತ್ರ ತ್ವಂ ತತ್ತಪೋ ವಿಘ್ನಮಾಚರ ॥ ೧೩ ॥**

---

೯. ಕುಟಿಲಮತಿಯಾದ ಸುರರಾಜನು ಮನ್ಮಥನು ಬಂದುದನ್ನು ಕಂಡು, ಸ್ವಾರ್ಥವನ್ನು ಸಾಧಿಸಲು, ಅವನನ್ನು ಕುರಿತು,

೧೦. ಓ ಮಿತ್ರವರ್ಯ, ನೀನು ವೀರರಲ್ಲಿ ಶ್ರೇಷ್ಠನು. ನೀನೆನಗೆ ಯಾವಾಗಲೂ ಹಿತವನ್ನೇ ಮಾಡುವೆ. ನನ್ನ ಮಾತು ಕೇಳು. ನನ್ನಲ್ಲಿ ಪ್ರೀತಿಯಿಟ್ಟು ನನಗೆ ಸಹಾಯವನ್ನು ಮಾಡು.

೧೧. ಎಲೈ ಸ್ನೇಹಿತನೇ, ನನಗೆ ನೀನು ಬೆಂಬಲವಾಗಿ ನಿಂತಿರುವುದರಿಂದ ಅನೇಕರ ತಪೋಗರ್ವವು ನಾಶ ಮಾಡಲ್ಪಟ್ಟಿತು. ನೀನು ಸದಾ ವಿಶ್ವಾಸವಿಟ್ಟಿರುವುದರಿಂದಲೇ ನನ್ನ ರಾಜ್ಯವು ಅಲ್ಲಾಡದೆ ನಿಂತಿದೆ.

೧೨. ಹಿಮವತ್ಪರ್ವತದ ಗುಹೆಯೊಂದರಲ್ಲಿ ನಾರದ ಮಹರ್ಷಿಯು ಮಹಾಸಂಯಮಶೀಲನಾಗಿ ದೃಢಚಿತ್ತದಿಂದ, ವಿಶ್ವೇಶ್ವರನಾದ ಶಿವನನ್ನು ಕುರಿತು ತಪಸ್ಸನ್ನಾಚರಿಸುತ್ತಾ ಇದಾನೆ.

೧೩. ಈ ತಪಸ್ಸಿನಿಂದ ಎಲ್ಲಿ ನನ್ನ ರಾಜ್ಯಕ್ಕಾಸೆಪಟ್ಟು ಅದನ್ನು ಬೇಡುವನೋ ಎಂದು ಕಳವಳವಾಗಿದೆ. ಈಗಲೇ ನೀನಲ್ಲಿಗೆ ಹೋಗಿ ಅವನ ತಪಸ್ಸಿಗೆ ವಿಘ್ನವನ್ನುಂಟುಮಾಡು ಎಂದನು.

ಇತ್ಯಾಜ್ಞಪ್ತೋ ಮಹೇಂದ್ರೇಣ ಸ ಕಾಮಸ್ಸಮಧುಪ್ರಿಯಃ ।
ಜಗಾಮ ತತ್ಸ್ಥಲಂ ಗರ್ವಾದುಪಾಯಂ ಸ್ವಂ ಚಕಾರ ಹ ॥ ೧೪ ॥

ರಚಯಾಮಾಸ ತತ್ರಾಶು ಸ್ವಕಲಾಸ್ಸಕಲಾ ಅಪಿ ।
ವಸಂತೋಽಪಿ ಸ್ವಪ್ರಭಾವಂ ಚಕಾರ ವಿವಿಧಂ ಮದಾತ್ ॥ ೧೫ ॥

ನ ಬಭೂವ ಮುನೇಶ್ಚೇತೋ ವಿಕೃತಂ ಮುನಿಸತ್ತಮಾಃ ।
ಭ್ರಷ್ಟೋ ಬಭೂವ ತದ್ಗರ್ವೋ ಮಹೇಶಾನುಗ್ರಹೇಣ ಹ ॥ ೧೬ ॥

ಶೃಣುತಾದರತಸ್ತತ್ರ ಕಾರಣಂ ಶೌನಕಾದಯಃ ।
ಈಶ್ವರಾನುಗ್ರಹೇಣಾತ್ರ ನ ಪ್ರಭಾವಸ್ಸ್ಮರಸ್ಯ ಹಿ ॥ ೧೭ ॥

ಅತ್ರೈವ ಶಂಭುನಾಽಕಾರಿ ಸುತಪಶ್ಚ ಸ್ಮರಾರಿಣಾ ।
ಅತ್ರೈವ ದಗ್ಧಸ್ತೇನಾಶು ಕಾಮೋ ಮುನಿತಪೋಽಪಹಃ ॥ ೧೮ ॥

೧೪. ಹೀಗೆ ಇಂದ್ರನು ಹೇಳಲು, ಆ ಮನ್ಮಥನು ತನ್ನ ಸ್ನೇಹಿತನಾದ ವಸಂತನೊಡನೆ, ಹೆಮ್ಮೆಯಿಂದ ಆ ನಾರದನು ತಪಸ್ಸುಮಾಡುವಲ್ಲಿಗೆ ಹೋಗಿ ತನ್ನ ಉಪಾಯಗಳನ್ನು ಹೂಡಿದನು.

೧೫. ಬೇಗ ಬೇಗ ತನ್ನಲ್ಲಿ ವಿಲಾಸಗಳನ್ನು ತೋರಿದನು. ವಸಂತನೂ ಸಹ ಗರ್ವದಿಂದ ನಾನಾವಿಧವಾಗಿ ತನ್ನ ಪ್ರಭಾವವನ್ನು ಬೀರಿದನು.

೧೬. ಎಲೈ ಮುನಿವರ್ಯರೇ, ಆ ನಾರದನ ಮನಸ್ಸು ಸ್ವಲ್ಪವೂ ವಿಕಾರವನ್ನು ಹೊಂದಿಲ್ಲ. ಮಹೇಶ್ವರನ ಅನುಗ್ರಹದಿಂದ ಆ ಮನ್ಮಥನ ಗರ್ವವೆಲ್ಲವೂ ವ್ಯರ್ಥವಾಗಿಹೋಯಿತು.

೧೭. ಎಲೈ ಶೌನಕಾದಿಗಳಿರಾ, ಆದರದಿಂದ ಅದರ ಕಾರಣವನ್ನು ಕೇಳಿರಿ. ಈಶ್ವರಾನುಗ್ರಹದಿಂದ ಈ ಸ್ಥಳದಲ್ಲಿ ಮನ್ಮಥನ ಆಟವೇನೂ ಸಾಗಲಾರದು.

೧೮. ಹಿಂದೆ ಇದೇ ಜಾಗದಲ್ಲಿ ಮದನಾಂತಕನಾದ ಶಿವನು ತಪಸ್ಸನ್ನಾಚರಿಸುತ್ತಿದ್ದನು. ಆಗ ಶಿವನು ಆತಂಕಪಡಿಸಲು ಬಂದ, ಮುನಿಗಳ ತಪಸ್ಸಿಗೆ ವ್ಯತ್ಯಯವಾದ ಮನ್ಮಥನನ್ನು ಕ್ಷಣಮಾತ್ರದಲ್ಲಿ ಫಾಲನೇತ್ರದಿಂದ ದಹಿಸಿಬಿಟ್ಟನು.

**ಕಾಮಜೀವನಹೇತೋರ್ಹಿ ರತ್ಯಾ ಸಂಪ್ರಾರ್ಥಿತೈಸ್ಸುರೈಃ ।**
**ಸಂಪ್ರಾರ್ಥಿತ ಉವಾಚೇದಂ ಶಂಕರೋ ಲೋಕಶಂಕರಃ　　॥ ೧೯ ॥**

**ಕಂಚಿತ್ಸಮಯಮಾಸಾದ್ಯ ಜೀವಿಷ್ಯತಿ ಸುರಾಃ ಸ್ಮರಃ ।**
**ಪರಂತ್ವಿಹ ಸ್ಮರೋಪಾಯಶ್ಚಲಿಷ್ಯತಿ ನ ಕಶ್ಚನ　　॥ ೨೦ ॥**

**ಇಹ ಯಾವದ್ದೃಶ್ಯತೇ ಭೂರ್ಜನೈಃ ಸ್ಥಿತ್ವಾಽಮರಾಸ್ಸದಾ ।**
**ಕಾಮಬಾಣಪ್ರಭಾವೋಽತ್ರ ನ ಚಲಿಷ್ಯತ್ಯಸಂಶಯಂ　　॥ ೨೧ ॥**

**ಇತಿ ಶಂಭೂಕ್ತಿತಃ ಕಾಮೋ ಮಿಥ್ಯಾತ್ಮಗತಿಕಸ್ತದಾ ।**
**ನಾರದೇ ಸ ಜಗಾಮಾಶು ದಿವಮಿಂದ್ರಸಮೀಪತಃ　　॥ ೨೨ ॥**

**ಆಚಖ್ಯೌ ಸರ್ವವೃತ್ತಾಂತಂ ಪ್ರಭಾವಂ ಚ ಮುನೇಸ್ಸ್ಮರಃ ।**
**ತದಾಜ್ಞಯಾ ಯಯೌ ಸ್ಥಾನಂ ಸ್ವಕೀಯಂ ಸ ಮಧುಪ್ರಿಯಃ　　॥ ೨೩ ॥**

೧೯. ಸುಟ್ಟುಹೋದ ಮನ್ಮಥನನ್ನು ಹೇಗಾದರೂಮಾಡಿ ಬದುಕಿಸಬೇಕೆಂದು ದೇವತೆಗಳನ್ನು ರತಿಯು ಅಂಗಲಾಚಿ ಬೇಡಿಕೊಳ್ಳಲು, ಆಗ ದೇವತೆಗಳು ಶಂಕರನನ್ನು ಪ್ರಾರ್ಥಿಸಿದರು. ಪ್ರಪಂಚಕ್ಕೇ ಕಲ್ಯಾಣವನ್ನುಂಟುಮಾಡತಕ್ಕ ಶಂಕರನು ಇಂತೆಂದನು.

೨೦. ಎಲೈ ದೇವತೆಗಳಿರಾ! ಕೆಲವುಕಾಲ ಕಳೆದಮೇಲೆ ಮನ್ಮಥನು ಪುನಃ ಬದುಕುವನು. ಆದರೆ ಈ ಸ್ಥಳಗಳಲ್ಲಿ ಮಾತ್ರ ಅವನ ಯಾವುದೊಂದು ಆಟವೂ ನಡೆಯುವುದಿಲ್ಲ.

೨೧. ಜನಗಳ ಕಣ್ಣಿಗೆ ಎಲ್ಲಿಯವರೆಗೆ ಈ ಸ್ಥಳವು ಗೋಚರಿಸುತ್ತಿರುವುದೋ ಅಲ್ಲಿಯವರೆಗೂ ಇಲ್ಲಿ ಮನ್ಮಥನ ಬಾಣಗಳು ತಮ್ಮ ಪ್ರಭಾವವನ್ನು ಬೀರಲಾರವು. ಈ ಅಂಶದಲ್ಲಿ ಸ್ವಲ್ಪವೂ ಸಂದೇಹ ಬೇಡ.

೨೨. ಹೀಗೆ ಶಿವನ ವಚನದಿಂದ, ನಾರದಮಹರ್ಷಿಯ ವಿಷಯದಲ್ಲಿ ಮನ್ಮಥನ ಆಟವೇನೂ ಸಾಗಲಿಲ್ಲ. ವಿಫಲಮನೋರಥನಾಗಿ ಬಂದ ದಾರಿಹಿಡಿದು ಒಡನೆಯೇ ಇಂದ್ರನ ಬಳಿಗೆ ಹೊರಟುಹೋದನು.

೨೩. ಆ ವಸಂತ ಸಖನಾದ ಮನ್ಮಥನು ಇಂದ್ರನಿಗೆ ನಡೆದ ಎಲ್ಲ ವಿಷಯಗಳನ್ನೂ ನಾರದನ ಮಹಿಮೆಯನ್ನೂ ತಿಳಿಸಿ, ಅವನ ಅಪ್ಪಣೆ ಪಡೆದು ತನ್ನ ಜಾಗಕ್ಕೆ ಹೊರಟುಹೋದನು.

ವಿಸ್ಮಿತೋಽಭೂತ್ಸುರಾಧೀಶಃ ಪ್ರಶಶಂಸಾಥ ನಾರದಂ ।
ತದ್ವೃತ್ತಾಂತಾನಭಿಜ್ಞೋ ಹಿ ಮೋಹಿತಶ್ಶಿವಮಾಯಯಾ ॥ ೨೪ ॥

ದುರ್ಜ್ಞೇಯಾ ಶಾಂಭವೀ ಮಾಯಾ ಸರ್ವೇಷಾಂ ಪ್ರಾಣಿನಾಮಿಹ ।
ಭಕ್ತಂ ವಿನಾರ್ಪಿತಾತ್ಮಾನಂ ತಯಾ ಸಂಮೋಹ್ಯತೇ ಜಗತ್ ॥ ೨೫ ॥

ನಾರದೋಽಪಿ ಚಿರಂ ತಸ್ಥೌ ತತ್ರೇಶಾನುಗ್ರಹೇಣ ಹ ।
ಪೂರ್ಣಂ ಮತ್ವಾ ತಪಸ್ತತ್ಸ್ವಂ ವಿರರಾಮ ತತೋ ಮುನಿಃ ॥ ೨೬ ॥

ಕಾಮಾಜ್ಜಯಂ ನಿಜಂ ಮತ್ವಾ ಗರ್ವಿತೋಽಭೂನ್ಮುನೀಶ್ವರಃ ।
ವೃಥೈವ ವಿಗತಜ್ಞಾನಃ ಶಿವಮಾಯಾವಿಮೋಹಿತಃ ॥ ೨೭ ॥

ಧನ್ಯಾ ಧನ್ಯಾ ಮಹಾಮಾಯಾ ಶಾಂಭವೀ ಮುನಿಸತ್ತಮಾಃ ।
ತದ್ಗತಿಂ ನ ಹಿ ಪಶ್ಯಂತಿ ವಿಷ್ಣುಬ್ರಹ್ಮಾದಯೋಽಪಿ ಹಿ ॥ ೨೮ ॥

---

೨೪. ಇದನ್ನು ಕೇಳಿ ಇಂದ್ರನು ಅಚ್ಚರಿಗೊಂಡು ಶಿವನ ಮಾಯೆಯಿಂದ ಮೋಹಿತನಾಗಿ ಅದರ ಮೂಲಕಾರಣವೇನೆಂದು ತಿಳಿಯದೆ, ನಾರದನನ್ನು ಹೊಗಳಿದನು.

೨೫. ಯಾವ ಪ್ರಾಣಿಯೂ ಶಿವನ ಮಾಯೆಯನ್ನು ತಿಳಿಯಲಾರರು. ಆತ್ಮಾರ್ಪಣವನ್ನು ಮಾಡಿದ ಭಕ್ತನೊಬ್ಬನಲ್ಲದೆ ಉಳಿದ ಪ್ರಪಂಚವೆಲ್ಲವೂ ಆ ಮಾಯೆಯಿಂದ ಆವೃತವಾಗಿದೆ.

೨೬. ನಾರದನೂ ಸಹ ಈಶ್ವರಾನುಗ್ರಹದಿಂದ ಅಲ್ಲಿಯೇ ಬಹಳಕಾಲ ಇದ್ದನು. ಆಮೇಲೆ ತನ್ನ ತಪಸ್ಸು ಸಂಪೂರ್ಣವಾಯಿತೆಂದು ತಿಳಿದು, ಅಲ್ಲಿಂದ ಹೊರಟುಹೋದನು.

೨೭. ಶಿವಮಾಯೆಯಿಂದ ಮೋಹಿತನಾದ ಆ ನಾರದನು, ವಿವೇಕಶೂನ್ಯನಾಗಿ, ಮನ್ಮಥನು ಸೋತುಹೋದುದು ತನ್ನ ಮಹಿಮೆಯಿಂದಲೇ ಎಂದು ತಿಳಿದು ವ್ಯರ್ಥನಾಗಿ ಅಹಂಕಾರಪಟ್ಟನು.

೨೮. ಎಲೈ ಮುನಿಶ್ರೇಷ್ಠರೇ, ಶಿವನಮಾಯೆಯೇ ಧನ್ಯವಾದುದು. ವಿಷ್ಣು, ಬ್ರಹ್ಮ ಮೊದಲಾದವರೂ ಸಹ ಅದರ ರೀತಿಯನ್ನು ತಿಳಿಯಲಾರರು.

ತಯಾ ಸಂಮೋಹಿತೋऽತೀವ ನಾರದೋ ಮುನಿಸತ್ತಮಃ ।
ಕೈಲಾಸಂ ಪ್ರಯಯೌ ಶೀಘ್ರಂ ಸ್ವವೃತ್ತಂ ಗದಿತುಂ ಮದೀ ॥ ೨೯ ॥

ರುದ್ರಂ ನತ್ವಾಬ್ರವೀತ್ಸರ್ವಂ ಸ್ವವೃತ್ತಂ ಗರ್ವವಾನ್ ಮುನಿಃ ।
ಮತ್ವಾತ್ಮಾನಂ ಮಹಾತ್ಮಾನಂ ಸ್ವಪ್ರಭುಂ ಚ ಸ್ಮರಞ್ಜಯಂ ॥ ೩೦ ॥

ತಚ್ಛ್ರುತ್ವಾ ಶಂಕರಃ ಪ್ರಾಹ ನಾರದಂ ಭಕ್ತವತ್ಸಲಃ ।
ಸ್ವಮಾಯಾಮೋಹಿತಂ ಹೇತ್ವನಭಿಜ್ಞಂ ಭ್ರಷ್ಟಚೇತಸಂ ॥ ೩೧ ॥

॥ ರುದ್ರ ಉವಾಚ ॥

ಹೇ ತಾತ ನಾರದ ಪ್ರಾಜ್ಞ ಧನ್ಯಸ್ತ್ವಂ ಶೃಣು ಮದ್ವಚಃ ।
ವಾಚ್ಯಮೇವಂ ನ ಕುತ್ರಾಪಿ ಹರೇರಗ್ರೇ ವಿಶೇಷತಃ ॥ ೩೨ ॥

ಪೃಚ್ಛ್ಯಮಾನೋऽಪಿ ನ ಬ್ರೂಯಾಃ ಸ್ವವೃತ್ತಂ ಮೇ ಯದುಕ್ತವಾನ್ ।
ಗೋಪ್ಯಂ ಗೋಪ್ಯಂ ಸರ್ವಥಾ ಹಿ ನೈವ ವಾಚ್ಯಂ ಕದಾಚನ ॥ ೩೩ ॥

---

೨೯. ಮುನಿಶ್ರೇಷ್ಠನಾದ ಆ ನಾರದನು ಆ ಮಾಯೆಯಿಂದ ಮೋಹಿಸಲ್ಪಟ್ಟವನಾಗಿ, ಮದಾಂಧತೆಯಿಂದ ತನ್ನ ವೃತ್ತಾಂತವನ್ನು ಹೇಳಬೇಕೆಂದು, ಬೇಗನೆ ಕೈಲಾಸಕ್ಕೆ ಹೊರಟನು.

೩೦. ತಾನು ಮಹಾತ್ಮನೆಂದೂ, ತನ್ನ ಪ್ರಭಾವದಿಂದಲೇ ಮನ್ಮಥನು ಸೋತು ಓಡಿದನೆಂದೂ, ಗರ್ವಿಷ್ಠನಾದ ನಾರದನು, ತಿಳಿದು ಶಿವನನ್ನು ನಮಸ್ಕರಿಸಿ, ಎಲ್ಲವನ್ನೂ ಹೇಳಿದನು.

೩೧. ಅದನ್ನು ಕೇಳಿ ಭಕ್ತವತ್ಸಲನಾದ ಶಂಕರನು, ತನ್ನ ಮಾಯೆಯಿಂದ ಮೋಹಿತನಾಗಿ, ಕಾರಣತಿಳಿಯದೆ, ಬುದ್ಧಿವೈಕಲ್ಯದಿಂದ ಹರಟುತ್ತಿರುವ ಆ ನಾರದನನ್ನು ಕುರಿತು ಇಂತೆಂದನು.

೩೨. ಅಪ್ಪ, ನಾರದ, ನೀನು ಧನ್ಯನೇಸರಿ. ನನ್ನ ಮಾತನ್ನು ಕೇಳು. ಎಲ್ಲಿಯೂ ಈರೀತಿ ಹೇಳಬೇಡ. ಅದರಲ್ಲೂ ವಿಷ್ಣುವಿನ ಮುಂದೆ ಈ ಮಾತೆತ್ತಬೇಡ.

೩೩. ಅವನು ಕೇಳಿದರೂ ಕೂಡ, ನನ್ನಮುಂದೆ ಹೇಳಿದ ಈ ನಿನ್ನ ಸುದ್ದಿಯನ್ನು ತಿಳಿಸಬೇಡ ಅದು ಗುಟ್ಟಾಗಿರಲಿ. ಸರ್ವಥಾ ಗುಟ್ಟಾಗಿರಲಿ, ಯಾವಾಗಲೂ ಬಾಯಿಬಿಡಬೇಡ.

ಶಾಸ್ಮ್ಯಹಂ ತ್ವಾಂ ವಿಶೇಷೇಣ ಮಮ ಪ್ರಿಯತಮೋ ಭವಾನ್ ।
ವಿಷ್ಣುಭಕ್ತೋ ಯತಸ್ತ್ವಂ ಹಿ ತದ್ಭಕ್ತೋಽತೀವ ಮೇಽನುಗಃ • ॥ ೩೪ ॥

ಶಾಸ್ತಿ ಸ್ಮೇತ್ಥಂ ಚ ಬಹುಶೋ ರುದ್ರಸ್ಸೃಷ್ಟಿಕರಃ ಪ್ರಭುಃ ।
ನಾರದೋ ನ ಹಿತಂ ಮೇನೇ ಶಿವಮಾಯಾವಿಮೋಹಿತಃ ॥ ೩೫ ॥

ಪ್ರಬಲಾ ಭಾವಿನೀ ಕರ್ಮಗತಿರ್ಜ್ಞೇಯಾ ವಿಚಕ್ಷಣೈಃ ।
ನ ನಿವಾರ್ಯಾ ಜನೈಃ ಕೈಶ್ಚಿದಪೀಚ್ಛಾ ಸೈವ ಶಾಂಕರೀ ॥ ೩೬ ॥

ತತಸ್ಸ ಮುನಿವರ್ಯೋ ಹಿ ಬ್ರಹ್ಮಲೋಕಂ ಜಗಾಮ ಹ ।
ವಿಧಿಂ ನತ್ವಾಬ್ರವೀತ್ಕಾಮಜಯಂ ಸ್ವಸ್ಯ ತಪೋಬಲಾತ್ ॥ ೩೭ ॥

ತದಾಕರ್ಣ್ಯ ವಿಧಿಸ್ಸೋಽಥ ಸ್ಮೃತ್ವಾ ಶಂಭುಪದಾಂಬುಜಂ ।
ಜ್ಞಾತ್ವಾ ಸರ್ವಂ ಕಾರಣಂ ತನ್ನಿಷಿಷೇಧ ಸುತಂ ತದಾ ॥ ೩೮ ॥

---

೩೪. ಆಗ್ರಹಪೂರ್ವಕವಾಗಿ ಹೇಳುತ್ತೇನೆ ನೀನು ನನಗೆ ಬಹಳ ಬೇಕಾದವನು. ನೀನು ವಿಷ್ಣುಭಕ್ತನಷ್ಟೆ. ವಿಷ್ಣುಭಕ್ತನು ನನಗೆ ವಿಶೇಷ ಪ್ರೀತಿಪಾತ್ರನು.

೩೫. ಸೃಷ್ಟಿಕರ್ತನೂ ಪ್ರಭುವೂ ಆದ ಶಿವನು ಈರೀತಿ ಬಹುವಿಧವಾಗಿ ಬುದ್ಧಿ ಹೇಳಿದನು. ಆದರೇನು? ಶಿವಮಾಯಾಮೋಹಿತನಾದ ನಾರದನು ಇದನ್ನು ಹಿತವೆಂದು ತಿಳಿಯಲಿಲ್ಲ.

೩೬. ಈ ಕರ್ಮಗತಿಯು ಪ್ರಬಲವಾದುವೆಂದು ತಿಳಿದವರು ಅರಿಯಬೇಕು. ಶಿವನ ಆ ಇಚ್ಛೆಯನ್ನು ಯಾರೂ ಮೀರಲಾರರು.

೩೭. ಅಮೇಲೆ ಆ ಮುನಿಶ್ರೇಷ್ಠನು ಬ್ರಹ್ಮಲೋಕಕ್ಕೆ ಹೋದನು. ಅಲ್ಲಿ ಬ್ರಹ್ಮನನ್ನು ನಮಸ್ಕರಿಸಿ, ತನ್ನ ತಪಶ್ಶಕ್ತಿಯಿಂದ ಮನ್ಮಥನನ್ನು ಜಯಿಸಿದ ವೃತ್ತಾಂತವನ್ನು ತಿಳಿಸಿದನು.

೩೮. ಅನಂತರ ಆ ಬ್ರಹ್ಮನು ಅದನ್ನು ಕೇಳಿ, ಶಿವನ ಪಾದಕಮಲವನ್ನು ನೆನೆದು, ಅದರ ಕಾರಣವೆಲ್ಲವನ್ನೂ ಅರಿತು, ಮಗನನ್ನು ಬೇಡವೆಂದು ತಡೆದನು.

**ಮೇನೇ ಹಿತಂ ನ ವಿಧ್ಯುಕ್ತಂ ನಾರದೋ ಜ್ಞಾನಿಸತ್ತಮಃ ।**
**ಶಿವಮಾಯಾಮೋಹಿತಶ್ಚ ರೂಢಚಿತ್ತಮದಾಂಕುರಃ ॥ ೩೯ ॥**

**ಶಿವೇಚ್ಛಾ ತಯಾದೃಶೀ ಲೋಕೇ ಭವತ್ಯೇವ ಹಿ ಸಾ ದಾ ।**
**ತದಧೀನಂ ಜಗತ್ಸರ್ವಂ ವಚಸ್ತಂತ್ಯಾಂ ಸ್ಥಿತಂ ಯತಃ ॥ ೪೦ ॥**

**ನಾರದೋಽಥ ಯಯೌ ಶೀಘ್ರಂ ವಿಷ್ಣುಲೋಕಂ ವಿನಷ್ಟಧೀಃ ।**
**ಮದಾಂಕುರಮನಾ ವೃತ್ತಂ ಗದಿತುಂ ಸ್ವಂ ತದಗ್ರತಃ ॥ ೪೧ ॥**

**ಆಗಚ್ಛಂತಂ ಮುನಿಂ ದೃಷ್ಟ್ವಾ ನಾರದಂ ವಿಷ್ಣುರಾದರಾತ್ ।**
**ಉತ್ಥಿತ್ವಾಗ್ರೇ ಗತೋಽರಂ ತಂ ಶಿಶ್ಲೇಷ ಜ್ಞಾತಹೇತುಕಃ ॥ ೪೨ ॥**

**ಸ್ವಾಸನೇ ಸಮುಪಾವೇಶ್ಯ ಸ್ಮೃತ್ವಾ ಶಿವಪದಾಂಬುಜಂ ॥**
**ಹರಿಃ ಪ್ರಾಹ ವಚಸ್ತಥ್ಯಂ ನಾರದಂ ಮದನಾಶನಂ ॥ ೪೩ ॥**

---

೩೯. ಜ್ಞಾನಿಗಳಲ್ಲಿ ಅಗ್ರೇಸರನಾದ ಆ ನಾರದನೂ, ಶಿವನ ಮಾಯಾಪಾಶಕ್ಕೆ ಸಿಲುಕಿ, ಅಹಂಕಾರದಿಂದ ಕೂಡಿದ ಮನಸ್ಸುಳ್ಳವನಾಗಿ, ಬ್ರಹ್ಮನ ಮಾತನ್ನು ಹಿತ ವೆಂದು ಎಣಿಸಲಿಲ್ಲ.

೪೦. ಶಿವನ ಇಚ್ಛೆಯು ಯಾವರೀತಿ ಇರುವುದೋ ಪ್ರಪಂಚದಲ್ಲಿ ಅದೇ ರೀತಿಯಾಗುವುದು. ಅದಕ್ಕೆ ಅಧೀನವಾಗಿ ಈ ಜಗತ್ತೆಲ್ಲವೂ ಅದರ ಮಾತಿನ ಮೇಲೆ ನಿಂತಿದೆ.

೪೧. ಅನಂತರ ಬುದ್ಧಿಹೀನನಾದ ನಾರದನು, ಅಹಂಭಾವದಿಂದ ಮತ್ತೇರಿದ ಮನಸ್ಸುಳ್ಳವನಾಗಿ ವಿಷ್ಣುವಿನ ಮುಂದೆ ತನ್ನ ವೃತ್ತಾಂತವನ್ನು ಹೇಳಿಕೊಳ್ಳಲು ತ್ವರಿತನಾಗಿ ವೈಕುಂಠಕ್ಕೆ ತೆರಳಿದನು.

೪೨. ಇದೆಲ್ಲವನ್ನೂ ಮೊದಲೇ ಜ್ಞಾನದೃಷ್ಟಿಯಿಂದ ಅರಿತ ಶ್ರೀಮನ್ನಾರಾಯಣನು, ತನ್ನ ಬಳಿಗೆ ಬರುತ್ತಿರುವ ಆ ನಾರದಮಹರ್ಷಿಯನ್ನು ಕಂಡು, ಆದರದಿಂದ ಥಟ್ಟನೆ ಎದ್ದು, ಅವನನ್ನು ಆಲಂಗಿಸಿ

೪೩. ಆ ನಾರದನನ್ನು ತನ್ನ ಪೀಠದಲ್ಲೇ ಕೂರಿಸಿಕೊಂಡು, ಶಿವನ ಪಾದಾರವಿಂದಗಳನ್ನು ನೆನೆದು, ಅಹಂಕಾರವನ್ನು ನಾಶಮಾಡುವ ಯಥಾರ್ಥವಾದ ಮಾತನ್ನು ಹೇಳಿದನು.

॥ ವಿಷ್ಣುರುವಾಚ ॥

ಕುತ ಆಗಮ್ಯತೇ ತಾತ ಕಿಮರ್ಥಮಿಹ ಚಾಗತಃ ।
ಧನ್ಯಸ್ತ್ವಂ ಮುನಿಶಾರ್ದೂಲ ತೀರ್ಥೋಽಹಂ ತು ತವಾಗಮಾತ್ ॥ ೪೪ ॥

ವಿಷ್ಣುವಾಕ್ಯಮಿತಿ ಶ್ರುತ್ವಾ ನಾರದೋ ಗರ್ವಿತೋ ಮುನಿಃ ।
ಸ್ವವೃತ್ತಂ ಸರ್ವಮಾಚಷ್ಟ ಸಮದಂ ಮದಮೋಹಿತಃ ॥ ೪೫ ॥

ಶ್ರುತ್ವಾ ಮುನಿವಚೋ ವಿಷ್ಣುಃ ಸಮದಂ ಕಾರಣಂ ತತಃ ।
ಜ್ಞಾತವಾನಖಿಲಂ ಸ್ಮೃತ್ವಾ ಶಿವಪಾದಾಂಬುಜಂ ಹೃದಿ ॥ ೪೬ ॥

ತುಷ್ಟಾವ ಗಿರಿಶಂ ಭಕ್ತ್ಯಾ ಶಿವಾತ್ಮಾ ಶೈವರಾಡ್ಧರಿಃ ।
ಸಾಂಜಲಿರ್ವಿಸುಧೀರ್ನಮ್ರಮಸ್ತಕಃ ಪರಮೇಶ್ವರಂ ॥ ೪೭ ॥

॥ ವಿಷ್ಣುರುವಾಚ ॥

ದೇವ ದೇವ ಮಹಾದೇವ ಪ್ರಸೀದ ಪರಮೇಶ್ವರ ।
ಧನ್ಯಸ್ತ್ವಂ ಶಿವ ಧನ್ಯಾ ತೇ ಮಾಯಾ ಸರ್ವವಿಮೋಹಿನೀ ॥ ೪೮ ॥

---

೪೪. ಅಪ್ಪಾ, ನಾರದಾ! ನೀನೆಲ್ಲಿಂದ ಬಂದೆ? ಏತಕ್ಕೆ ಬಂದೆ? ಓ ಮುನಿಸತ್ತಮಾ? ನೀನು ಧನ್ಯ, ನೀನು ಇಲ್ಲಿಗೆ ದಯಮಾಡಿಸಿದುದರಿಂದ ನಾನು ಪವಿತ್ರನಾದೆನು ಎನ್ನಲು,

೪೫. ಇಂತು ನುಡಿದ ವಿಷ್ಣುವಿನ ಮಾತನ್ನು ಕೇಳಿ ಗರ್ವಿತನಾದ ನಾರದ ಮಹರ್ಷಿಯು ಹೆಮ್ಮೆಯಿಂದ ಮೈಮರೆತು ತನ್ನೆಲ್ಲಾ ವೃತ್ತಾಂತವನ್ನೂ ಹೇಳಿದನು.

೪೬. ಅಹಂಕಾರದಿಂದ ಕೂಡಿದ ಆ ನಾರದನ ಮಾತನ್ನು ಕೇಳಿ ವಿಷ್ಣುವು ಹೃದಯದಲ್ಲಿ ಶಿವನ ಅಡಿದಾವರೆಗಳನ್ನು ನೆನೆದು ಆರೀತಿ ನಡೆದುದಕ್ಕೆ ಕಾರಣವೆಲ್ಲವನ್ನೂ ಅರಿತನು.

೪೭. ಶಿವಸ್ವರೂಪನಾಗಿಯೂ, ಶೈವಾಗ್ರಣಿಯಾಗಿಯೂ ಆದ ಆ ಹರಿಯು, ಭಕ್ತಿಯಿಂದ ಮುಕುಲಿತಹಸ್ತನಾಗಿ ತಲೆಯನ್ನು ತಗ್ಗಿಸಿ, ಪರಮೇಶ್ವರನನ್ನು ಧ್ಯಾನಿಸಿದನು.

೪೮. ಓ ದೇವ! ಓ ಮಹದೇವ! ಓ ಪರಮೇಶ್ವರ! ಪ್ರಸನ್ನನಾಗು. ಓ ಮಂಗಲಸ್ವರೂಪ! ನೀನು ಧನ್ಯ. ಎಲ್ಲರನ್ನೂ ಮರುಳುಗೊಳಿಸುವ ನಿನ್ನ ಮಾಯೆಯೂ ಧನ್ಯವಾದುದೇ.

ಇತ್ಯಾದಿ ಸ ಸ್ತುತಿಂ ಕೃತ್ವಾ ಶಿವಸ್ಯ ಪರಮಾತ್ಮನಃ ।
ನಿಮೀಲ್ಯ ನಯನೇ ಧ್ಯಾತ್ವಾ ವಿರರಾಮ ಪದಾಂಬುಜಂ ॥ ೪೯ ॥

ಯತ್ಕರ್ತವ್ಯಂ ಶಂಕರಸ್ಯ ಸ ಜ್ಞಾತ್ವಾ ವಿಶ್ವಪಾಲಕಃ ।
ಶಿವಶಾಸನತಃ ಪ್ರಾಹ ಹೃದಾಥ ಮುನಿಸತ್ತಮಂ ॥ ೫೦ ॥

॥ ವಿಷ್ಣುರುವಾಚ ॥

ಧನ್ಯಸ್ತ್ವಂ ಮುನಿಶಾರ್ದೂಲ ತಪೋನಿಧಿರುದಾರಧೀಃ ।
ಭಕ್ತಿತ್ರಿಕಂ ನ ಯಸ್ಯಾಸ್ತಿ ಕಾಮಮೋಹಾದಯೋ ಮುನೇ ॥ ೫೧ ॥

ವಿಕಾರಾಸ್ತಸ್ಯ ಸದ್ಯೋ ವೈ ಭವಂತ್ಯಖಿಲದುಃಖದಾಃ ।
ನೈಷ್ಠಿಕೋ ಬ್ರಹ್ಮಚಾರೀ ತ್ವಂ ಜ್ಞಾನವೈರಾಗ್ಯವಾನ್ಸದಾ ॥ ೫೨ ॥

ಕಥಂ ಕಾಮವಿಕಾರೀ ಸ್ಯಾ ಜನ್ಮನಾ್ಯವಿಕೃತಸ್ಸುಧೀಃ ।
ಇತ್ಯಾದ್ಯುಕ್ತಂ ವಚೋ ಭೂರಿ ಶ್ರುತ್ವಾ ಸ ಮುನಿಸತ್ತಮಃ ॥ ೫೩ ॥

---

೪೯. ಇಂತುಮೊದಲಾಗಿ ಆ ಹರಿಯು ಪರಮಾತ್ಮನಾದ ಶಿವನನ್ನು ಸ್ತೋತ್ರ ಮಾಡಿ, ಕಣ್ಣುಮುಚ್ಚಿ, ಆತನ ಪಾದಕಮಲವನ್ನು ಸ್ಮರಿಸಿ ಸುಮ್ಮನಾದನು.

೫೦. ಪ್ರಪಂಚವನ್ನು ಪಾಲಿಸುವ ಆ ಹರಿಯು ಶಿವನ ಕಾರ್ಯವೇನೆಂದು ಅರಿತು, ಶಿವನ ಅಪ್ಪಣೆಯಂತೆ ಮಮತೆಯಿಂದ ಆ ನಾರದನನ್ನು ಕುರಿತು,

೫೧. ಓ ಮುನಿಸತ್ತಮ! ನೀನು ಬಹು ಬುದ್ಧಿಶಾಲಿಯು. ಧನ್ಯನು. ಯಾವನಿಗೆ, ಭಕ್ತಿ, ಜ್ಞಾನ, ವೈರಾಗ್ಯಗಳು ಇಲ್ಲವೋ, ಆ ಮನುಷ್ಯನನ್ನು ಎಲ್ಲ ದುಃಖಗಳನ್ನೂ ಉಂಟುಮಾಡತಕ್ಕ ಕಾಮಮೋಹಾದಿ ವಿಕಾರಗಳು ಒಡನೆಯೇ ಪೀಡಿಸುವುವು.

೫೨ ಹುಟ್ಟಿದಾಗಿನಿಂದಲೂ ವಿಕಾರರಹಿತನಾದ, ನೈಷ್ಠಿಕಬ್ರಹ್ಮಚಾರಿಯಾದ ನೀನು, ಯಾವಾಗಲೂ ಜ್ಞಾನವೈರಾಗ್ಯಗಳನ್ನು ಹೊಂದಿರುವೆ. ಇಂಥವನಿಗೆ ಕಾಮ ವಿಕಾರವೆಲ್ಲಿಯದು?

೫೩. ಹೀಗೆ ಮೊದಲಾಗಿ ಹೇಳಿದ ಅನೇಕವಾದ ಹಿತನುಡಿಗಳನ್ನು ಕೇಳಿ ಆ ಮಹರ್ಷಿಯು ಮನಸ್ಸಿನಲ್ಲಿಯೇ ನಕ್ಕು ಶ್ರೀಹರಿಯನ್ನು ಕುರಿತು ಹೇಳಿದನು.

ವಿಜಹಾಸ ಹೃದಾ ನತ್ವಾ ಪ್ರತ್ಯುವಾಚ ತತೋ ಹರಿಂ ।
॥ ನಾರದಉವಾಚ ॥
ಕಿಂ ಪ್ರಭಾವಸ್ಸ್ಮರಸ್ಸ್ವಾಮಿನ್ ಕೃಪಾ ಯದ್ಯಸ್ತಿ ತೇ ಮಯಿ ॥ ೫೪ ॥

ಇತ್ಯುಕ್ತ್ವಾ ಹರಿಮಾನಮ್ಯ ಯಯೌ ಯಾದೃಚ್ಛಿಕೋ ಮುನಿಃ ॥ ೫೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ನಾರದತಪೋವರ್ಣನಂ
ನಾಮ ದ್ವಿತಿಯೋಽಧ್ಯಾಯಃ



೫೪-೫೫. ನನ್ನ ಮೇಲೆ ನಿನಗೆ ಅನುಗ್ರಹವಿರುವ ಪಕ್ಷದಲ್ಲಿ ಆ ಮನ್ಮಥನು ಎಂತಹ ಪ್ರಭಾವವುಳ್ಳವನು? ಎಂಬುದನ್ನು ತಿಳಿಸು ಎಂದು ನುಡಿದು, ಶ್ರೀಹರಿಯನ್ನು ನಮಸ್ಕರಿಸಿ ಸ್ವೇಚ್ಛಾಸಂಚಾರಿಯಾದ ಆ ಮುನಿಯು ಹೊರಟುಹೋದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಮುನಿಪ್ರಶ್ನವರ್ಣನವೆಂಬ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಸೃಷ್ಟಿಖಂಡೇ
## ತೃತೀಯೋಽಧ್ಯಾಯಃ

॥ ಋಷಯ ಊಚುಃ ॥

**ಸೂತ ಸೂತ ಮಹಾಭಾಗ ವ್ಯಾಸಶಿಷ್ಯ ನಮೋಽಸ್ತು ತೇ ।**
**ಅದ್ಭುತೇಯಂ ಕಥಾ ತಾತ ವರ್ಣಿತಾ ಕೃಪಯಾ ಹಿ ನಃ ॥ ೧ ॥**

**ಮುನೌ ಗತೇ ಹರಿಸ್ತಾತ ಕಿಂ ಚಕಾರ ತತಃ ಪರಂ ।**
**ನಾರದೋಽಪಿ ಗತಃ ಕುತ್ರ ತನ್ಮೇ ವ್ಯಾಖ್ಯಾತುಮರ್ಹಸಿ ॥ ೨ ॥**

---

## ಮೂರನೆಯ ಅಧ್ಯಾಯವು

೧. ಶೌನಕಾದಿಗಳು ಕೇಳಿದರು. ಓ ಸೂತ! ನೀನು ಮಹಾನುಭಾವನು ವ್ಯಾಸಶಿಷ್ಯನು ನಿನಗೆ ನಮಸ್ಕಾರವು. ದಯೆಯಿಟ್ಟು ನಮಗೆಲ್ಲರಿಗೂ, ಅದ್ಭುತವಾದ ಈ ಕಥೆಯನ್ನು ವರ್ಣಿಸಿದೆ.

೨. ನಾರದನು ಹೊರಟುಹೋದನಮೇಲೆ, ಶ್ರೀಹರಿಯು ಏನುಮಾಡಿದನು? ಆ ನಾರದನೂ ವೈಕುಂಠದಿಂದ ಎಲ್ಲಿಗೆ ತೆರಳಿದನು? ಅದನ್ನು ನೀನು ನಮಗೆ ತಿಳಿಸಬೇಕು ಎಂದರು

॥ ವ್ಯಾಸಉವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಸೂತಃ ಪೌರಾಣಿಕೋತ್ತಮಃ ।
ಪ್ರತ್ಯುವಾಚ ಶಿವಂ ಸ್ಮೃತ್ವಾ ನಾನಾಸೂತಿಕರಂ ಬುಧಃ ॥ ೩ ॥

॥ ಸೂತ ಉವಾಚ ॥

ಮುನೌ ಯದೃಚ್ಛಯಾ ವಿಷ್ಣುರ್ಗತೇ ತಸ್ಮಿನ್ ಹಿ ನಾರದೇ ।
ಶಿವೇಚ್ಛಯಾ ಚಕಾರಾಶು ಮಾಯಾಂ ಮಾಯಾವಿಶಾರದಃ ॥ ೪ ॥

ಮುನಿಮಾರ್ಗಸ್ಯ ಮಧ್ಯೇ ತು ವಿರೇಚೇ ನಗರಂ ಮಹತ್ ।
ಶತಯೋಜನವಿಸ್ತಾರಮದ್ಭುತಂ ಸುಮನೋಹರಂ ॥ ೫ ॥

ಸ್ವಲೋಕಾದಧಿಕಂ ರಮ್ಯಂ ನಾನಾವಸ್ತುವಿರಾಜಿತಂ ।
ನರನಾರೀವಿಹಾರಾಢ್ಯಂ ಚತುರ್ವರ್ಣಾಕುಲಂ ಪರಂ ॥ ೬ ॥

---

೩. ವ್ಯಾಸನು ಹೇಳಿದನು:—ಹೀಗೆ ಆ ಮುನಿಗಳು ನುಡಿದ ಮಾತನ್ನು ಕೇಳಿ ಪೌರಾಣಿಕಾಗ್ರಣಿಯಾದ ಆ ಸೂತನು ನಾನಾ ಸೃಷ್ಟಿಗಳನ್ನುಂಟುಮಾಡುವ ಶಿವನನ್ನು ನೆನೆದು ಆ ಮುನಿಗಳಿಗಿಂತೆಂದನು.

೪. ಆ ನಾರದ ಮಹರ್ಷಿಯು ತನ್ನಿಷ್ಟಬಂದೆಡೆಗೆ ಹೊರಟುಹೋಗಲು, ಮಾಯಾಕುಶಲನಾದ ಆ ಹರಿಯು ಶಿವನ ಇಚ್ಛೆಯಂತೆ ಒಂದು ಮಾಯವನ್ನು ಮಾಡಿದನು.

೫. ಆ ನಾರದನು ಹೋಗುತ್ತಿರುವ ದಾರಿಯನಡುವೆ, ನೂರು ಯೋಜನಗಳಷ್ಟು ವಿಸ್ತಾರವಾಗಿರುವ, ಅದ್ಭುತವೂ ಸುಂದರವೂ ಆದ, ಒಂದು ದೊಡ್ಡ ಪಟ್ಟಣವನ್ನು ನಿರ್ಮಿಸಿದನು.

೬. ಆ ನಗರವು, ತನ್ನ ವಾಸವಾದ ವೈಕುಂಠಲೋಕಕ್ಕಿಂತಲೂ ಹೆಚ್ಚು ಸುಂದರವಾಗಿತ್ತು. ಎಲ್ಲಿ ನೋಡಿದರೂ ನಾನಾ ವಿಧವಾದ ಪದಾರ್ಥಗಳು ಕಂಗೊಳಿಸುತ್ತಿದ್ದುವು. ಸ್ತ್ರೀಪುರುಷರು ವಿಹರಿಸುತ್ತಿದ್ದರು. ಬ್ರಾಹ್ಮಣಾದಿ ನಾಲ್ಕು ವರ್ಗದವರು ಅಲ್ಲಿ ನಿಬಿಡವಾಗಿದ್ದರು.

ತತ್ರ ರಾಜಾ ಶೀಲನಿಧಿರ್ನಾಮ್ನೈಶ್ವರ್ಯಸಮನ್ವಿತಃ ।
ಸುತಾಸ್ವಯಂವರೋದ್ಯುಕ್ತೋ ಮಹೋತ್ಸವಸಮನ್ವಿತಃ ॥ ೭ ॥

ಚತುರ್ದಿಗ್ಭ್ಯಸ್ಸಮಾಯಾತೈಃ ಸಂಯುತಂ ನೃಪನಂದನೈಃ ।
ನಾನಾವೇಷೈಸ್ಸುಶೋಭೈಶ್ಚ ತತ್ಕನ್ಯಾವರಣೋತ್ಸುಕೈಃ ॥ ೮ ॥

ಏತಾದೃಶಂ ಪುರಂ ದೃಷ್ಟ್ವಾ ಮೋಹಂ ಪ್ರಾಪ್ತೋಽಥ ನಾರದಃ ।
ಕೌತುಕೀ ತನ್ನೃಪದ್ವಾರಂ ಜಗಾಮ ಮದನೈಧಿತಃ ॥ ೯ ॥

ಆಗತಂ ಮುನಿವರ್ಯಂ ತಂ ದೃಷ್ಟ್ವಾ ಶೀಲನಿಧಿರ್ನೃಪಃ ।
ಉಪವೇಶ್ಯಾರ್ಚಯಾಂಚಕ್ರೇ ರತ್ನಸಿಂಹಾಸನೇ ವರೇ ॥ ೧೦ ॥

ಅಥ ರಾಜಾ ಸ್ವತನಯಾಂ ನಾಮತಶ್ಶ್ರೀಮತೀಂ ವರಾಂ ।
ಸಮಾನೀಯ ನಾರದಸ್ಯ ಪಾದಯೋಸ್ಸಮಪಾತಯತ್ ॥ ೧೧ ॥

---

೭. ಆ ಊರಿನಲ್ಲಿ, ಶೀಲನಿಧಿಯೆಂಬ ಐಶ್ವರ್ಯವಂತನಾದ ದೊರೆಯು, ತನ್ನ ಮಗಳಿಗೆ ಸ್ವಯಂವರವನ್ನು ಮಾಡಬೇಕೆಂದು ಉಜ್ಜುಗಿಸಿ, ಮಹೋತ್ಸವಗಳಲ್ಲಿ ತೊಡಗಿದ್ದನು.

೮-೯. ಆ ಕನ್ಯೆಯನ್ನು ವರಿಸಬೇಕೆಂಬ, ಉತ್ಸುಕತೆಯಿಂದ, ನಾನಾಭರಣ ಭೂಷಿತರಾಗಿ, ಒಳ್ಳೆಯ ಕಾಂತಿಯಿಂದ ಬೆಳಗುತ್ತಾ, ನಾಲ್ಕು ಕಡೆಗಳಿಂದಲೂ ಬಂದ ರಾಜಕುಮಾರರಿಂದ ತುಂಬಿಹೋಗಿರುವ ಆ ಊರನ್ನು ನೋಡಿ, ಮೋಹಾವಿಷ್ಟನಾದ ಆ ನಾರದನು ಮನ್ಮಥೋದ್ರೇಕದಿಂದ, ಅರಮನೆಯ ಬಳಿಗೆ ಕುತೂಹಲದೊಡನೆ ಹೋದನು.

೧೦. ಮುನಿಶ್ರೇಷ್ಠನಾದ ಆ ನಾರದನು ಬಂದುದನ್ನು ಕಂಡು ರಾಜನಾದ ಶೀಲನಿಧಿಯು ಉತ್ತಮವಾದ ರತ್ನಸಿಂಹಾಸನವೊಂದರಲ್ಲಿ ಅವನನ್ನು ಕುಳ್ಳಿರಿಸಿ ಪೂಜೆ ಮಾಡಿದನು.

೧೧. ಬಳಿಕ ರಾಜನು ಶ್ರೀಮತಿಯೆಂಬ ತನ್ನ ಮಗಳನ್ನು ಕರೆದುಕೊಂಡು ಬಂದು ನಾರದನ ಕಾಲುಗಳಿಗೆ ನಮಸ್ಕಾರಮಾಡಿಸಿದನು.

ತತ್ಕನ್ಯಾಂಪ್ರೇಕ್ಷ್ಯ ಸ ಮುನಿರ್ನಾರದಃ ಪ್ರಾಹ ವಿಸ್ಮಿತಃ ।
ಕೇಯಂ ರಾಜನ್ ಮಹಾಭಾಗಾ ಕನ್ಯಾ ಸುರಸುತೋಪಮಾ ॥ ೧೨ ॥

ತಸ್ಯ ತದ್ವಚನಂ ಶ್ರುತ್ವಾ ರಾಜಾ ಪ್ರಾಹ ಕೃತಾಂಜಲಿಃ ।
ದುಹಿತೇಯಂ ಮಮ ಮುನೇ ಶ್ರೀಮತೀ ನಾಮ ನಾಮತಃ ॥ ೧೩ ॥

ಪ್ರದಾನಸಮಯಂ ಪ್ರಾಪ್ತಾ ವರಮನ್ವೇಷತೀ ಶುಭಂ ।
ಸಾ ಸ್ವಯಂವರಸಂಪ್ರಾಪ್ತಾ ಸರ್ವಲಕ್ಷಣಲಕ್ಷಿತಾ ॥ ೧೪ ॥

ಅಸ್ಯಾ ಭಾಗ್ಯಂ ವದ ಮುನೇ ಸರ್ವಂ ಜಾತಕಮಾದರಾತ್ ।
ಕೀದೃಶಂ ತನಯೇಯಂ ಮೇ ವರಮಾಪ್ಸ್ಯತಿ ತದ್ವದ ॥ ೧೫ ॥

ಇತ್ಯುಕ್ತೋ ಮುನಿಶಾರ್ದೂಲಸ್ತಾಮಿಚ್ಛುಃ ಕಾಮವಿಹ್ವಲಃ ।
ಸಮಾಭಾಷ್ಯ ಸ ರಾಜಾನಂ ನಾರದೋ ವಾಕ್ಯಮಬ್ರವೀತ್ ॥ ೧೬ ॥

---

೧೨. ಆ ಹುಡುಗಿಯನ್ನು ಕಂಡು ನಾರದಮುನಿಯು ವಿಸ್ಮಯಗೊಂಡು, ಎಲೈ ರಾಜನೇ, ದೇವಕನ್ಯೆಯಂತೆ ಸುಂದರಿಯೂ ಮಹಾಭಾಗ್ಯಶಾಲಿನಿಯೂ ಆದ ಈ ಕನ್ಯೆ ಯಾರು ಎಂದನು.

೧೩—೧೫. ಆ ಮಾತನ್ನು ಕೇಳಿ ರಾಜನು ಕೈಜೋಡಿಸಿಕೊಂಡು, ಓ ಮುನೀಂದ್ರ! ಇವಳು ನನ್ನ ಮಗಳು. ಹೆಸರು ಶ್ರೀಮತಿ. ಇವಳು ಮದುವೆಯಾಗಲು ತಕ್ಕ ವಯಸ್ಸನ್ನು ಹೊಂದಿದಾಳೆ. ಆದುದರಿಂದ ಸರ್ವಲಕ್ಷಣಸಂಪನ್ನಳಾದ ಈಕೆಯು ತನಗೆ ಅನುರೂಪನಾದ ವರನನ್ನು ವರಿಸಲು ಸ್ವಯಂವರವನ್ನು ಕೈಗೊಂಡಿದ್ದಾಳೆ. ಇವಳ ಜಾತಕಲಕ್ಷಣವನ್ನು ನೋಡಿ, ಭಾಗ್ಯವೆಂಥದೆಂಬುವುದನ್ನು ತಿಳಿಸುವುದಲ್ಲದೆ ಎಂತಹ ವರನು ಇವಳಿಗೆ ದೊರೆಯುವನು ಎಂಬುದನ್ನೂ ತಿಳಿಸಬೇಕು ಎಂದನು.

೧೬. ಹೀಗೆ ಕೇಳಲು ನಾರದನು, ಆ ಶ್ರೀಮತಿಯನ್ನು ತಾನೇ ವರಿಸಬೇಕೆಂಬ ಬಯಕೆಯಿಂದ, ಕಾಮವಿಕಾರಗಳಿಗೆ ಸಿಲುಕಿದವನಾಗಿ, ರಾಜನನ್ನು ಕುರಿತು

**ಸುತೇಯಂ ತವ ಭೂಪಾಲ ಸರ್ವಲಕ್ಷಣಲಕ್ಷಿತಾ ॥**
**ಮಹಾಭಾಗ್ಯವತೀ ಧನ್ಯಾ ಲಕ್ಷ್ಮೀರಿವ ಗುಣಾಲಯಾ ॥ ೧೭ ॥**

**ಸರ್ವೇಶ್ವರೋಽಜಿತೋ ವೀರೋ ಗಿರೀಶಸದೃಶೋ ವಿಭುಃ ।**
**ಅಸ್ಯಾಃ ಪತಿರ್ಧ್ರುವಂ ಭಾವೀ ಕಾಮಜಿತ್ಸುರಸತ್ತಮಃ ॥ ೧೮ ॥**

**ಇತ್ಯುಕ್ತ್ವಾ ನೃಪಮಾಮಂತ್ರ್ಯ ಯಯೌ ಯಾದೃಚ್ಛಿಕೋ ಮುನಿಃ ।**
**ಬಭೂವ ಕಾಮವಿವಶಃ ಶಿವಮಾಯಾವಿಮೋಹಿತಃ ॥ ೧೯ ॥**

**ಚಿತ್ತೇ ವಿಚಿಂತ್ಯ ಸ ಮುನಿರಾಪ್ನುಯಾಂ ಕಥಮೇನಕಾಂ ।**
**ಸ್ವಯಂವರೇ ನೃಪಾಲಾನಾಮೇಕಂ ಮಾಂ ವೃಣುಯಾತ್ಕಥಂ ॥ ೨೦ ॥**

**ಸೌಂದರ್ಯಂ ಸರ್ವನಾರೀಣಾಂ ಪ್ರಿಯಂ ಭವತಿ ಸರ್ವಥಾ ।**
**ತದ್ದೃಷ್ಟ್ವೈವ ಪ್ರಸನ್ನಾ ಸಾ ಸ್ವವಶಾ ನಾತ್ರ ಸಂಶಯಃ ॥ ೨೧ ॥**

---

೧೭. ಎಲೈ ರಾಜೇಂದ್ರ! ಒಳ್ಳೆಯ ಲಕ್ಷಣಗಳಿಂದ ಶೋಭಿತಳಾದ ನಿನ್ನ ಮಗಳು ಧನ್ಯಳೇ ಸರಿ. ಈಕೆಯು ಮಹಾಭಾಗ್ಯಶಾಲಿನಿ. ಲಕ್ಷ್ಮಿಯಂತೆ ಸುಗುಣಗಳಿಗೆ ನೆಲೆಯಾಗಿದ್ದಾಳೆ.

೧೮. ಸರ್ವೇಶ್ವರನೂ, ಎಂದಿಗೂ ಸೋಲನ್ನೇ ಕಂಡರಿಯದವನೂ, ಮಹಾಪರಾಕ್ರಮಶಾಲಿಯೂ, ಮನ್ಮಥನನ್ನು ಜಯಿಸಿದವನೂ, ಶಿವನಿಗೆ ಸಮಾನನೂ ಆದ ಸುರಶ್ರೇಷ್ಠನೊಬ್ಬನು ಈಕೆಗೆ ಪತಿಯಾಗುತ್ತಾನೆ.

೧೯. ಹೀಗೆಂದು ಹೇಳಿ ಆ ರಾಜನನ್ನು ಬೀಳ್ಕೊಂಡು ಸ್ವೇಚ್ಛಾಗಾಮಿಯಾದ ಮುನಿಯು ಹೊರಟುಹೋದನು. ಶಿವನ ಮಾಯೆಯಿಂದ ವಿಮೋಹಿತನಾಗಿ ಸ್ಮರತಾಪದಿಂದ ವಿಹ್ವಲನಾದನು.

೨೦. ಆ ಮುನಿಯು ಇವಳನ್ನು ನಾನು ಪಡೆಯುವ ಬಗೆಯೆಂತು? ರಾಜಕುಮಾರರು ನೆರೆದಿರುವ ಆ ಸ್ವಯಂವರದಲ್ಲಿ ನನ್ನನ್ನೊಬ್ಬನನ್ನೇ ಈಕೆಯು ವರಿಸುವ ಬಗೆ ಹೇಗೆ? ಎಂದು ಮನಸ್ಸಿನಲ್ಲಿ ಯೋಚಿಸತೊಡಗಿದನು.

೨೧. ಸ್ತ್ರೀಯರೆಲ್ಲರೂ ಸೌಂದರ್ಯವನ್ನೇ ಬಹುವಾಗಿ ಮೆಚ್ಚುವುದು ಸ್ವಭಾವವಷ್ಟೆ? ಆ ಸೌಂದರ್ಯವನ್ನು ಕಂಡೊಡನೆಯೇ ಅವಳು ಪ್ರಸನ್ನಳಾಗಿ ನನ್ನ ವಶಳಾಗುವಳು. ಇದು ಖಂಡಿತ.

**ವಿಧಾಯೇತ್ಥಂ ವಿಷ್ಣುರೂಪಂ ಗ್ರಹೀತುಂ ಮುನಿಸತ್ತಮಃ ।**
**ವಿಷ್ಣುಲೋಕಂ ಜಗಾಮಾಶು ನಾರದಃ ಸ್ಮರವಿಹ್ವಲಃ ॥ ೨೨ ॥**

**ಪ್ರಣಿಪತ್ಯ ಹೃಷೀಕೇಶಂ ವಾಕ್ಯಮೇತದುವಾಚ ಹ ।**
**ರಹಸಿ ತ್ವಾಂ ಪ್ರವಕ್ಷ್ಯಾಮಿ ಸ್ವವೃತ್ತಾಂತಮಶೇಷತಃ ॥ ೨೩ ॥**

**ತಥೇತ್ಯುಕ್ತೇ ತಥಾ ಭೂತೇ ಶಿವೇಚ್ಛಾಕಾರ್ಯಕರ್ತರಿ ।**
**ಬ್ರೂಹೀತ್ಯುಕ್ತವತಿ ಶ್ರೀಶೇ ಮುನಿರಾಹ ಚ ಕೇಶವಂ ॥ ೨೪ ॥**

**॥ ನಾರದ ಉವಾಚ ॥**

**ತ್ವದೀಯೋ ಭೂಪತಿಶ್ಶೀಲನಿಧಿಸ್ಸ ವೃಷತತ್ಪರಃ ।**
**ತಸ್ಯ ಕನ್ಯಾ ವಿಶಾಲಾಕ್ಷೀ ಶ್ರೀಮತೀ ವರವರ್ಣಿನೀ ॥ ೨೫ ॥**

**ಜಗನ್ಮೋಹಿನ್ಯಭಿಖ್ಯಾತಾ ತ್ರೈಲೋಕ್ಯೇऽಪ್ಯತಿಸುಂದರೀ ।**
**ಪರಿಣೇತುಮಹಂ ವಿಷ್ಣೋ ತಾಮಿಚ್ಛಾಮ್ಯದ್ಯ ಮಾ ಚಿರಂ ॥ ೨೬ ॥**

---

೨೨. ಈರೀತಿ ಮನಸ್ಸಿನಲ್ಲಿ ನಿರ್ಧರಿಸಿ, ಮನ್ಮಥಬಾಣಪೀಡಿತನಾದ ಆ ನಾರದನು, ವಿಷ್ಣುವಿನ ಸೌಂದರ್ಯವನ್ನು ಪಡೆಯಬೇಕೆಂದು ಉದ್ದೇಶಿಸಿ ವಿಷ್ಣುಲೋಕಕ್ಕೆ ಬೇಗನೆ ಹೋಗಿ,

೨೩. ಅಲ್ಲಿ ಶ್ರೀಮನ್ನಾರಾಯಣನನ್ನು ನಮಸ್ಕರಿಸಿ, ನನ್ನ ವೃತ್ತಾಂತವೆಲ್ಲವನ್ನೂ ನಿನಗೆ ರಹಸ್ಯವಾಗಿ ತಿಳಿಸುತ್ತೇನೆ ಎಂಬುದಾಗಿ ಹೇಳಲು,

೨೪. ಶಿವನ ಇಚ್ಛೆಯಂತೆ ನಡೆಯುವ ಆ ಶ್ರೀಹರಿಯು ಹಾಗೆಯೇ ಆಗಲೆಂದು ಹೇಳಿ ಅವನನ್ನು ಒತ್ತಟ್ಟಿಗೆ ಕರೆದೊಯ್ದು ನಿನ್ನವೃತ್ತಾಂತವನ್ನು ಹೇಳಬಹುದೆನ್ನಲು ಆ ಮುನಿಯು ಶ್ರೀಪತಿಯನ್ನು ಕುರಿತು ಇಂತೆಂದನು.

೨೫-೨೬. ನಾರದನು ಹೇಳಿದನು:—ಧರ್ಮನಿರತನಾದ ಶೀಲನಿಧಿಯೆಂಬ ರಾಜನೊಬ್ಬನಿರುವನು. ಅವನು ನಿನ್ನಂತೆ ಗುಣಶಾಲಿಯು. ಅವನಿಗೆ ವಿಶಾಲವಾದ ಕಣ್ಣುಗಳಿಂದಲೂ ಉತ್ತಮ ಸ್ತ್ರೀ ಲಕ್ಷಣಗಳಿಂದ ಶೋಭಿಸುವವಳಾಗಿಯೂ ಇರುವ ಶ್ರೀಮತಿಯೆಂಬ ಮಗಳಿರುವಳು. ಮೂರು ಲೋಕದಲ್ಲೂ ಎಣೆಯಿಲ್ಲದ ಸೌಂದರ್ಯವುಳ್ಳ ಆ ಕನ್ಯೆಯು ಜಗನ್ಮೋಹಿನಿಯೆಂದು ಪ್ರಸಿದ್ಧಳಾಗಿರುವಳು. ನಾನೀಗ ಅವಳನ್ನು ಬೇಗನೆ ಮದುವೆ ಮಾಡಿಕೊಳ್ಳಬೇಕೆಂದಿದೇನೆ.

**ಸ್ವಯಂವರಂ ಚಕಾರಾಸೌ ಭೂಪತಿಸ್ತನಯೇಚ್ಛಯಾ ।**
**ಚತುರ್ದಿಗ್ಭ್ಯಸ್ಸಮಾಯಾತಾ ರಾಜಪುತ್ರಾಸ್ಸಹಸ್ರಶಃ ॥ ೨೭ ॥**

**ಯದಿ ದಾಸ್ಯಸಿ ರೂಪಂ ಮೇ ತದಾ ತಾಂ ಪ್ರಾಪ್ನುಯಾಂ ಧ್ರುವಂ ।**
**ತ್ವದ್ರೂಪಂ ಸಾ ವಿನಾ ಕಂಠೇ ಜಯಮಾಲಾಂ ನ ಧಾಸ್ಯತಿ ॥ ೨೮ ॥**

**ಸ್ವರೂಪಂ ದೇಹಿ ಮೇ ನಾಥ ಸೇವಕೋಽಹಂ ಪ್ರಿಯಸ್ತವ ॥**
**ವೃಣುಯಾನ್ಮಾಂ ಯಥಾ ಸಾ ವೈ ಶ್ರೀಮತೀ ಕ್ಷಿತಿಪಾತ್ಮಜಾ ॥ ೨೯ ॥**

**॥ ಸೂತ ಉವಾಚ ॥**

**ವಚಶ್ಶ್ರುತ್ವಾ ಮುನೇರಿತ್ಥಂ ವಿಹಸ್ಯ ಮಧುಸೂದನಃ ।**
**ಶಾಂಕರೀಂ ಪ್ರಭುತಾಂ ಬುದ್ಧ್ವಾ ಪ್ರತ್ಯುವಾಚ ದಯಾಪರಃ ॥ ೩೦ ॥**

---

೨೭. ಆ ದೊರೆಯು ತನ್ನ ಮಗಳ ಕೋರಿಕೆಯಂತೆ ಸ್ವಯಂವರವನ್ನು ಏರ್ಪಡಿಸಿರುವನು. ನಾಲ್ಕು ದಿಕ್ಕುಗಳಿಂದಲೂ ಸಾವಿರಗಟ್ಟಲೆ ರಾಜಕುಮಾರರು ಅಲ್ಲಿಗೆ ಬಂದಿರುತ್ತಾರೆ.

೨೮. ನಿನ್ನ ಸೌಂದರ್ಯವನ್ನು ನನಗೆ ಕೊಡುವ ಪಕ್ಷದಲ್ಲಿ ನಾನವಳನ್ನು ಖಂಡಿತವಾಗಿಯೂ ಪಡೆಯುತ್ತೇನೆ. ನಿನ್ನ ರೂಪವಿಲ್ಲದೆ ಇದ್ದರೆ, ಅವಳು ನನ್ನ ಕಂಠಕ್ಕೆ ಜಯಮಾಲಿಕೆಯನ್ನು ಹಾಕಲಾರಳು.

೨೯. ಓ ಪ್ರಭೂ! ನಿನ್ನ ಸ್ವರೂಪವನ್ನು ನನಗೆ ನೀಡು. ನಾನು ನಿನ್ನ ಪ್ರಿಯಸೇವಕನಲ್ಲವೇ? ರಾಜಸುತೆಯಾದ ಆ ಶ್ರೀಮತಿಯು ನನ್ನನು ಹೇಗೆ ವರಿಸುವಳೋ ಹಾಗೆ ಮಾಡು ಎಂದನು.

೩೦. ಸೂತನು ಹೇಳಿದನು:— ಈರೀತಿಯಾಗಿ ಆ ನಾರದ ಮಹರ್ಷಿಯು ಹೇಳಿದ ಮಾತನ್ನು ಕೇಳಿ, ಮಧುವೆಂಬ ರಾಕ್ಷಸನನ್ನು ಸಂಹರಿಸಿದ ಆ ಶ್ರೀಹರಿಯು ನಕ್ಕು ಇದೆಲ್ಲವು ಶಿವನ ಪ್ರಭಾವವೆಂದು ತಿಳಿದು ಕನಿಕರದಿಂದ ಹೇಳಿದನು.

॥ ವಿಷ್ಣುರುವಾಚಃ ॥

ಸ್ವೇಷ್ಟದೇಶಂ ಮುನೇ ಗಚ್ಛ ಕರಿಷ್ಯಾಮಿ ಹಿತಂ ತವ ।
ಭಿಷಗ್ವರೋ ಯಥಾರ್ತಸ್ಯ ಯತಃ ಪ್ರಿಯತರೋಽಸಿ ಮೇ ॥ ೩೧ ॥

ಇತ್ಯುಕ್ತ್ವಾ ಮುನಯೇ ತಸ್ಮೈ ದದೌ ವಿಷ್ಣುರ್ಮುಖಂ ಹರೇಃ ।
ಸ್ವರೂಪಮನುಗೃಹ್ಯಾಸ್ಯ ತಿರೋಧಾನಂ ಜಗಾಮ ಸಃ ॥ ೩೨ ॥

ಏವಮುಕ್ತೋ ಮುನಿರ್ಹೃಷ್ಟ ಸ್ವರೂಪಂ ಪ್ರಾಪ್ಯ ವೈ ಹರೇಃ ।
ಮೇನೇ ಕೃತಾರ್ಥಮಾತ್ಮಾನಂ ತದ್ಯತ್ನಂ ನ ಬುಬೋಧ ಸಃ ॥ ೩೩ ॥

ಅಥ ತತ್ರ ಗತಶ್ಶೀಘ್ರಂ ನಾರದೋ ಮುನಿಸತ್ತಮಃ ।
ಚಕ್ರೇ ಸ್ವಯಂವರಂ ಯತ್ರ ರಾಜಪುತ್ರೈಸ್ಸಮಾಕುಲಂ ॥ ೩೪ ॥

ಸ್ವಯಂವರಸಭಾ ದಿವ್ಯಾ ರಾಜಪುತ್ರಸಮಾವೃತಾ
ಶುಶುಭೇಽತೀವ ವಿಪ್ರೇಂದ್ರಾ ಯಥಾ ಶಕ್ರಸಭಾಪರಾ ॥ ೩೫ ॥

---

೩೧. ಎಲೈ ಮುನಿಯೇ, ನೀನು ಬೇಕಾದಲ್ಲಿಗೆ ಹೋಗಬಹುದು. ಕುಶಲನಾದ ವೈದ್ಯನು ರೋಗಿಯನ್ನು ಗುಣಪಡಿಸುವಂತೆ ನಿನಗೆ ಹಿತವನ್ನೇ ಮಾಡುತ್ತೇನೆ. ಏಕೆಂದರೆ ನೀನೆನಗೆ ಬಹಳ ಬೇಕಾದವನಲ್ಲವೇ ?

೩೨. ಹೀಗೆಂಬುದಾಗಿ ಆ ಮುನಿಗೆ ಹೇಳಿ ಶ್ರೀಹರಿಯು "ಹರಿಯ" (ಕಪಿಯ) ಮುಖವನ್ನೂ ಸ್ವರೂಪವನ್ನೂ ಅನುಗ್ರಹಿಸಿ ಅಂತರ್ಧಾನವನ್ನು ಹೊಂದಿದನು.

೩೩. ನಾರದನು ಹರಿಯ ಸ್ವರೂಪವನ್ನು ಪಡೆದು ತಾನು ಕೃತಾರ್ಥನಾದೆನೆಂದು ಹಿಗ್ಗಿದನು. ಆದರೆ ಶ್ರೀಹರಿಯ ಪ್ರಯತ್ನವೇನೆಂಬುದನ್ನು ಮಾತ್ರ ಅರಿಯಲಿಲ್ಲ.

೩೪. ಆಮೇಲೆ ಮುನಿಶ್ರೇಷ್ಠನಾದ ನಾರದನು, ರಾಜಕುಮಾರರೆಲ್ಲರೂ ಒಟ್ಟು ಸೇರಿರುವ ಆ ಸ್ವಯಂವರವು ನಡೆಯುತ್ತಿರುವ ಸ್ಥಳಕ್ಕೆ ಬಹುಬೇಗನೆ ತೆರಳಿದನು.

೩೫. ಎಲೈ ವಿಪ್ರೋತ್ತಮರೇ, ಕೇಳಿ, ರಾಜಪುತ್ರರುಗಳಿಂದ ತುಂಬಿಹೋಗಿರುವ ದಿವ್ಯವಾದ ಆ ಸ್ವಯಂವರಮಂಟಪವು ಬೇರೊಂದು ಇಂದ್ರನ ಸಭೆಯೋ ಎಂಬಂತೆ ವಿರಾಜಿಸಿತು.

ತಸ್ಯಾಂ ನೃಪಸಭಾಯಾಂ ವೈ ನಾರದಸ್ಸಮುಪಾವಿಶತ್ ।
ಸ್ಥಿತ್ವಾ ತತ್ರ ವಿಚಿಂತ್ಯೇತಿ ಪ್ರೀತಿಯುಕ್ತೇನ ಚೇತಸಾ ॥ ೩೬ ॥

ಮಾಂ ವರಿಷ್ಯತಿ ನಾನ್ಯಂ ಸಾ ವಿಷ್ಣುರೂಪಧರಂ ಧ್ರುವಂ ।
ಆನನಸ್ಯ ಕುರೂಪತ್ವಂ ನ ವೇದ ಮುನಿಸತ್ತಮಃ ॥ ೩೭ ॥

ಪೂರ್ವರೂಪಂ ಮುನಿಂ ಸರ್ವೇ ದದೃಶುಸ್ತತ್ರ ಮಾನವಾಃ ।
ತದ್ಭೇದಂ ಬುಬುಧುಸ್ತೇ ನ ರಾಜಪುತ್ರಾದಯೋ ದ್ವಿಜಾಃ ॥ ೩೮ ॥

ತತ್ರ ರುದ್ರಗಣೌ ದ್ವೌ ತದ್ರಕ್ಷಣಾರ್ಥಂ ಸಮಾಗತೌ ।
ವಿಪ್ರರೂಪಧರೌ ಗೂಢೌ ತದ್ಭೇದಂ ಜಜ್ಞತುಃ ಪರಂ ॥ ೩೯ ॥

ಮೂಢಂ ಮತ್ವಾ ಮುನಿಂ ತೌ ತನ್ನಿಕಟಂ ಜಗ್ಮತುರ್ಗಣೌ ।
ಕುರುತಸ್ತತ್ಪ್ರಹಾಸಂ ವೈ ಭಾಷಮಾಣೌ ಪರಸ್ಪರಂ ॥ ೪೦ ॥

---

೩೬. ಆ ನಾರದನು, ವಿಷ್ಣುವಿನ ರೂಪವನ್ನು ಧರಿಸಿರುವ ನನ್ನನ್ನಲ್ಲದೆ ಮತ್ತಾರನ್ನೂ ಆ ಶ್ರೀಮತಿಯು ವರಿಸಲಾರಳು ಎಂದು, ಸಂತೋಷದಿಂದ ಹಿಗ್ಗಿ ಮನಸ್ಸಿನಲ್ಲಿ ಆಲೋಚಿಸುತ್ತಾ ಆ ರಾಜಸಭೆಯಲ್ಲಿ ಕುಳಿತುಕೊಂಡನು.

೩೭-೩೮ ಅಲ್ಲಿರುವ ಎಲ್ಲ ಮಾನವರೂ ಮೊದಲಿನಂತೆಯೇ ಇದ್ದ ಮುನಿಯನ್ನು ಕಂಡರು. ರಾಜಪುತ್ರರೂ, ಬ್ರಾಹ್ಮಣರೂ ಆಗ ಇರುವ ವ್ಯತ್ಯಾಸವನ್ನು ಅರಿಯಲಿಲ್ಲ.

೩೯. ಅಲ್ಲಿ ಆ ನಾರದನನ್ನು ಕಾಪಾಡಬೇಕೆಂದು ಗುಟ್ಟಾಗಿ ಬ್ರಾಹ್ಮಣ ವೇಷವನ್ನು ಧರಿಸಿ ಬಂದಿದ್ದ ಶಿವಗಣಗಳಿಬ್ಬರು ಮಾತ್ರ ಆ ವ್ಯತ್ಯಾಸವನ್ನು ಅರಿತರು.

೪೦. ಆ ಗಣಗಳಿಬ್ಬರೂ, ಆ ಮುನಿಗೇನೂ ತಿಳಿಯದೆಂದು ಅರಿತು, ಅವನ ಬಳಿಗೆ ಬಂದು, ಪರಸ್ಪರವಾಗಿ ಮಾತನಾಡುತ್ತಾ ಅವನನ್ನು ಹಾಸ್ಯಮಾಡತೊಡಗಿದರು.

ಪಶ್ಯ ನಾರದರೂಪಂ ಹಿ ವಿಷ್ಣೋರಿವ ಮಹೋತ್ತಮಂ ।
ಮುಖಂ ತು ವಾನರಸ್ಯೇವ ವಿಕಟಂ ತು ಭಯಂಕರಂ ॥ ೪೧ ॥

ಇಚ್ಛತ್ಯಯಂ ನೃಪಸುತಾಂ ವೃಥೈವ ಸ್ಮರಮೋಹಿತಃ ।
ಇತ್ಯುಕ್ತ್ವಾ ಸಚ್ಛಲಂ ವಾಕ್ಯಮುಪಹಾಸಂ ಪ್ರಚಕ್ರತುಃ ॥ ೪೨ ॥

ನ ಶುಶ್ರಾವ ಯಥಾರ್ಥಂ ತು ತದ್ವಾಕ್ಯಂ ಸ್ಮರವಿಹ್ವಲಃ ।
ಪರ್ಯೈಕ್ಷಚ್ಛ್ರೀಮತೀಂ ತಾಂ ವೈ ತಲ್ಲಿಪ್ಸುರ್ಮೋಹಿತೋ ಮುನಿಃ ॥ ೪೩ ॥

ಏತಸ್ಮಿನ್ನಂತರೇ ಭೂಪಕನ್ಯಾ ಚಾನ್ತಃಪುರಾತ್ತು ಸಾ ।
ಸ್ತ್ರೀಭಿಸ್ಸಮಾವೃತಾ ತತ್ರಾಜಗಾಮ ವರವರ್ಣಿನೀ ॥ ೪೪ ॥

ಮಾಲಾಂ ಹಿರಣ್ಮಯೀಂ ರಮ್ಯಾಮಾದಾಯ ಶುಭಲಕ್ಷಣಾ ।
ತತ್ರ ಸ್ವಯಂವರೇ ರೇಜೇ ಸ್ಥಿತಾ ಮಧ್ಯೇ ರಮೇವ ಸಾ ॥ ೪೫ ॥

---

೪೧. ಈ ನಾರದನ ರೂಪವನ್ನು ನೋಡು. ವಿಷ್ಣುವಿನ ರೂಪದಂತೆ ಮಹಾ ಉತ್ತಮವಾಗಿದೆ. ಆದರೆ ಮುಖವು ಮಾತ್ರ ಕೋತಿಯಂತೆ ಅಸಹ್ಯಕರವಾಗಿಯೂ ಭಯಂಕರವಾಗಿಯೂ ಇದೆ.

೪೨. ಮನ್ಮಥನಿಂದ ಮೋಹಿತನಾದ ಈ ನಾರದನು ವ್ಯರ್ಥವಾಗಿ ದೊರೆಯ ಮಗಳನ್ನು ಅಪೇಕ್ಷಿಸುತ್ತಿರುವನು. ಹೀಗೆಂದು ನೆಪವಾಗಿ ಮಾತನ್ನಾಡಿ ಉಪಹಾಸವನ್ನು ಮಾಡಿದರು.

೪೩. ಹೀಗೆ ಅವರು ಆಡಿದ ಆ ಮಾತು ಮನ್ಮಥವಿಕಾರಗಳಿಗೆ ಸಿಲುಕಿ ಮೈಮರೆತ ನಾರದನಿಗೆ ಕೇಳಿಸಲೇ ಇಲ್ಲ. ಮೋಹಾವಿಷ್ಟನಾದ ಆ ಮುನಿಯು ಶ್ರೀಮತಿಯನ್ನು ಪಡೆಯಲೆಳಸಿ ಆವಳು ಬರುವುದನ್ನೇ ಕಾಯುತ್ತಿದ್ದನು.

೪೪. ಈ ಮಧ್ಯೆ ನಾರೀಶಿರೋಮಣಿಯಾದ ಆ ರಾಜಕುಮಾರಿಯು ಸಖಿಯರಿಂದೊಡಗೂಡಿ ಅಂತಃಪುರದಿಂದ ಅಲ್ಲಿಗೆ ಹೊರಟುಬಂದಳು.

೪೫. ಶುಭಲಕ್ಷಣಗಳಿಂದ ಕೂಡಿಟ ಆ ಸುದತಿಯು ಚಿನ್ನದಿಂದ ಮಾಡಿದ ರಮ್ಯವಾದ ಮಾಲೆಯನ್ನು ಕೈಯ್ಯಲ್ಲಿ ಹಿಡಿದು ಆ ಸ್ವಯಂವರಮಂಟಪದ ನಡುವೆ ಲಕ್ಷ್ಮಿಯಂತೆ ಶೋಭಿಸಿದಳು.

**ಬಭ್ರಾಮ ಸಾ ಸಭಾಂ ಸರ್ವಾಂ ಮಾಲಾಮಾದಾಯ ಸುವ್ರತಾ ।**
**ವರಮನ್ವೇಷತೀ ತತ್ರ ಸ್ವಾತ್ಮಾಭೀಷ್ಟಂ ನೃಪಾತ್ಮಜಾ ॥ ೪೬ ॥**

**ವಾನರಾಸ್ಯಂ ವಿಷ್ಣುತನುಂ ಮುನಿಂ ದೃಷ್ಟ್ವಾ ಚುಕೋಪ ಸಾ ।**
**ದೃಷ್ಟಿಂ ನಿವಾರ್ಯ ಚ ತತಃ ಪ್ರಸ್ಥಿತಾ ಪ್ರೀತಮಾನಸಾ ॥ ೪೭ ॥**

**ನ ದೃಷ್ಟ್ವಾ ಸ್ವವರಂ ತತ್ರ ತ್ರಸ್ತಾಸೀನ್ಮನಸೇಪ್ಸಿತಂ ।**
**ಅಂತಸ್ಸಭಾಸ್ಥಿತಾ ಕಸ್ಮಿನ್ನರ್ಪಯಾಮಾಸ ನ ಸ್ರಜಂ ॥ ೪೮ ॥**

**ಏತಸ್ಮಿನ್ನಂತರೇ ವಿಷ್ಣುರಾಜಗಾಮ ನೃಪಾಕೃತಿಃ ।**
**ನ ದೃಷ್ಟಃ ಕೈಶ್ಚಿದಪರೈಃ ಕೇವಲಂ ಸಾ ದದರ್ಶ ಹಿ ॥ ೪೯ ॥**

**ಅಥ ಸಾ ತಂ ಸಮಾಲೋಕ್ಯ ಪ್ರಸನ್ನವದನಾಂಬುಜಾ ।**
**ಅರ್ಪಯಾಮಾಸ ತತ್ಕಂಠೇ ತಾಂ ಮಾಲಾಂ ವರವರ್ಣಿನೀ ॥ ೫೦ ॥**

೪೬. ವ್ರತಶೀಲಳಾದ ಆ ರಾಜಕುಮಾರಿಯು ತನಗನುರೂಪನಾದ ವರನನ್ನು ಹುಡುಕುತ್ತಾ ಮಾಲೆಯನ್ನು ಹಿಡಿದು ಸಭೆಯೆಲ್ಲವನ್ನೂ ತಿರುಗಿದಳು.

೪೭. ಕಪಿಯ ಮುಸುಡಿಯೂ ವಿಷ್ಣುವಿನ ಶರೀರವೂ ಇರುವ ಆ ಮುನಿಯನ್ನು ನೋಡಿ ಕೋಪಗೊಂಡಳು. ಅವನ ಕಡೆಯಿಂದ ದೃಷ್ಟಿಯನ್ನು ತಿರುಗಿಸಿ ಬೇರೊಂದೆಡೆಗೆ ಹೊರಟಳು.

೪೮. ಅಲ್ಲಿ ತನ್ನ ಮನಸ್ಸಿಗೆ ಒಪ್ಪಿದ ವರನೊಬ್ಬನನ್ನೂ ಕಾಣದೆ ಸಭೆಯ ನಡುವೆಯೇ ನಿಂತುಬಿಟ್ಟಳು. ಯಾವನಿಗೂ ಮಾಲೆಯನ್ನೇ ಹಾಕಲಿಲ್ಲ.

೪೯. ಈಮಧ್ಯೇ ಶ್ರೀಹರಿಯು ರಾಜವೇಷವನ್ನು ಧರಿಸಿ ಬೇರೆ ಯಾರಿಗೂ ಕಾಣದಂತೆ ಅಲ್ಲಿಗೆ ಬಂದನು. ಅದನ್ನು ಶ್ರೀಮತಿಯೊಬ್ಬಳು ಮಾತ್ರವೇ ಕಂಡಳು.

೫೦. ಆ ಉತ್ತಮಾಂಗನೆಯು ಅವನನ್ನು ಕಂಡು ಅರಳಿದ ಮುಖಕಮಲವುಳ್ಳವಳಾಗಿ ಅವನ ಕೊರಳಿಗೆ ಆ ಮಾಲೆಯನ್ನು ಹಾಕಿದಳು.

**ತಾಮಾದಾಯ ತತೋ ವಿಷ್ಣೂ ರಾಜರೂಪಧರಃ ಪ್ರಭುಃ ।**
**ಅಂತರ್ಧಾನಮಗಾತ್ಸದ್ಯಸ್ಸ್ವಸ್ಥಾನಂ ಪ್ರಯಯೌ ಕಿಲ ॥ ೫೧ ॥**

**ಸರ್ವೇ ರಾಜಕುಮಾರಾಶ್ಚ ನಿರಾಶಾಶ್ಶ್ರೀಮತೀಂ ಪ್ರತಿ ।**
**ಮುನಿಸ್ತು ವಿಹ್ವಲೋಽತೀವ ಬಭೂವ ಮದನಾತುರಃ ॥ ೫೨ ॥**

**ತದಾ ತಾವೂಚತುಸ್ಸದ್ಯೋ ನಾರದಂ ಸ್ಮರವಿಹ್ವಲಂ ।**
**ವಿಪ್ರರೂಪಧರೌ ರುದ್ರಗಣೌ ಜ್ಞಾನವಿಶಾರದೌ ॥ ೫೩ ॥**

**॥ ಗಣಾವೂಚತುಃ ॥**

**ಹೇ ನಾರದ ಮುನೇ ತ್ವಂ ಹಿ ವೃಥಾ ಮದನಮೋಹಿತಃ ।**
**ತಲ್ಲಿಪ್ಸುಸ್ಸ್ವಮುಖಂ ಪಶ್ಯ ವಾನರಸ್ಯೇವ ಗರ್ಹಿತಂ ॥ ೫೪ ॥**

**॥ ಸೂತ ಉವಾಚ ॥**

**ಇತ್ಯಾಕರ್ಣ್ಯ ತಯೋರ್ವಾಕ್ಯಂ ನಾರದೋ ವಿಸ್ಮಿತೋಽಭವತ್ ।**
**ಮುಖಂ ದದರ್ಶ ಮುಕುರೇ ಶಿವಮಾಯಾವಿಮೋಹಿತಃ ॥ ೫೫ ॥**

---

೫೧. ಬಳಿಕ, ರಾಜನ ವೇಷವನ್ನು ಧರಿಸಿ ಬಂದಿದ್ದ ಪ್ರಭುವಾದ ಆ ವಿಷ್ಣುವು ಆ ಶ್ರೀಮತಿಯೊಡನೆ ಕೂಡಲೇ ಅಂತರ್ಧಾನವನ್ನು ಹೊಂದಿ ತನ್ನ ನಿವಾಸಕ್ಕೆ ತೆರಳಿದನು.

೫೨. ಅಲ್ಲಿ ರಾಜಕುಮಾರರೂ ಶ್ರೀಮತಿಯ ವಿಷಯದಲ್ಲಿ ನಿರಾಶರಾದರು. ಕಾಮಪೀಡಿತನಾದ ಆ ಮುನಿಯಾದರೋ ಬಹುವಾಗಿ ವ್ಯಥೆಪಡುತ್ತಿದ್ದನು.

೫೩. ಆಗ ಮನ್ಮಥನ ಬಾಣಗಳಿಗೆ ಸಿಲುಕಿ ತತ್ತಳಿಸುತ್ತಿರುವ ಆ ನಾರದನನ್ನು ಕುರಿತು, ಜ್ಞಾನಿಶ್ರೇಷ್ಠರೂ, ಬ್ರಾಹ್ಮಣರೂಪಧಾರಿಗಳೂ ಆದ ಆ ಶಿವನ ಗಣಗಳೀರ್ವರು ಇಂತೆಂದರು.

೫೪. ಗಣಗಳು ಹೇಳಿದರು:—ಎಲೈ ನಾರದಮುನಿಯೇ, ನೀನು ವ್ಯರ್ಥವಾಗಿ ಆ ಶ್ರೀಮತಿಯನ್ನು ಕಾಮಿಸಿ, ಮನ್ಮಥನಿಂದ ಮೋಹಿತನಾಗಿರುವೆ. ಕಪಿಯಂತೆ ಅಸಹ್ಯವನ್ನು ಹುಟ್ಟಿಸುವ ನಿನ್ನ ಮುಖವನ್ನು ನೋಡಿಕೋ ಎಂದರು.

೫೫. ಸೂತನು ಹೇಳಿದನು :—ಹೀಗೆ ನುಡಿದ ಅವರಿಬ್ಬರ ಮಾತನ್ನು ಕೇಳಿ ನಾರದನು ಆಶ್ಚರ್ಯಪಟ್ಟನು. ಶಿವನ ಮಾಯೆಯಿಂದ ಮೋಹಿತನಾದ ಆತನು ತನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡನು.

**ಸ್ವಮುಖಂ ವಾನರಸ್ಯೇವ ದೃಷ್ಟ್ವಾ ಚುಕ್ರೋಧ ಸತ್ವರಂ ।**
**ಶಾಪಂ ದದೌ ತಯೋಸ್ತತ್ರ ಗಣಯೋರ್ಮೋಹಿತೋ ಮುನಿಃ ॥ ೫೬ ॥**

**ಯುವಾಂ ಮನೋಪಹಾಸಂ ವೈ ಚಕ್ರತುರ್ಬ್ರಾಹ್ಮಣಸ್ಯ ಹಿ ।**
**ಭವೇತಾಂ ರಾಕ್ಷಸೌ ವಿಪ್ರವೀರ್ಯಜೌ ವೈ ತದಾಕೃತೀ ॥ ೫೭ ॥**

**ಶ್ರುತ್ವಾ ಹರಗಣಾವಿತ್ಥಂ ಸ್ವಶಾಪಂ ಜ್ಞಾನಿಸತ್ತಮೌ ।**
**ನ ಕಿಂಚಿದೂಚತುಸ್ತೌ ಹಿ ಮುನಿಮಾಜ್ಞಾಯ ಮೋಹಿತಂ ॥ ೫೮ ॥**

**ಸ್ವಸ್ಥಾನಂಜಗ್ಮತುರ್ವಿಪ್ರಾ ಉದಾಸೀನೌ ಶಿವಸ್ತುತಿಂ ।**
**ಚಕ್ರತುರ್ಮನ್ಯಮಾನೌ ವೈ ಶಿವೇಚ್ಛಾಂ ಸಕಲಾಂ ಸದಾ ॥ ೫೯ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ನಾರದಮೋಹವರ್ಣನೋನಾಮ ತೃತೀಯೋಽಧ್ಯಾಯಃ**

---

೫೬. ಕಪಿಯಂತಿರುವ ತನ್ನ ಮುಖವನ್ನು ಕಂಡು ತಟ್ಟನೆ ಕುಪಿತನಾದನು. ಮೋಹದಿಂದ ಮುಂದುಗಾಣದೆ ಆ ಮುನಿಯು ಅವರಿಬ್ಬರಿಗೂ ಶಾಪವನ್ನಿತ್ತನು.

೫೭. ನೀವಿಬ್ಬರೂ ಬ್ರಾಹ್ಮಣನಾದ ನನ್ನನ್ನು ಹಾಸ್ಯಮಾಡಿದುದರಿಂದ ಬ್ರಾಹ್ಮಣನಿಗೆ ಮಕ್ಕಳಾಗಿ ಹುಟ್ಟಿ ರಾಕ್ಷಸರಾಗಿ ಹೋಗಿ ಎಂದು ಶಪಿಸಿದನು.

೫೮. ಮಹಾಜ್ಞಾನಿಗಳಾದ ಆ ಶಿವಗಣಗಳಿಬ್ಬರೂ ತಮಗೀರೀತಿ ಕೊಟ್ಟ ಶಾಪವನ್ನು ಕೇಳಿದರೂ, ಆ ಮುನಿಯು ಶಿವಮಾಯೆಯಿಂದ ಮೋಹಿತನಾಗಿರುವನೆಂದು ತಿಳಿದು, ಏನೊಂದೂ ಮಾತನಾಡಲಿಲ್ಲ.

೫೯. ಎಲೈ ಬ್ರಾಹ್ಮಣೋತ್ತಮರೇ, ಆಗ ಅವರಿಬ್ಬರೂ ಎಲ್ಲವೂ ಶಿವನ ಇಚ್ಛೆಯೆಂದು ತಿಳಿದು ಶಿವನನ್ನು ಸ್ತೋತ್ರಮಾಡುತ್ತಾ ಉದಾಸೀನರಾಗಿ ತಂತಮ್ಮ ಸ್ಥಾನಗಳಿಗೆ ತೆರಳಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ನಾರದಮೋಹವರ್ಣನವೆಂಬ ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಸೃಷ್ಟಿಖಂಡೇ
## ಚತುರ್ಥೋಽಧ್ಯಾಯಃ

॥ ಋಷಯ ಊಚುಃ ॥

ಸೂತ ಸೂತ ಮಹಾಪ್ರಾಜ್ಞ ವರ್ಣಿತಾ ಹ್ಯದ್ಭುತಾ ಕಥಾ ।
ಧನ್ಯಾ ತು ಶಾಂಭವೀ ಮಾಯಾ ತದಧೀನಂ ಚರಾಚರಂ ॥ ೧ ॥

ಗತಯೋರ್ಗಣಯೋಃ ಶಂಭೋಃ ಸ್ವಯಮಾತ್ಮೇಚ್ಛಯಾ ವಿಭೋಃ ।
ಕಿಂ ಚಕಾರ ಮುನಿಃ ಕ್ರುದ್ಧೋ ನಾರದಃ ಸ್ಮರವಿಹ್ವಲಃ ॥ ೨ ॥

---

## ನಾಲ್ಕನೆಯ ಅಧ್ಯಾಯವು

೧. ಶೌನಕಾದಿ ಋಷಿಗಳು ಕೇಳಿದರು :—ಓ ಸೂತನೇ, ನೀನು ಮಹಾ ಪ್ರಾಜ್ಞನು, ಅದ್ಭುತವಾದ ಕಥೆಯನ್ನು ಹೇಳಿರುವೆ. ಶಿವನ ಮಾಯೆಯು ಧನ್ಯ ವಾದುದು. ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಅದರ ಅಧೀನವಾದುದು.

೨. ಸರ್ವವ್ಯಾಪಿಯಾದ ಆ ಶಿವನ ಇಚ್ಛೆಯಂತೆ ಆ ಗಣಗಳೀರ್ವರೂ ಹೊರಟುಹೋದ ಮೇಲೆ, ಮನ್ಮಥದಿಂದ ಪೀಡಿಸಲ್ಪಟ್ಟವನಾಗಿ ಕೋಪಗೊಂಡ ಆ ನಾರದನು ಏನು ಮಾಡಿದನು ? ಎಂದು ಕೇಳಲು,

॥ ಸೂತ ಉವಾಚ ॥

ವಿಮೋಹಿತೋ ಮುನಿರ್ದತ್ವಾ ತಯೋಶ್ಶಾಪಂ ಯಥೋಚಿತಂ ।
ಜಲೇ ಮುಖಂ ನಿರೀಕ್ಷ್ಯಾಥ ಸ್ವರೂಪಂ ಗಿರಿಶೇಚ್ಛಯಾ ॥ ೩ ॥

ಶಿವೇಚ್ಛಯಾ ನ ಪ್ರಬುದ್ಧಃ ಸ್ಮೃತ್ವಾ ಹರಿಕೃತಂ ಛಲಂ ।
ಕ್ರೋಧಂ ದುರ್ವಿಷಹಂ ಕೃತ್ವಾ ವಿಷ್ಣುಲೋಕಂ ಜಗಾಮ ಹ ॥ ೪ ॥

ಉವಾಚ ವಚನಂ ಕ್ರುದ್ಧಸ್ಸಮಿದ್ಧ ಇವ ಪಾವಕಃ ।
ದುರುಕ್ತಿಗರ್ಭಿತಂ ವ್ಯಙ್ಗಂ ನಷ್ಟಜ್ಞಾನಶ್ಶಿವೇಚ್ಛಯಾ ॥ ೫ ॥

॥ ನಾರದ ಉವಾಚಃ ॥

ಹೇ ಹರೇ ತ್ವಂ ಮಹಾದುಷ್ಟಃ ಕಪಟೀ ವಿಶ್ವಮೋಹನಃ ।
ಪರೋತ್ಸಾಹಂ ನ ಸಹಸೇ ಮಾಯಾವೀ ಮಲಿನಾಶಯಃ ॥ ೬ ॥

ಮೋಹಿನೀರೂಪಮಾದಾಯ ಕಪಟಂ ಕೃತವಾನ್ ಪುರಾ ।
ಅಸುರೇಭ್ಯೋಽಪಾಯಯಸ್ತ್ವಂ ವಾರುಣೀಮಮೃತಂ ನ ಹಿ ॥ ೭ ॥

---

೩-೪. ಸೂತನು ಹೇಳಿದನು :—ಮಾಯೆಯಿಂದ ವ್ಯಾಮರೆತ ಆ ನಾರದನು ಅವರೀರ್ವರಿಗೂ ಅರ್ಹವಾದ ಶಾಪವನ್ನಿತ್ತ ಮೇಲೆ ನೀರಿನಲ್ಲಿ ತನ್ನ ಮುಖವನ್ನೂ ಸ್ವರೂಪವನ್ನೂ, ಕಂಡು ಆಗಲೂ ಶಿವನ ಇಚ್ಛೆಯಂತೆ ಆ ಮಾಯೆಯಿಂದ ಎಚ್ಚರಗೊಳ್ಳದೆ ವಿಷ್ಣುವು ಮಾಡಿದ ಮೋಸವನ್ನು ನೆನೆದು, ಮಿತಿಮೀರಿದ ಕೋಪದಿಂದ ವಿಷ್ಣುಲೋಕಕ್ಕೆ ಹೊರಟನು.

೫. ಉರಿಯುತ್ತಿರುವ ಬೆಂಕಿಯಂತೆ ಕೋಪಾವಿಷ್ಟನಾಗಿ ಶಿವನ ಇಚ್ಛೆಯಂತೆ ಜ್ಞಾನವಿಲ್ಲದೆ ಕೆಟ್ಟಮಾತುಗಳನ್ನೂ ಭಂಡಪುಂಡಮಾತುಗಳನ್ನೂ ಆಡಿದನು.

೬. ನಾರದನು ಹೇಳಿದನು :—ಎಲೈ ಹರಿಯೇ, ನೀನು ಬಹಳ ಕೆಟ್ಟವನು. ಮೋಸಗಾರನು. ಪ್ರಪಂಚವನ್ನೇ ಮರುಳುಗೊಳಿಸಿರುವೆ. ಇನ್ನೊಬ್ಬರ ಏಳಿಗೆಯನ್ನು ನೀನು ಸಹಿಸಲಾರೆ. ಮಹಾಕೃತ್ರಿಮಿ. ನಿನ್ನ ಹೃದಯವು ಶುದ್ಧವಾಗಿಲ್ಲ.

೭. ಹಿಂದೆ ಮೋಹಿನಿಯ ವೇಷವನ್ನು ತಳೆದು ಮೋಸವನ್ನು ಮಾಡಿದೆ. ರಾಕ್ಷಸರಿಗೆ ಕುಡಿಯಲು ವಾರುಣಿ (ಮದ್ಯ) ಯನ್ನು ಕೊಟ್ಟೆಯಲ್ಲದೆ ಅಮೃತವನ್ನು ಕೊಡಲಿಲ್ಲ.

ಚೇತ್ಪಿಬೇನ್ನ ವಿಷಂ ರುದ್ರೋ ದಯಾಂ ಕೃತ್ವಾ ಮಹೇಶ್ವರಃ ।
ಭವೇನ್ನಷ್ಟಾಖಿಲಾ ಮಾಯಾ ತವ ವ್ಯಾಜರತೇ ಹರೇ ॥ ೮ ॥

ಗತಿಸ್ಸಕಪಟಾ ತೇऽತಿಪ್ರಿಯಾ ವಿಷ್ಣೋ ವಿಶೇಷತಃ ।
ಸಾಧುಸ್ವಭಾವೋ ನ ಭವಾನ್ ಸ್ವತಂತ್ರಃ ಪ್ರಭುಣಾ ಕೃತಃ ॥ ೯ ॥

ಕೃತಂ ಸಮುಚಿತಂ ನೈವ ಶಿವೇನ ಪರಮಾತ್ಮನಾ ।
ತತ್ಪ್ರಭಾವಬಲಂ ಧ್ಯಾತ್ವಾ ಸ್ವತಂತ್ರಕೃತಿಕಾರಕಃ ॥ ೧೦ ॥

ತ್ವದ್ಗತಿಂ ಸುಸಮಾಜ್ಞಾಯ ಪಶ್ಚಾತ್ತಾಪಮವಾಪ ಸಃ ।
ವಿಪ್ರಂ ಸರ್ವೋಪರಿ ಪ್ರಾಹ ಸ್ವೋಕ್ತವೇದಪ್ರಮಾಣಕೃತ್ ॥ ೧೧ ॥

ತಜ್ಜ್ಞಾತ್ವಾಹಂ ಹರೇ ತ್ವಾದ್ಯ ಶಿಕ್ಷಯಿಷ್ಯಾಮಿ ತದ್ಬಲಾತ್ ।
ಯಥಾ ನ ಕುರ್ಯಾಃ ಕುತ್ರಾಪೀದೃಶಂ ಕರ್ಮ ಕದಾಚನ ॥ ೧೨ ॥

---

೮. ಕೃಪೆಮಾಡಿ, ಮಹೇಶ್ವರನು ವಿಷವನ್ನು ಕುಡಿಯದೆ ಇದ್ದಿದ್ದರೆ, ನಿನ್ನ ಮಾಯೆಯೆಲ್ಲವೂ ನೆಪಮಾತ್ರದಿಂದ ಸುಮ್ಮನಿದ್ದ ಅವನಿಂದ ಧ್ವಂಸವಾಗಿ ಬಿಡುತ್ತಿತ್ತು.

೯. ಎಲೈ ವಿಷ್ಣುವೇ, ವಿಶೇಷವಾಗಿ ನಿನಗೆ ವಂಚನೆಯಿಂದೊಡಗೂಡಿದ ನಡತೆಯೇ ಹಿತವಾಗಿ ಬಿಟ್ಟಿದೆ. ನೀನು ಸಾಧು ಸ್ವಭಾವವುಳ್ಳವನಲ್ಲ. ಸ್ವಾಮಿಯು ಮಾತ್ರ ನಿನ್ನನ್ನು ಸ್ವತಂತ್ರನನ್ನಾಗಿ ಮಾಡಿಬಿಟ್ಟನು.

೧೦. ಆ ಪರಮಾತ್ಮನಾದ ಶಿವನು ಸರಿಯಾದ ಕೆಲಸವನ್ನು ಮಾಡಲಿಲ್ಲ. ಆತನ ಪ್ರಭಾವದ ಬಲವನ್ನರಿತು ನಿನಗೆ ತೋಚಿದಂತೆ ಸ್ವತಂತ್ರಿಸಿ ವರ್ತಿಸತೊಡಗಿರುವೆ.

೧೧. ನಿನ್ನ ನಡತೆಯನ್ನು ಅರಿತು ಅವನು ಪಶ್ಚಾತ್ತಾಪವನ್ನು ಹೊಂದಿದನು. ಆದುರಿಂದಲೇ ತನ್ನ ಬಾಯಿಂದ ಹೊರಬಿದ್ದ ವೇದಗಳೇ ಪ್ರಮಾಣವೆಂದು ಹೇಳಿದ ಆತನು ಬ್ರಾಹ್ಮಣನು ಎಲ್ಲರಿಗಿಂತಲೂ ಶ್ರೇಷ್ಠನೆಂದು ಹೇಳಿರುವನು.

೧೨. ಅದನ್ನು ನಾನು ತಿಳಿದುಕೊಂಡಿದೇನೆ. ಅದರ ಬಲದಿಂದಲೇ ನಿನ್ನನ್ನೀಗ ಶಿಕ್ಷೆ ಮಾಡುವೆನು. ಇನ್ನೆಲ್ಲಿಯೂ ಇಂತಹ ಕೆಲಸವನ್ನು ಎಂದೆಂದಿಗೂ ಮಾಡದಂತೆ ಬುದ್ಧಿ ಕಲಿಸುವೆನು.

**ಅದ್ಯಾಪಿ ನಿರ್ಭಯಸ್ತ್ವಂ ಹಿ ಸಂಗಂ ನಾಪಸ್ತರಸ್ವಿನಾ ।**
**ಇದಾನೀಂ ಲಪ್ಸ್ಯಸೇ ವಿಷ್ಣೋ ಫಲಂ ಸ್ವಕೃತಕರ್ಮಣಃ ॥ ೧೩ ॥**

**ಇತ್ಥಮುಕ್ತ್ವಾ ಹರಿಂ ಸೋಽಥ ಮುನಿರ್ಮಾಯಾವಿಮೋಹಿತಃ ।**
**ಶಶಾಪ ಕ್ರೋಧನಿರ್ವಿಣ್ಣೋ ಬ್ರಹ್ಮತೇಜಃ ಪ್ರದರ್ಶಯನ್ ॥ ೧೪ ॥**

**ಸ್ತ್ರೀಕೃತೇ ವ್ಯಾಕುಲಂ ವಿಷ್ಣೋ ಮಾಮಕಾರ್ಷೀರ್ವಿಮೋಹಕಃ ।**
**ಅನ್ವಕಾರ್ಷೀಸ್ಸ್ವರೂಪೇಣ ಯೇನ ಕಾಪಟ್ಯಕಾರ್ಯಕೃತ್ ॥ ೧೫ ॥**

**ತದ್ರೂಪೇಣ ಮನುಷ್ಯಸ್ತ್ವಂ ಭವ ತದ್ದುಃಖಭುಗ್ಘರೇ ।**
**ಯನ್ಮುಖಂ ಕೃತವಾನ್ಮೇ ತ್ವಂ ತೇ ಭವಂತು ಸಹಾಯಿನಃ ॥ ೧೬ ॥**

**ತ್ವಂ ಸ್ತ್ರೀವಿಯೋಗಜಂ ದುಃಖಂ ಲಭಸ್ವ ಪರದುಃಖದಃ ।**
**ಮನುಷ್ಯಗತಿಕಃ ಪ್ರಾಯೋ ಭವಾಜ್ಞಾನವಿಮೋಹಿತಃ ॥ ೧೭ ॥**

---

೧೩. ಕೋಪಿಷ್ಠನೊಬ್ಬನೊಡನೆಯೂ ಇದುವರೆಗೆ ನೀನು ವ್ಯವಹರಿಸದೇ ಇದ್ದುದರಿಂದ ನಿರ್ಭಯವಾಗಿದ್ದೆ. ಈಗಲೀಗ ನೀಮಾಡಿದ ಕೆಲಸಕ್ಕೆ ತಕ್ಕ ಫಲವನ್ನು ಅನುಭವಿಸುವೆ.

೧೪. ಮಾಯೆಯಿಂದ ಮೋಹಿತನಾದ ಆ ನಾರದನು ಹರಿಯನ್ನು ಕುರಿತು ಹೀಗೆ ಹೇಳಿ, ಕೋಪದಿಂದ ಮುಂದುಗಾಣದೆ ಬ್ರಹ್ಮತೇಜಸ್ಸಿನ ಹೆಮ್ಮೆಯಿಂದ ಶಪಿಸಿಬಿಟ್ಟನು.

೧೫—೧೭. ಒಬ್ಬ ಹೆಂಗಸಿಗೋಸ್ಕರವಾಗಿ, ಎಲ್ಲರನ್ನೂ ಮರಳುಗೊಳಿಸುವ ನೀನು ನನ್ನನ್ನು ವ್ಯಾಕುಲನನ್ನಾಗಿ ಮಾಡಿರುವೆ. ಅಲ್ಲದೆ ಆ ಮೋಸಕೃತ್ಯವನ್ನೆಸಗುವಾಗ ಯಾವ ಸ್ವರೂಪವನ್ನು ತಳೆದು ಅನುಕರಣೆಮಾಡಿದೆಯೋ ಆ ರೂಪದಿಂದ ನೀನು ಮನುಷ್ಯನಾಗಿ ಹುಟ್ಟಿ ಆ ದುಃಖವನ್ನು ಅನುಭವಿಸು. ನನ್ನ ಮುಖವನ್ನು ಯಾವ ಪ್ರಾಣಿಯ ಮುಖದಂತೆ ಮಾಡಿದೆಯೋ ಆ ಕಪಿಗಳು ನಿನಗೆ ಸಹಾಯಕರಾಗಲಿ. ಎಲೈ ಹರಿಯೇ, ಮತ್ತೊಬ್ಬರನ್ನು ಸಂಕಟಪಡಿಸುವುದೇ ನಿನ್ನ ಕೆಲಸವಾಗಿರುವುದರಿಂದ ನೀನು ಸ್ತ್ರೀವಿಯೋಗದಿಂದುಂಟಾದ ದುಃಖವನ್ನು ಹೊಂದಿ, ಸಾಮಾನ್ಯ ಮನುಷ್ಯನಂತೆ ಅಜ್ಞಾನದಿಂದ ತಿಳುವಳಿಕೆಯಿಲ್ಲದೆ ತೊಳಲುತ್ತಾ ಇರು.

**ಇತಿ ಶಪ್ತ್ವಾ ಹರಿಂ ಮೋಹಾನ್ನಾರದೋಽಜ್ಞಾನಮೋಹಿತಃ ।**
**ವಿಷ್ಣುರ್ಜಗ್ರಾಹ ತಂ ಶಾಪಂ ಪ್ರಶಂಸನ್ ಶಾಂಭವೀಮಜಾಂ ॥ ೧೮ ॥**

**ಅಥ ಶಂಭುರ್ಮಹಾಲೀಲೋ ನಿಶ್ಚಕರ್ಷ ವಿಮೋಹಿನೀಂ ।**
**ಸ್ವಮಾಯಾಂ ಮೋಹಿತೋ ಜ್ಞಾನೀ ನಾರದ್ಯೋಽಪ್ಯಭವದ್ಯಯಾ ॥ ೧೯ ॥**

**ಅಂತರ್ಹಿತಾಯಾಂ ಮಾಯಾಯಾಂ ಪೂರ್ವವತ್ಸ್ಮೃತಿಮಾನಭೂತ್ ।**
**ನಾರದೋ ವಿಸ್ಮಿತಮನಾಃ ಪ್ರಾಪ್ತಬೋಧೋ ನಿರಾಕುಲಃ ॥ ೨೦ ॥**

**ಪಶ್ಚಾತ್ತಾಪಮವಾಪ್ಯಾತಿ ನಿನಿಂದ ಸ್ವಂ ಮುಹುರ್ಮುಹುಃ ।**
**ಪ್ರಶಶಂಸ ತದಾ ಮಾಯಾಂ ಶಾಂಭವೀಂ ಜ್ಞಾನಿಮೋಹಿನೀಂ ॥ ೨೧ ॥**

**ಅಥ ಜ್ಞಾತ್ವಾ ಮುನಿಸ್ಸರ್ವಂ ಮಾಯಾವಿಭ್ರಮಮಾತ್ಮನಃ ।**
**ಅಪತತ್ಪಾದಯೋರ್ವಿಷ್ಣೋರ್ನಾರದೋ ವೈಷ್ಣವೋತ್ತಮಃ ॥ ೨೨ ॥**

---

೧೮. ಹೀಗೆ ಆ ನಾರದನು ಅಜ್ಞಾನದಿಂದ ಮೋಹಿತನಾಗಿ ವಿಷ್ಣುವನ್ನು ಶಪಿಸಿಬಿಟ್ಟನು. ವಿಷ್ಣುವೂ ಸಹ ಅನಾದಿಯಾದ ಶಿವನ ಮಾಯೆಯನ್ನು ಹೊಗಳುತ್ತಾ, ಆ ಶಾಪವನ್ನು ಪರಿಗ್ರಹಿಸಿದನು.

೧೯. ಯಾವ ಮಾಯೆಯ ಪ್ರಭಾವಕ್ಕೆ ಸಿಲುಕಿ ಜ್ಞಾನಿಯಾದ ನಾರದನೂ ಮೋಹಿತನಾಗಿ ಬಿಟ್ಟನೋ, ಆ ಸರ್ವಮೋಹಕವಾದ ತನ್ನ ಮಾಯೆಯನ್ನು ಲೀಲಾಮಯನಾದ ಆ ಶಿವನು ಉಪಸಂಹರಿಸಿಬಿಟ್ಟನು.

೨೦. ಮಾಯೆಯು ಬಿಟ್ಟುಹೋದ ಮೇಲೆ, ನಾರದನು ಮೊದಲಿನಂತೆ ಬುದ್ಧಿಯನ್ನು ಪಡೆದನು. ವಿವೇಕವನ್ನು ಹೊಂದಿ, ಮಂಕುತನವು ಕವಿದಿದ್ದುದರಿಂದ ಉಂಟಾದ ಭ್ರಾಂತಿಯೊಂದೂ ಇಲ್ಲದೆ ವಿಸ್ಮಯಗೊಂಡನು.

೨೧. ಆಗ ನಾರದನು ಬಹಳ ಪಶ್ಚಾತ್ತಾಪಪಟ್ಟು ತನ್ನನ್ನು ಬಾರಿಬಾರಿಗೂ ನಿಂದಿಸಿಕೊಂಡನು. ಮತ್ತು ಜ್ಞಾನಿಗಳಿಗೂ ಮಂಕುಹಿಡಿಸುವ ಶಿವನ ಮಾಯೆಯನ್ನು ಹೊಗಳಿದನು.

೨೨. ಆಮೇಲೆ ವಿಷ್ಣುಭಕ್ತಾಗ್ರೇಸರನಾದ ಆ ನಾರದ ಮಹರ್ಷಿಯು ತಾನು ಆಚರಿಸಿದ ಮಂಕುತನದ ನಡೆವಳಿಕೆಗಳನ್ನೂ ತಿಳಿದುಕೊಂಡು ಶ್ರೀಮನ್ನಾರಾಯಣನ ಪಾದಗಳ ಮೇಲೆ ಬಿದ್ದನು.

**ಹರ್ಷ್ಯಪಸ್ಥಾಪಿತಃ ಪ್ರಾಹ ವಚನಂ ನಷ್ಟದುರ್ಮತಿಃ ।**
**ಮಯಾ ದುರುಕ್ತಯಃ ಪ್ರೋಕ್ತಾ ಮೋಹಿತೇನ ಕುಬುದ್ಧಿನಾ ॥ ೨೩ ॥**

**ದತ್ತಃ ಶಾಪೋಽಪಿ ತೇ ನಾಥ ವಿತಥಂ ಕುರು ತಂ ಪ್ರಭೋ ।**
**ಮಹತ್ಪಾಪಮುಕಾರ್ಷಂ ಹಿ ಯಾಸ್ಯಾಮಿ ನಿರಯಂ ಧ್ರುವಂ ॥ ೨೪ ॥**

**ಕಮುಪಾಯಂ ಹರೇ ಕುರ್ಯಾಂ ದಾಸೋಽಹಂ ತೇ ತಮಾದಿಶ ।**
**ಯೇನ ಪಾಪಕುಲಂ ನಶ್ಯೇನ್ನಿರಯೋ ನ ಭವೇನ್ಮಮ ॥ ೨೫ ॥**

**ಇತ್ಯುಕ್ತ್ವಾ ಸ ಪುನರ್ವಿಷ್ಣೋಃ ಪಾದಯೋರ್ಮುನಿಸತ್ತಮಃ ।**
**ಪಪಾತ ಸುಮತಿರ್ಭಕ್ತ್ಯಾ ಪಶ್ಚಾತ್ತಾಪಸಮನ್ವಿತಃ ॥ ೨೬ ॥**

**ಅಥ ವಿಷ್ಣುಸ್ತಮುತ್ಥಾಪ್ಯ ಬಭಾಷೇ ಸೂನೃತಂ ವಚಃ ।**
**॥ ವಿಷ್ಣುರುವಾಚ ॥**
**ನ ಖೇದಂ ಕುರು ಮೇ ಭಕ್ತ ವರಸ್ತ್ವಂ ನಾತ್ರ ಸಂಶಯಃ ॥ ೨೭ ॥**

೨೩. ಬಳಿಕ ವಿಷ್ಣುವು ಅವನನ್ನು ಮೇಲೆತ್ತಿ ಕುಳ್ಳಿರಿಸಿದನು. ಕೆಟ್ಟಬುದ್ಧಿಯೆಲ್ಲವೂ ತೊಲಗಲು, ಆ ನಾರದನು ಇಂತೆಂದನು—ಮೋಹಿತನೂ, ಕೆಟ್ಟಬುದ್ಧಿಯುಳ್ಳವನೂ ಆದ ನಾನು ನಿನ್ನ ವಿಷಯದಲ್ಲಿ ಬಹುವಿಧವಾಗಿ ಕೆಟ್ಟಕೆಟ್ಟ ಮಾತುಗಳನ್ನು ಆಡಿಬಿಟ್ಟೆ.

೨೪. ಇಷ್ಟೇ ಅಲ್ಲದೆ ನಿನಗೆ ಶಾಪವನ್ನೂ ಕೊಟ್ಟುಬಿಟ್ಟೆ. ಎಲೈ ಸ್ವಾಮಿಯೇ, ಆ ಶಾಪವು ವ್ಯರ್ಥವಾಗುವಂತೆ ಮಾಡು. ನಾನು ಮಹಾಪಾಪವನ್ನು ಮಾಡಿಬಿಟ್ಟೆ. ಖಂಡಿತವಾಗಿಯೂ ನನಗೆ ನರಕವು ಸಿದ್ಧ.

೨೫. ಓ ಹರೀ, ನಾನು ಯಾವ ಉಪಾಯವನ್ನು ಮಾಡಲಿ? ನಾನು ನಿನ್ನ ಸೇವಕನು. ಅಪ್ಪಣೆ ಮಾಡು. ನನ್ನ ಪಾಪರಾಶಿಯು ಹೇಗೆ ನಾಶವಾಗುವುದು? ನರಕವು ತಪ್ಪಿಹೋಗುವ ಮಾರ್ಗವಾವುದು?

೨೬. ಹೀಗೆಂದು ಹೇಳಿ ವಿವೇಕಶಾಲಿಯೂ, ಪಶ್ಚಾತ್ತಾಪದಿಂದ ದಗ್ಧನೂ ಆದ ಆ ಮುನಿಶ್ರೇಷ್ಠನು ಮತ್ತೊಮ್ಮೆ ಭಕ್ತಿಯಿಂದ ವಿಷ್ಣುವಿನ ಪಾದಗಳನ್ನು ನಮಸ್ಕರಿಸಿದನು.

೨೭. ಬಳಿಕ ವಿಷ್ಣುವು ಆ ನಾರದನನ್ನು ಮೇಲಕ್ಕೆಬ್ಬಿಸಿ ಪ್ರಿಯವಾದ ಮಾತುಗಳನ್ನಾಡಿದನು. ಓ ಭಕ್ತಾಗ್ರೇಸರ, ನೀನು ವ್ಯಥೆಪಡಬೇಡ. ನೀನು ಶ್ರೇಷ್ಠನೇ ಸರಿ. ಇದರಲ್ಲಿ ಸಂದೇಹವಿಲ್ಲ.

**ಶೃಣು ತಾತ ಪ್ರವಕ್ಷ್ಯಾಮಿ ಸುಹಿತಂ ತವ ನಿಶ್ಚಯಾತ್ ।**
**ನಿರಯಸ್ತೇ ನ ಭವಿತಾ ಶಿವಶ್ಶಂ ತೇ ವಿಧಾಸ್ಯತಿ ॥ ೨೮ ॥**

**ಯದಕಾರ್ಷೀಶ್ಶಿವವಚೋ ವಿತಥಂ ಮದಮೋಹಿತಃ ।**
**ಸ ದತ್ತವಾನೀದೃಶಂ ತೇ ಫಲಂ ಕರ್ಮಫಲಪ್ರದಃ ॥ ೨೯ ॥**

**ಶಿವೇಚ್ಛಯಾಽಖಿಲಂ ಜಾತಂ ಕುರ್ವಿತ್ಥಂ ನಿಶ್ಚಿತಾಂ ಮತಿಂ ।**
**ಗರ್ವಾಪಹರ್ತಾ ಸ ಸ್ವಾಮೀ ಶಂಕರಃ ಪರಮೇಶ್ವರಃ ॥ ೩೦ ॥**

**ಪರಂ ಬ್ರಹ್ಮ ಪರಾತ್ಮಾ ಸ ಸಚ್ಚಿದಾನಂದಬೋಧನಃ ।**
**ನಿರ್ಗುಣೋ ನಿರ್ವಿಕಾರೀ ಚ ರಜಸ್ಸತ್ತ್ವತಮಃಪರಃ ॥ ೩೧ ॥**

**ಸ ಏವಾದಾಯ ಮಾಯಾಂ ಸ್ವಾಂ ತ್ರಿಧಾ ಭವತಿ ರೂಪತಃ ।**
**ಬ್ರಹ್ಮವಿಷ್ಣುಮಹೇಶಾತ್ಮಾ ನಿರ್ಗುಣೋಽನಿರ್ಗುಣೋಽಪಿ ಸಃ ॥ ೩೨ ॥**

---

೨೮. ಅಪ್ಪಾ ಕೇಳು, ಖಂಡಿತವಾಗಿಯೂ ನಿನಗೆ ಪ್ರಿಯವಾದ ಮಾತನ್ನು ಹೇಳುತ್ತೇನೆ. ನೀನೆಂದಿಗೂ ನರಕಕ್ಕೆ ಹೋಗಲಾರೆ. ಶಿವನು ನಿನಗೆ ಒಳ್ಳೆಯದನ್ನು ಮಾಡುವನು.

೨೯. ನೀನು ಹೆಮ್ಮೆಯಿಂದ ಮೈಮರೆತು ಶಿವನ ಮಾತನ್ನು ವ್ಯರ್ಥವಾಗಿ ಕಡೆಗಾಣಿಸಿದೆ. ಆದುದರಿಂದಲೇ ಮಾಡಿದ ಕರ್ಮಗಳ ಫಲವನ್ನು ನೀಡುವ ಆತನು ನಿನಗೆ ಇಂತಹ ಫಲವನ್ನು ಇತ್ತನು.

೩೦. ಇದೆಲ್ಲವೂ ಶಿವನ ಇಚ್ಛೆಯಿಂದಲೇ ನಡೆಯಿತೆಂದು ದೃಢವಾಗಿ ತಿಳಿದುಕೋ. ಎಲ್ಲರಿಗೂ ಪ್ರಭುವಾದ ಆ ಶಂಕರನು ದುರಹಂಕಾರವನ್ನು ಅಣಗಿಸಿ ಬಿಡುವನು.

೩೧. ಆತನೇ ಪರಬ್ರಹ್ಮವು. ಸಚ್ಚಿದಾನಂದಸ್ವರೂಪನಾದ ಪರಮಾತ್ಮನು. ಗುಣಶೂನ್ಯನು. ವಿಕಾರರಹಿತನು. ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳಿಗೂ ಮೀರಿದವನು.

೩೨. ಆ ಶಿವನೇ ತನ್ನ ಮಾಯೆಯನ್ನು ಅವಲಂಬಿಸಿ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರು ರೂಪಗಳನ್ನು ಧರಿಸುತ್ತಾನೆ. ಅವನು ನಿರ್ಗುಣನೂ, ಸಗುಣನೂ ಆಗಿರುವನು

**ನಿರ್ಗುಣತ್ವೇ ಶಿವಾಹ್ವೋ ಹಿ ಪರಮಾತ್ಮಾ ಮಹೇಶ್ವರಃ ।**
**ಪರಂ ಬ್ರಹ್ಮಾವ್ಯಯೋಽನಂತೋ ಮಹಾದೇವೇತಿ ಗೀಯತೇ ॥ ೩೩ ॥**

**ತತ್ಸೇವಯಾ ವಿಧಿಸ್ಸ್ರಷ್ಟಾ ಪಾಲಕೋ ಜಗತಾಮಹಂ ।**
**ಸ್ವಯಂ ಸರ್ವಸ್ಯ ಸಂಹಾರೀ ರುದ್ರರೂಪೇಣ ಸರ್ವದಾ ॥ ೩೪ ॥**

**ಸಾಕ್ಷೀ ಶಿವಸ್ವರೂಪೇಣ ಮಾಯಾಭಿನ್ನಸ್ಸ ನಿರ್ಗುಣಃ ।**
**ಸ್ವೇಚ್ಛಾಚಾರೀ ಸಂವಿಹಾರೀ ಭಕ್ತಾನುಗ್ರಹಕಾರಕಃ ॥ ೩೫ ॥**

**ಶೃಣು ತ್ವಂ ನಾರದ ಮುನೇ ಸದುಪಾಯಂ ಸುಖಪ್ರದಂ ।**
**ಸರ್ವಪಾಪಾಪಹರ್ತಾರಂ ಭುಕ್ತಿಮುಕ್ತಿಪ್ರದಂ ಸದಾ ॥ ೩೬ ॥**

**ತ್ಯಕ್ತ್ವಾ ಸ್ವಸಂಶಯಂ ಸರ್ವಂ ಗಾಯ ಶಂಕರಸದ್ಯಶಃ ।**
**ಶತನಾಮಶಿವಸ್ತೋತ್ರಂ ಸದಾಽನನ್ಯಮತಿರ್ಜಪ ॥ ೩೭ ॥**

---

೩೩. ನಿರ್ಗುಣತ್ವಾವಸ್ಥೆಯಲ್ಲಿ ಶಿವನೆಂದು ಹೆಸರನ್ನು ಪಡೆದ ಪರಮಾತ್ಮನಾದ ಆ ಮಹೇಶ್ವರನು ಪರಬ್ರಹ್ಮ, ಅವ್ಯಯ, ಅನಂತ, ಮಹಾದೇವ ಎಂಬುದಾಗಿಯೂ, ಕರೆಯಲ್ಪಡುತ್ತಾನೆ.

೩೪. ಆ ಶಿವನನ್ನು ಸೇವಿಸಿಯೇ, ಬ್ರಹ್ಮನು ಜಗತ್ತಿಗೆ ಸೃಷ್ಟಿಕರ್ತನಾದನು. ನಾನು ಅದನ್ನು ಕಾಪಾಡುವವನಾದೆನು. ಆ ಶಿವನು ತಾನಾಗಿಯೇ ರುದ್ರರೂಪವನ್ನು ಧರಿಸಿ ಇವೆಲ್ಲವನ್ನೂ ಸಂಹರಿಸುವನು.

೩೫. ಆತನು ಗುಣರಹಿತಾವಸ್ಥೆಯಲ್ಲಿ ಮಾಯೆಗೆ ಅಭಿನ್ನವಾಗಿ ಶಿವಸ್ವರೂಪ ದಿಂದ ಸಾಕ್ಷಿಭೂತನಾಗಿರುವನು. ಆತನು ತನ್ನ ಇಷ್ಟಬಂದಂತೆ ನಡೆಯತಕ್ಕವನು. ಸರ್ವಸ್ವತಂತ್ರನು. ಸದಾ ವಿಹರಿಸುತ್ತಿರತಕ್ಕವನು. ಭಕ್ತರನ್ನು ಅನುಗ್ರಹಿಸ ತಕ್ಕವನು.

೩೬-೩೭. ಓ ನಾರದ, ಸರ್ವ ಪಾಪಗಳನ್ನೂ ಹೋಗಲಾಡಿಸುವ, ಮತ್ತು ಭೋಗಗಳನ್ನೂ, ಮೋಕ್ಷವನ್ನೂ ಕೊಡುವ, ಯಾವಾಗಲೂ ಸುಖದಾಯಕವಾದ ಒಂದು ಒಳ್ಳೆಯ ಉಪಾಯವನ್ನು ಹೇಳುವೆನು ಕೇಳು. ನಿನ್ನ ಸಂಶಯವೆಲ್ಲವನ್ನೂ ಬಿಟ್ಟುಬಿಟ್ಟು ಶಂಕರನ ಸತ್ಕೀರ್ತಿಯನ್ನು ಯಾವಾಗಲೂ ಗಾನಮಾಡುತ್ತಿರು. ಯಾವುದನ್ನು ಜಪಿಸಲು ನಿನ್ನ ಪಾಪವೆಲ್ಲವೂ ಬಹು ಬೇಗನೇ ನಾಶವಾಗಿ ಹೋಗುವುದೋ ಅಂತಹ ಶಿವಶತನಾಮಸ್ತೋತ್ರವನ್ನು ಅನನ್ಯಮನಸ್ಸಿನಿಂದ ಸದಾ ಜಪಿಸುತ್ತಿರು.

ಮುಜ್ಞಪಿತ್ವಾ ದ್ರುತಂ ಸರ್ವಂ ತವ ಪಾಪಂ ವಿನಶ್ಯತಿ ।
ಇತ್ಯುಕ್ತ್ವಾ ನಾರದಂ ವಿಷ್ಣುಃ ಪುನಃ ಪ್ರಾಹ ದಯಾನ್ವಿತಃ ॥ ೩೮ ॥

ಮುನೇ ನ ಕುರು ಶೋಕಂ ತ್ವಂ ತ್ವಯಾ ಕಿಂಚಿತ್ಕೃತಂ ನ ಹಿ ।
ಸ್ವೇಚ್ಛಯಾ ಕೃತವಾನ್ ಶಂಭುರಿದಂ ಸರ್ವಂ ನ ಸಂಶಯಃ ॥ ೩೯ ॥

ಅಹಾರ್ಷೀತ್ತ್ವನ್ಮತಿಂ ದಿವ್ಯಾಂ ಕಾಮಕ್ಲೇಶಮುದಾತ್ಸ ತೇ ।
ತ್ವನ್ಮುಖಾದ್ದಾಪಯಾಂಚಕ್ರೇ ಶಾಪಂ ಮೇ ಸ ಮಹೇಶ್ವರಃ ॥ ೪೦ ॥

ಇತ್ಥಂ ಸ್ವಚರಿತಂ ಲೋಕೇ ಪ್ರಕಟೀಕೃತವಾನ್ ಸ್ವಯಂ ।
ಮೃತ್ಯುಂಜಯಃ ಕಾಲಕಾಲೋ ಭಕ್ತೋದ್ಧಾರಪರಾಯಣಃ ॥ ೪೧ ॥

ನ ಮೇ ಶಿವಸಮಾನೋಽಸ್ತಿ ಪ್ರಿಯಸ್ಸ್ವಾಮೀ ಸುಖಪ್ರದಃ ।
ಸರ್ವಶಕ್ತಿಪ್ರದೋ ಮೇಽಸ್ತಿ ಸ ಏವ ಪರಮೇಶ್ವರಃ ॥ ೪೨ ॥

---

೩೮-೩೯. ಹೀಗೆ ವಿಷ್ಣುವು ನಾರದನಿಗೆ ಹೇಳಿ, ಮತ್ತೆ ಕನಿಕರದಿಂದ ಹೇಳ ತೊಡಗಿದನು. ಓ ಮುನೀಂದ್ರ, ನೀನು ಇದಕ್ಕಾಗಿ ವ್ಯಥೆಪಡಬೇಡ. ನಿನ್ನಿಂದ ಯಾವುದೂ ನಡೆಯಲಿಲ್ಲ. ಇದೆಲ್ಲವನ್ನೂ ಆ ಶಂಭುವೇ ತನ್ನ ಇಚ್ಛೆಯಂತೆ ನೆರ ವೇರಿಸಿದನು. ಇದು ನಿಜ.

೪೦. ನಿನ್ನ ಶುದ್ಧವಾದ ದಿವ್ಯಜ್ಞಾನವನ್ನು ಅವನೇ ಅಪಹರಿಸಿದನು. ನಿನಗೆ ಈರೀತಿ ಕಾಮವಿಕಾರದಿಂದ ತೊಳಲುವಂತೆ ಆದುದೂ ಅವನಿಂದಲೇ. ಆ ಮಹೇಶ್ವ ರನೇ ನನಗೆ ನಿನ್ನಿಂದ ಶಾಪವನ್ನು ಕೊಡಿಸಿದವನು.

೪೧. ಭಕ್ತರನ್ನು ಉದ್ಧಾರಮಾಡುವುದೇ ಕೆಲಸವಾಗಿ ಉಳ್ಳ, ಕಾಲನಿಗೂ ಕಾಲನಾದ ಆ ಮೃತ್ಯುಂಜಯನು ಈರೀತಿ ತಾನಾಗಿಯೇ ತನ್ನ ಚರಿತ್ರೆಯನ್ನು ಲೋಕದಲ್ಲಿ ಪ್ರಕಟಮಾಡಿದನು.

೪೨. ಶಿವನಿಗೆ ಸಮಾನನಾದ ಪ್ರಿಯನೂ, ಸ್ವಾಮಿಯೂ, ಸುಖದಾಯಕನೂ, ಆದವನು ನನಗೆ ಬೇರೊಬ್ಬನಿಲ್ಲ. ಆ ಪರಮೇಶ್ವರನೇ ನನಗೆ ಇಷ್ಟೆಲ್ಲ ಶಕ್ತಿಗಳನ್ನು ಕೊಟ್ಟಿರತಕ್ಕವನು.

**ತಸ್ಯೋಪಾಸ್ಯಾಂ ಕುರು ಮುನೇ ತಮೇವ ಸತತಂ ಭಜ ।**
**ತದ್ಯಶಃ ಶೃಣು ಗಾಯ ತ್ವಂ ಕುರು ನಿತ್ಯಂ ತದರ್ಚನಂ ॥ ೪೩ ॥**

**ಕಾಯೇನ ಮನಸಾ ವಾಚಾ ಯಶ್ಶಂಕರಮುಪೈತಿ ಭೋ ।**
**ಸ ಪಂಡಿತ ಇತಿ ಜ್ಞೇಯಸ್ಸ ಜೀವನ್ಮುಕ್ತ ಉಚ್ಯತೇ ॥ ೪೪ ॥**

**ಶಿವೇತಿ ನಾಮದಾವಾಗ್ನೇರ್ಮಹಾಪಾತಕಪರ್ವತಾಃ ।**
**ಭಸ್ಮೀಭವಂತ್ಯನಾಯಾಸಾತ್ಸತ್ಯಂ ಸತ್ಯಂ ನ ಸಂಶಯಃ ॥ ೪೫ ॥**

**ಪಾಪಮೂಲಾನಿ ದುಃಖಾನಿ ವಿವಿಧಾನ್ಯಪಿ ತಾನ್ಯತಃ ।**
**ಶಿವಾರ್ಚನೈಕನಶ್ಯಾನಿ ನಾನ್ಯನಶ್ಯಾನಿ ಸರ್ವಥಾ ॥ ೪೬ ॥**

**ಸ ವೈದಿಕಸ್ಸ ಪುಣ್ಯಾತ್ಮಾ ಸ ಧನ್ಯಸ್ಸ ಬುಧೋ ಮುನೇ ।**
**ಯಸ್ಸದಾ ಕಾಯವಾಕ್ಚಿತ್ತೈಶ್ಶರಣಂ ಯಾತಿ ಶಂಕರಂ ॥ ೪೭ ॥**

---

೪೩. ಓ ಮುನೀಂದ್ರ, ಆ ಶಿವನ ಸೇವೆಯನ್ನು (ಉಪಾಸನೆ) ಮಾಡು. ಯಾವಾಗಲೂ ಅವನನ್ನೇ ಭಜಿಸುತ್ತಿರು. ಅವನ ಕೀರ್ತಿಯನ್ನು ಕೇಳು. ಅಷ್ಟೇ ಅಲ್ಲ. ಅದರ ಸಂಕೀರ್ತನೆಯನ್ನೂ ಮಾಡು. ಸದಾ ಆತನನ್ನು ಪೂಜಿಸುತ್ತಿರು.

೪೪. ಯಾವನು ತನ್ನ ಶರೀರದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ, ಶಿವನನ್ನು ಸೇವಿಸುವನೋ ಅವನೇ ಪಂಡಿತನೆಂದು ತಿಳಿ. ಅಂಥವನೇ ಜೀವನ್ಮುಕ್ತನೆನಿಸುವನು.

೪೫. ಶಿವನ ನಾಮವೆಂಬ ಕಾಡುಗಿಚ್ಚಿಗೆ ಸಿಲುಕಿ ಮಹಾಪಾಪಗಳೆಂಬ ಪರ್ವತಗಳೂ ಸಹ ನಿರಾಯಾಸವಾಗಿ ಸುಟ್ಟು ಬೂದಿಯಾಗುವುವು. ಇದು ಸತ್ಯ. ನಿಜ. ಇದರಲ್ಲಿ ಸಂದೇಹವಿಲ್ಲ.

೪೬. ನಾನಾ ವಿಧವಾದ ದುಃಖಗಳೆಲ್ಲಕ್ಕೂ ಪಾಪವೇ ಮೂಲಕಾರಣವು. ಅವೆಲ್ಲವೂ ಶಿವಾರ್ಚನೆಯೊಂದರಿಂದಲೇ ನಾಶವಾಗುವವು. ಮತ್ತಿನ್ನಾವುದರಿಂದಲೂ ಏನೇಮಾಡಲಿ ಅವು ನಾಶವಾಗುವುದಿಲ್ಲ.

೪೭. ಯಾವ ಪುರುಷನು ತನ್ನ ದೇಹದಿಂದಲೂ, ಮಾತಿನಿಂದಲೂ, ಮನಸ್ಸಿನಿಂದಲೂ ಸದಾ ಶಿವನನ್ನೇ ಮರೆಹೊಗುವನೋ ಆತನೇ ವೈದಿಕನು. ಆತನೇ ಪುಣ್ಯಾತ್ಮನು. ಆತನೇ ಧನ್ಯನು. ಆತನೇ ವಿವೇಕಿಯು.

ಭವನ್ತಿ ವಿವಿಧಾ ಧರ್ಮಾ ಯೇಷಾಂ ಸದ್ಯಃ ಫಲೋನ್ಮುಖಾಃ ।
ತೇಷಾಂ ಭವತಿ ವಿಶ್ವಾಸಸ್ತ್ರಿಪುರಾಂತಕಪೂಜನೇ ॥ ೪೮ ॥

ಪಾತಕಾನಿ ವಿನಶ್ಯಂತಿ ಯಾವಂತಿ ಶಿವಪೂಜಯಾ ।
ಭುವಿ ತಾವಂತಿ ಪಾಪಾನಿ ನ ಸಂತ್ಯೇನ ಮಹಾಮುನೇ ॥ ೪೯ ॥

ಬ್ರಹ್ಮಹತ್ಯಾದಿಪಾಪಾನಾಂ ರಾಶಯೋಽಪ್ಯಮಿತಾ ಮುನೇ ।
ಶಿವಸ್ಮೃತ್ಯಾ ವಿನಶ್ಯಂತಿ ಸತ್ಯಂ ಸತ್ಯಂ ವದಾಮ್ಯಹಂ ॥ ೫೦ ॥

ಶಿವನಾಮತರೀಂ ಪ್ರಾಪ್ಯ ಸಂಸಾರಾಬ್ಧಿಂ ತರಂತಿ ತೇ ।
ಸಂಸಾರಮೂಲಪಾಪಾನಿ ತಸ್ಯ ನಶ್ಯಂತ್ಯಸಂಶಯಂ ॥ ೫೧ ॥

ಸಂಸಾರಮೂಲಭೂತಾನಾಂ ಪಾತಕಾನಾಂ ಮಹಾಮುನೇ ।
ಶಿವನಾಮಕುಠಾರೇಣ ವಿನಾಶೋ ಜಾಯತೇ ಧ್ರುವಂ ॥ ೫೨ ॥

---

೪೮. ನಾನಾವಿಧವಾದ ಧರ್ಮಕಾರ್ಯಗಳು ಯಾರಿಗೆ ಸದ್ಯದಲ್ಲಿಯೇ ಫಲವನ್ನು ನೀಡಲು ಹಾತೊರೆಯುತ್ತಿರುವುವೋ ಅಂಥವರಿಗೆ ಮಾತ್ರ ಆ ತ್ರಿಪುರಸಂಹಾರಿಯಾದ ಶಿವನನ್ನು ಪೂಜಿಸುವ ವಿಷಯದಲ್ಲಿ ನಂಬಿಕೆಯುಂಟಾಗುವುದು.

೪೯. ಓ ಮಹರ್ಷಿ, ಶಿವನನ್ನು ಪೂಜಿಸಲು ಎಷ್ಟು ಪಾಪಗಳು ನಾಶವಾಗುವವೋ ಅಷ್ಟು ಪಾಪಗಳು ಈ ಭೂಮಿಯಲ್ಲಿ ಇಲ್ಲವೆಂದೇ ತಿಳಿ. ಎಂದರೆ ಶಿವಪೂಜೆಯಿಂದ ಎಲ್ಲ ಪಾಪಗಳೂ ನಾಶವಾಗುವವು.

೫೦. ಅಪರಿಮಿತಗಳಾದ ಬ್ರಹ್ಮಹತ್ಯಾದಿಮಹಾಪಾತಕರಾಶಿಗಳೂ ಸಹ ಶಿವಸ್ಮರಣೆಯಿಂದ ನಾಶವಾಗುವುವು. ಇದು ನಿಜ. ಸತ್ಯವಾಗಿ ಹೇಳುತ್ತೇನೆ.

೫೧. ಶಿವನಾಮವೆಂಬ ಹಡಗನ್ನು ಏರಿದವರು ಈ ಸಂಸಾರಸಾಗರವನ್ನು ದಾಟುವರು. ನಿಸ್ಸಂಶಯವಾಗಿ ಈ ಸಂಸಾರಕ್ಕೆ ಕಾರಣವಾದ ಪಾಪಗಳೆಲ್ಲವೂ ನಾಶವಾಗುವುವು.

೫೨. ಎಲೈ ಮಹಾಮುನಿಯೇ, ಖಂಡಿತವಾಗಿಯೂ ಶಿವನಾಮವೆಂಬ ಕೊಡಲಿಯಿಂದ ಸಂಸಾರಕ್ಕೆ ಕಾರಣಭೂತಗಳಾದ ಪಾತಕಗಳು ವಿನಾಶವನ್ನು ಹೊಂದುವುವು.

**ಶಿವನಾಮಾಮೃತಂ ಪೇಯಂ ಪಾಪದಾವಾನಲಾರ್ದಿತೈಃ ।**
**ಪಾಪದಾವಾಗ್ನಿತಪ್ತಾನಾಂ ಗತಿಸ್ತೇನ ವಿನಾ ನ ಹಿ ॥ ೫೩ ॥**

**ಶಿವೇತಿ ನಾಮಪೀಯೂಷವರ್ಷಧಾರಾಪರಿಪ್ಲುತಾಃ ।**
**ಸಂಸಾರದವಮಧ್ಯೇಽಪಿ ನ ಶೋಚಂತಿ ನ ಸಂಶಯಃ ॥ ೫೪ ॥**

**ನ ಭಕ್ತಿಶ್ಶಂಕರೇ ಪುಂಸಾಂ ರಾಗದ್ವೇಷರತಾತ್ಮನಾಂ ।**
**ತದ್ವಿಧಾನಾಂ ಹಿ ಸಹಸಾ ಮುಕ್ತಿರ್ಭವತಿ ಸರ್ವಥಾ ॥ ೫೫ ॥**

**ಅನಂತಜನ್ಮಭಿರ್ಯೇನ ತಪಸ್ತಪ್ತಂ ಭವಿಷ್ಯತಿ ॥**
**ತಸ್ಯೈವ ಭಕ್ತಿರ್ಭವತಿ ಭವಾನೀಪ್ರಾಣವಲ್ಲಭೇ ॥ ೫೬ ॥**

**ಜಾತಾಪಿ ಶಂಕರೇ ಭಕ್ತಿರನ್ಯಸಾಧಾರಣೀ ವೃಥಾ ।**
**ಪರಂ ತ್ವವ್ಯಭಿಚಾರೇಣ ಶಿವಭಕ್ತಿರಪೇಕ್ಷಿತಾ ॥ ೫೭ ॥**

---

೫೩. ಪಾಪವೆಂಬ ಕಾಡುಗಿಚ್ಚಿನಿಂದ ಪರಿತಪಿಸುತ್ತಿರುವವರಿಗೆ ಶಿವನಾಮಾಮೃತವೊಂದೇ ಪಾನೀಯವು. ಅಂಥವರಿಗೆ ಅದನ್ನು ಬಿಟ್ಟರೆ ಬೇರೆ ಗತಿಯಿಲ್ಲ.

೫೪. ಶಿವನ ನಾಮವೆಂಬ ಅಮೃತದ ಧಾರಾಕಾರವಾದ ಹನಿಗಳಿಂದ ತೋಯಿಸಲ್ಪಟ್ಟವರು ಸಂಸಾರವೆಂಬ ಕಾಡುಗಿಚ್ಚಿನ ನಡುವೆ ಸಿಕ್ಕಿಬಿದ್ದರೂ ದುಃಖಿಸಲಾರರು. ಇದರಲ್ಲಿ ಸಂಶಯವಿಲ್ಲ.

೫೫. ರಾಗದ್ವೇಷಗಳಲ್ಲೇ ಸದಾ ಮುಳುಗಿ ತೇಲುತ್ತಿರುವವರಿಗೆ ಶಿವನಲ್ಲಿ ಭಕ್ತಿಯೆಂದಿಗೂ ಹುಟ್ಟಲಾರದು. ಶಿವನಲ್ಲಿ ಭಕ್ತಿಯುಳ್ಳವರಿಗೆ ಸರ್ವಪ್ರಕಾರದಿಂದಲೂ ಬೇಗನೇ ಮುಕ್ತಿಯು ದೊರೆಯುವುದು.

೫೬. ಯಾವನು ಅನೇಕವಾದ ಜನ್ಮಗಳಲ್ಲಿ ತಪಸ್ಸನ್ನು ಮಾಡಿರುವನೋ ಅವನಿಗೆ ಮಾತ್ರವೇ ಪಾರ್ವತೀಪತಿಯಾದ ಆ ಶಿವನಲ್ಲಿ ಭಕ್ತಿಯು ಹುಟ್ಟುವುದು.

೫೭. ಶಂಕರನಲ್ಲಿ ಭಕ್ತಿಯುಂಟಾದರೂ, ಆ ಭಕ್ತಿಯು ಇತರ ದೇವತೆಗಳಲ್ಲೂ ಇರುವಂತೆ ಸಾಮಾನ್ಯವಾದುದಾದರೆ ಅದು ವ್ಯರ್ಥವಾದುದೇ ಸರಿ, ಎಂದರೆ ಆ ಭಕ್ತಿಯು ಮತ್ತೊಬ್ಬನಲ್ಲಿ ನೆಲಸದೆ ಶಿವನಲ್ಲಿ ಮಾತ್ರವೇ ನೆಲಸಬೇಕು.

**ಯಸ್ಯಾಸಾಧಾರಣೀ ಶಂಭೌ ಭಕ್ತಿರವ್ಯಭಿಚಾರಿಣೀ ।**
**ತಸ್ಯೈವ ಮೋಕ್ಷಸ್ಸುಲಭೋ ನಾನ್ಯಸ್ಯೇತಿ ಮತಿರ್ಮಮ ॥ ೫೮ ॥**

**ಕೃತ್ವಾಪ್ಯನಂತಪಾಪಾನಿ ಯದಿ ಭಕ್ತಿರ್ಮಹೇಶ್ವರೇ ।**
**ಸರ್ವಪಾಪವಿನಿರ್ಮುಕ್ತೋ ಭವತ್ಯೇವ ನ ಸಂಶಯಃ ॥ ೫೯ ॥**

**ಭವಂತಿ ಭಸ್ಮಸಾದ್ವೃಕ್ಷಾ ದವದಗ್ಧಾ ಯಥಾ ವನೇ ।**
**ತಥಾ ಭವಂತಿ ದಗ್ಧಾನಿ ಶಾಂಕರಾಣಾಮಘಾನ್ಯಪಿ ॥ ೬೦ ॥**

**ಯೋ ನಿತ್ಯಂ ಭಸ್ಮಪೂತಾಂಗಶ್ಶಿವಪೂಜೋಽನ್ಮುಖೋ ಭವೇತ್ ।**
**ಸ ತರತ್ಯೇವ ಸಂಸಾರಮಪಾರಮತಿದಾರುಣಂ ॥ ೬೧ ॥**

**ಬ್ರಹ್ಮಸ್ವಹರಣಂ ಕೃತ್ವಾ ಹತ್ವಾಪಿ ಬ್ರಾಹ್ಮಣಾನ್ಬಹೂನ್ ।**
**ನ ಲಿಪ್ಯತೇ ನರಃ ಪಾಪೈರ್ವಿರೂಪಾಕ್ಷಸ್ಯ ಸೇವಕಃ ॥ ೬೨ ॥**

---

೫೮. ಯಾವನಿಗೆ ಶಿವನೊಬ್ಬನಲ್ಲಿಯೇ ಭಕ್ತಿಯು ನೆಲಸುವುದೋ ಅವನಿಗೊಬ್ಬನಿಗೇ ಮೋಕ್ಷವು ಬಹು ಸುಲಭವಾಗಿ ದೊರೆಯುವುದು. ಬೇರೊಬ್ಬನಿಗಿಲ್ಲ ಎಂದು ನನ್ನ ಅಭಿಪ್ರಾಯ.

೫೯. ಅನೇಕ ಪಾಪಗಳನ್ನು ಮಾಡಿದ್ದರೂ, ಶಿವನಲ್ಲಿ ಭಕ್ತಿಯೊಂದು ಇದ್ದ ಪಕ್ಷದಲ್ಲಿ ನಿಸ್ಸಂಶಯವಾಗಿ ಆತನು ಎಲ್ಲ ಪಾಪಗಳಿಂದಲೂ ಮುಕ್ತನಾಗುವನು.

೬೦. ಕಾಡಿನಲ್ಲಿರುವ ಮರಗಳು, ಕಾಡುಗಿಚ್ಚಿಗೆ ಸಿಲುಕಿ ಹೇಗೆ ಸುಟ್ಟು ಬೂದಿಯಾಗುವುವೋ, ಹಾಗೆ ಶಿವನನ್ನೇ ಗತಿಯೆಂದು ನಂಬಿರುವವರ ಪಾಪಗಳೆಲ್ಲವೂ ಸುಟ್ಟು ಬೂದಿಯಾಗುವುವು.

೬೧. ಯಾವನು ನಿತ್ಯವೂ ಮೈಗೆಲ್ಲಾ ಭಸ್ಮವನ್ನು ಲೇಪನಮಾಡಿಕೊಂಡು ಪವಿತ್ರನಾಗಿ, ಶಿವನ ಪೂಜೆಯಲ್ಲಿ ಆಸಕ್ತನಾಗುವನೋ ಅವನು ಅಪಾರವೂ, ಅತಿ ಭಯಂಕರವೂ ಆದ ಈ ಸಂಸಾರಸಾಗರವನ್ನು ದಾಟುವನು.

೬೨. ಬ್ರಾಹ್ಮಣನ ಹಣವನ್ನು ಅಪಹರಿಸಿದ್ದರೂ, ಅನೇಕಮಂದಿ ಬ್ರಾಹ್ಮಣರನ್ನು ಕೊಂದಿದ್ದರೂ ಆ ಮನುಷ್ಯನು ವಿರೂಪಾಕ್ಷನಾದ ಆ ಶಿವನ ಕಿಂಕರನಾದ ಪಕ್ಷದಲ್ಲಿ ಆ ಪಾಪಗಳಿಂದ ಲಿಪ್ತನಾಗುವುದಿಲ್ಲ.

**ವಿಲೋಕ್ಯ ವೇದಾನಖಿಲಾಂಚ್ಛಿವಸ್ಯೈವಾರ್ಚನಂ ಪರಂ ।**
**ಸಂಸಾರನಾಶನೋಪಾಯ ಇತಿ ಪೂರ್ವೈರ್ವಿನಿಶ್ಚಿತಂ ॥ ೬೩ ॥**

**ಅದ್ಯಪ್ರಭೃತಿ ಯತ್ನೇನ ಸಾವಧಾನೋ ಯಥಾವಿಧಿ ।**
**ಸಾಂಬಂ ಸದಾಶಿವಂ ಭಕ್ತ್ಯಾ ಭಜ ನಿತ್ಯಂ ಮಹೇಶ್ವರಂ ॥ ೬೪ ॥**

**ಆಪಾದಮಸ್ತಕಂ ಸಮ್ಯಕ್ ಭಸ್ಮನೋದ್ಧೂಲ್ಯ ಸಾದರಂ ।**
**ಸರ್ವಶ್ರುತಿಶ್ರುತಂ ಶೈವಂ ಮಂತ್ರಂ ಜಪ ಷಡಕ್ಷರಂ ॥ ೬೫ ॥**

**ಸರ್ವಾಂಗೇಷು ಪ್ರಯತ್ನೇನ ರುದ್ರಾಕ್ಷಾನ್ ಶಿವವಲ್ಲಭಾನ್ ।**
**ಧಾರಯಸ್ವಾತಿಸದ್ಭಕ್ತ್ಯಾ ಸಮಂತ್ರವಿಧಿಪೂರ್ವಕಂ ॥ ೬೬ ॥**

**ಶೃಣು ಶೈವೀಂ ಕಥಾಂ ನಿತ್ಯಂ ವದಶೈವೀಂ ಕಥಾಂ ಸದಾ ।**
**ಪೂಜಯಸ್ವಾತಿಯತ್ನೇನ ಶಿವಭಕ್ತಾನ್ ಪುನಃ ಪುನಃ ॥ ೬೭ ॥**

---

೬೩. ಪೂರ್ವಿಕರು ಎಲ್ಲ ವೇದಗಳನ್ನೂ ಪರಾಮರ್ಶಿಸಿ ಶಿವನ ಪೂಜೆಯೊಂದೇ ಈ ಸಂಸಾರಬಂಧನವನ್ನು ಕಿತ್ತೊಗೆಯುವುದರಲ್ಲಿ ಉತ್ತಮವಾದ ಉಪಾಯವೆಂದು ನಿಶ್ಚಯಿಸಿರುವರು.

೬೪. ಆದುದರಿಂದ ಇಂದು ಮೊದಲುಗೊಂಡು ಬಹು ಎಚ್ಚರಿಕೆಯಿಂದ ವಿಧಿವತ್ತಾಗಿಯೂ ಪ್ರಯತ್ನಪುರಸ್ಸರವಾಗಿಯೂ ಪ್ರತಿನಿತ್ಯವೂ ಪಾರ್ವತೀಸಮೇತನಾದ, ಸದಾ ಮಂಗಲಸ್ವರೂಪನಾದ ಆ ಶಂಕರನನ್ನು ಭಕ್ತಿಯಿಂದ ಆರಾಧಿಸು.

೬೫. ಕಾಲಿನಿಂದ ಹಿಡಿದು ತಲೆಯವರೆಗೂ ಚೆನ್ನಾಗಿ ಭಸ್ಮವನ್ನು ಆದರದಿಂದ ಹಚ್ಚಿಕೊಂಡು ಎಲ್ಲ ವೇದಗಳಲ್ಲೂ ಪ್ರತಿಪಾದಿತವಾದ 'ಓಂನಮಶ್ಶಿವಾಯ' ಎಂಬ ಷಡಕ್ಷರ ಮಂತ್ರವನ್ನು ಜಪಿಸು.

೬೬. ಶಿವನಿಗೆ ಪರಮಪ್ರೇಮಾಸ್ಪದವಾದ ರುದ್ರಾಕ್ಷಿಗಳನ್ನು ಬಹು ಭಕ್ತಿಯಿಂದ ವಿಧಿಗನುಸಾರವಾಗಿ ಮಂತ್ರೋಚ್ಚಾರಣದೊಂದಿಗೆ ಸರ್ವಾಂಗಗಳಲ್ಲಿಯೂ ಧರಿಸು.

೬೭. ನಿತ್ಯವೂ ಶಿವನ ಕಥೆಗಳನ್ನು ಕೇಳು. ಯಾವಾಗಲೂ ಶಿವನ ಚರಿತ್ರೆಗಳನ್ನೇ ವರ್ಣಿಸುತ್ತಿರು. ಮತ್ತೆ ಮತ್ತೆ ಶಿವನ ಭಕ್ತರನ್ನು ಪ್ರಯತ್ನಪೂರ್ವಕವಾಗಿ ಪೂಜಿಸು.

**ಅಪ್ರಮಾದೇನ ಸತತಂ ಶಿವೈಕಶರಣೋ ಭವ ।**
**ಶಿವಾರ್ಚನೇನ ಸತತಮಾನಂದಃ ಪ್ರಾಪ್ಯತೇ ಯತಃ ॥ ೬೮ ॥**

**ಉರಸ್ಯಾಧಾಯ ವಿಶದೇ ಶಿವಸ್ಯ ಚರಣಾಂಬುಜೌ ।**
**ಶಿವತೀರ್ಥಾನಿ ವಿಚರ ಪ್ರಥಮಂ ಮುನಿಸತ್ತಮ ॥ ೬೯ ॥**

**ಪಶ್ಯನ್ಮಾಹಾತ್ಮ್ಯ ಮತುಲಂ ಶಂಕರಸ್ಯ ಪರಾತ್ಮನಃ ।**
**ಗಚ್ಛಾನಂದವನಂ ಪಶ್ಚಾಚ್ಛಂಭುಪ್ರಿಯತಮಂ ಮುನೇ ॥ ೭೦ ॥**

**ತತ್ರ ವಿಶ್ವೇಶ್ವರಂ ದೃಷ್ಟ್ವಾ ಪೂಜನಂ ಕುರು ಭಕ್ತಿತಃ ।**
**ನತ್ವಾ ಸ್ತುತ್ವಾ ವಿಶೇಷೇಣ ನಿರ್ವಿಕಲ್ಪೋ ಭವಿಷ್ಯಸಿ ॥ ೭೧ ॥**

**ತತಶ್ಚ ಭವತಾ ನೂನಂ ವಿಧೇಯಂ ಗಮನಂ ಮುನೇ ।**
**ಬ್ರಹ್ಮಲೋಕೇ ಸ್ವಕಾಮಾರ್ಥಂ ಶಾಸನಾನ್ಮಮ ಭಕ್ತಿತಃ ॥ ೭೨ ॥**

---

೬೮. ಯಾವಾಗಲೂ ಪ್ರಮಾದಕ್ಕೆ ವಶನಾಗದೆ ಶಿವನೊಬ್ಬನನ್ನೇ ಮರೆ ಹೋಗು. ಏಕೆಂದರೆ ಶಿವಾರ್ಚನೆಯೊಂದರಿಂದಲೇ ಆನಂದವು ಯಾವಾಗಲೂ ದೊರೆಯುವುದು.

೬೯. ಓ ಮುನೀಂದ್ರ, ನಿಷ್ಕಲ್ಮಷವಾದ ಹೃದಯದಲ್ಲಿ ಶಿವನ ಪಾದಕಮಲ ಗಳನ್ನು ಧ್ಯಾನಿಸುತ್ತಾ ಮೊದಲು ಶಿವನ ನಿವಾಸಭೂತವಾದ ತೀರ್ಥಗಳನ್ನು ಯಾತ್ರೆ ಮಾಡು.

೭೦. ಪರಮಪುರುಷನಾದ ಆ ಶಂಕರನ ಅಸದೃಶವಾದ ಮಹಿಮೆಯನ್ನು ಪ್ರತ್ಯಕ್ಷವಾಗಿ ನೋಡುತ್ತಾ ಕೊನೆಗೆ ಆ ಶಂಕರನಿಗೆ ಬಹಳ ಪ್ರಿಯವಾದ ' ಆನಂದವನ ' ವೆಂದು ಪ್ರಸಿದ್ಧಿಯಾದ ಕಾಶಿಗೆ ಹೋಗು.

೭೧. ಅಲ್ಲಿ ವಿಶ್ವೇಶ್ವರನನ್ನು ಕಂಡು ಭಕ್ತಿಯಿಂದ ಆತನನ್ನು ಆರಾಧಿಸು. ವಿಶೇಷವಾಗಿ ನಮಸ್ಕರಿಸುವುದರಿಂದಲೂ, ಸ್ತೋತ್ರಮಾಡುವುದರಿಂದಲೂ ಯಾವು ದೊಂದು ವಿಕಲ್ಪವೂ ಇಲ್ಲದವನಾಗುವೆ.

೭೨. ನಿನ್ನ ಇಷ್ಟವು ನೆರವೇರಲು ಆಮೇಲೆ ನೀನು ನನ್ನ ಅಪ್ಪಣೆಯಂತೆ ಭಕ್ತಿಯಿಂದ ಬ್ರಹ್ಮಲೋಕಕ್ಕೆ ಖಂಡಿತವಾಗಿಯೂ ಹೋಗು.

ನತ್ವಾ ಸ್ತುತ್ವಾ ವಿಶೇಷೇಣ ವಿಧಿಂ ಸ್ವಜನಕಂ ಮುನೇ ।
ಪ್ರಷ್ಟವ್ಯಂ ಶಿವಮಾಹಾತ್ಮ್ಯಂ ಬಹುಶಃ ಪ್ರೀತಚೇತಸಾ ॥ ೭೩ ॥

ಸ ಶೈವಪ್ರವರೋ ಬ್ರಹ್ಮಾ ಮಾಹಾತ್ಮ್ಯಂ ಶಂಕರಸ್ಯ ತೇ ।
ಶ್ರಾವಯಿಷ್ಯತಿ ಸುಪ್ರೀತ್ಯಾ ಶತನಾಮಸ್ತವಂ ಚ ಹಿ ॥ ೭೪ ॥

ಅದ್ಯತಸ್ತ್ವಂ ಭವ ಮುನೇ ಶೈವಶ್ಶಿವಪರಾಯಣಃ ।
ಮುಕ್ತಿಭಾಗೀ ವಿಶೇಷೇಣ ಶಿವಸ್ತೇ ಶಂ ವಿಧಾಸ್ಯತಿ ॥ ೭೫ ॥

ಇತ್ಥಂ ವಿಷ್ಣುರ್ಮುನಿಂ ಪ್ರೀತ್ಯಾ ಹ್ಯುಪದಿಶ್ಯ ಪ್ರಸನ್ನಧೀಃ ।
ಸ್ಮೃತ್ವಾ ನತ್ವಾ ಶಿವಂ ಸ್ತುತ್ವಾ ತತಸ್ತ್ವಂತರಧೀಯತ ॥ ೭೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ನಾರದಸ್ಯ ವಿಷ್ಣೂಪದೇಶ
ವರ್ಣನಂ ನಾಮ ಚತುರ್ಥೋಽಧ್ಯಾಯಃ

---

೭೩. ಓ ನಾರದ, ಅಲ್ಲಿ ನಿನ್ನ ತಂದೆಯಾದ ಬ್ರಹ್ಮನನ್ನು ವಿಶೇಷವಾಗಿ ನಮಿಸಿ, ಸ್ತೋತ್ರಮಾಡಿ ಸಂತುಷ್ಟವಾದ ಮನಸ್ಸಿನಿಂದ ಶಿವನ ಮಹಿಮೆಯನ್ನು ಕೇಳಿ ತಿಳಿದುಕೊ.

೭೪. ಶಿವಭಕ್ತರಲ್ಲಿ ಶ್ರೇಷ್ಠನಾದ ಆ ಬ್ರಹ್ಮನು ನಿನಗೆ ಪ್ರೀತಿಯಿಂದ ಶಿವನ ಮಾಹಾತ್ಮ್ಯವನ್ನು ಹೇಳುವುದಲ್ಲದೆ ಶಿವಶತನಾಮಸ್ತೋತ್ರವನ್ನೂ ಉಪದೇಶಿಸುವನು.

೭೫. ಓ ಮುನೀಂದ್ರ, ನೀನು ಇಂದಿನಿಂದ ಶೈವನಾಗು. ಶಿವನೊಬ್ಬನಲ್ಲೇ ಆಸಕ್ತನಾಗು. ವಿಶೇಷವಾಗಿ ಮುಕ್ತಿಗೆ ಭಾಗಿಯಾಗುವೆ. ಶಿವನು ನಿನಗೆ ಒಳ್ಳೆಯದನ್ನು ಮಾಡುವನು.

೭೬. ಹೀಗೆಂದು ಶ್ರೀ ಮಹಾವಿಷ್ಣುವು ಆ ನಾರದಮಹರ್ಷಿಗೆ ಉಪದೇಶಿಸಿ ಪ್ರಸನ್ನಚಿತ್ತನಾಗಿ ಶಿವನನ್ನು ನೆನೆದು, ಆತನಿಗೆ ನಮಸ್ಕರಿಸಿ, ಸ್ತೋತ್ರಮಾಡಿ, ಅಲ್ಲಿಯೇ ಅಂತರ್ಧಾನನಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯ ಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ನಾರದನಿಗೆ ವಿಷ್ಣುವಿನ ಉಪದೇಶ ವರ್ಣನವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಸೃಷ್ಟಿಖಂಡೇ
## ಪಂಚಮೋಽಧ್ಯಾಯಃ

॥ ಸೂತ ಉವಾಚ ॥

**ಅಂತರ್ಹಿತೇ ಹರೌ ವಿಪ್ರಾ ನಾರದೋ ಮುನಿಸತ್ತಮಃ ।**
**ವಿಚಚಾರ ಮಹೀಂ ಪಶ್ಯನ್ ಶಿವಲಿಂಗಾನಿ ಭಕ್ತಿತಃ ॥ ೧ ॥**

**ಪೃಥಿವ್ಯಾ ಅಟನಂ ಕೃತ್ವಾ ಶಿವರೂಪಾಣ್ಯನೇಕಶಃ ।**
**ದದರ್ಶ ಪ್ರೀತಿತೋ ವಿಪ್ರಾ ಭುಕ್ತಿಮುಕ್ತಿಪ್ರದಾನಿ ಸಃ ॥ ೨ ॥**

---

### ಐದನೆಯ ಅಧ್ಯಾಯವು

೧. ಸೂತಪುರಾಣಿಕನು ಹೇಳಿದನು :—ಎಲೈ ವಿಪ್ರೋತ್ತಮರೇ, ಶ್ರೀ ಹರಿಯು ಅಂತರ್ಧಾನವನ್ನು ಹೊಂದಿದ ಮೇಲೆ ಮುನಿಶ್ರೇಷ್ಠನಾದ ನಾರದನು ಭಕ್ತಿಯಿಂದ ಶಿವಲಿಂಗಗಳನ್ನು ದರ್ಶನಮಾಡುತ್ತಾ ಭೂಮಿಯನ್ನೆಲ್ಲಾ ಸುತ್ತಿದನು.

೨. ಭೂಮಿಯ ಪರ್ಯಟನವನ್ನು ಮಾಡಿ, ನಾನಾವಿಧವಾಗಿರುವ, ಭುಕ್ತಿ ಮುಕ್ತಿಪ್ರದಾಯಕಗಳಾದ ಶಿವನ ಮೂರ್ತಿಗಳನ್ನು ಆ ನಾರದನು ಪ್ರೀತಿಯಿಂದ ಸಂದರ್ಶಿಸಿದನು.

ಅಥ ತಂ ವಿಚರಂತಂ ಕೌ ನಾರದಂ ದಿವ್ಯದರ್ಶನಂ ।
ಜ್ಞಾತ್ವಾ ಶಂಭುಗಣೌ ತೌ ತು ಸುಚಿತ್ತಮುಪಜಗ್ಮತುಃ ॥ ೩ ॥

ಶಿರಸಾ ಸುಪ್ರಣಮ್ಯಾಶು ಗಣಾವೂಚತುರಾದರಾತ್ ।
ಗೃಹೀತ್ವಾ ಚರಣೌ ತಸ್ಯ ಶಾಪೋದ್ಧಾರೇಚ್ಛಯಾ ಚ ತೌ ॥ ೪ ॥

॥ ಶಿವಗಣಾವೂಚತುಃ ॥

ಬ್ರಹ್ಮಪುತ್ರ ಸುರರ್ಷೇ ಹಿ ಶೃಣು ಪ್ರೀತ್ಯಾವಯೋರ್ವಚಃ ।
ತವಾಪರಾಧಕರ್ತಾರಾವಾವಾಂ ವಿಪ್ರೌ ನ ವಸ್ತುತಃ ॥ ೫ ॥

ಆವಾಂ ಹರಗಣೌ ವಿಪ್ರ ತವಾಗಸ್ಕಾರಿಣೌ ಮುನೇ ।
ಸ್ವಯಂವರೇ ರಾಜಪುತ್ರ್ಯಾ ಮಾಯಾಮೋಹಿತಚೇತಸಾ ॥ ೬ ॥

---

೩. ಆಮೇಲೆ ಭೂಮಿಯಲ್ಲಿ ಸಂಚರಿಸುತ್ತಾ ದಿವ್ಯವಾದ ಕಾಂತಿಯಿಂದ ಶೋಭಿಸುತ್ತಿರುವ ಆ ನಾರದನನ್ನು ಕಂಡು, ಆತನಿಂದ ಶಪ್ತರಾಗಿದ್ದ ಆ ಶಿವಗಣಗಳೀರ್ವರು ಒಳ್ಳೆಯ ಮನಸ್ಸಿನಿಂದ ಅವನ ಬಳಿಗೆ ಬಂದರು.

೪. ಆ ಗಣಗಳಿಬ್ಬರೂ, ಆದರದಿಂದ ಆತನ ಕಾಲಿಗೆ ತಲೆಯನ್ನು ಬಾಗಿ ನಮಸ್ಕರಿಸಿ, ಶಾಪದಿಂದ ಬಿಡುಗಡೆಯನ್ನು ಹೊಂದಬೇಕೆಂಬಾಶೆಯಿಂದ ಅವನ ಪಾದಗಳನ್ನು ಹಿಡಿದುಕೊಂಡು,

೫. ಆ ಶಿವಗಣಗಳಿಬ್ಬರೂ ಹೇಳಿದರು :—ಓ ಬ್ರಹ್ಮಪುತ್ರ, ನೀನು ದೇವರ್ಷಿಯು. ಆದರದಿಂದ ನಮ್ಮ ಮಾತನ್ನು ಆಲಿಸು. ನಾವು ನಿಜವಾಗಿಯೂ ಅಪರಾಧವನ್ನೆಸಗಿದ ಬ್ರಾಹ್ಮಣರಲ್ಲ.

೬. ಓ ಮುನೀಂದ್ರ, ನಿನಗೆ ಕೋಪವನ್ನುಂಟುಮಾಡಿದವರು ನಾವು, ಶಿವಗಣಗಳು. ರಾಜಪುತ್ರಿಯ ಸ್ವಯಂವರದಲ್ಲಿ ಪರಮೇಶ್ವರನಾದ ಶಿವನ ಪ್ರೇರಣೆಯಂತೆ ಆತನ ಮಾಯೆಗೆ ಸಿಲುಕಿ ಮೈಮರೆತದ್ದರಿಂದ ನೀನು ನಮ್ಮೀರ್ವರಿಗೂ ಶಾಪವನ್ನು ಕೊಟ್ಟುಬಿಟ್ಟೆ.

ತ್ವಯಾ ದತ್ತಶ್ಚ ನೌ ಶಾಪಃ ಪರೇಶಪ್ರೇರಿತೇನ ಹ ।
ಜ್ಞಾತ್ವಾ ಕುಸುಮಯಂ ತತ್ರ ಮೌನಮೇವ ಹಿ ಜೀವನಂ ॥ ೭ ॥

ಸ್ವಕರ್ಮಣಃ ಫಲಂ ಪ್ರಾಪ್ತಂ ಕಸ್ಯಾಪಿ ನ ಹಿ ದೂಷಣಂ ।
ಸುಪ್ರಸನ್ನೋ ಭವ ವಿಭೋ ಕುರ್ವನುಗ್ರಹಮದ್ಯ ನೌ ॥ ೮ ॥

॥ ಸೂತ ಉವಾಚ ॥

ವಚ ಆಕರ್ಣ್ಯ ಗಣಯೋರಿತಿ ಭಕ್ತ್ಯುಕ್ತಮಾದರಾತ್ ।
ಪ್ರತ್ಯುವಾಚ ಮುನಿಃ ಪ್ರೀತ್ಯಾ ಪಶ್ಚಾತ್ತಾಮವಾಪ್ಯ ಸಃ ॥ ೯ ॥

॥ ನಾರದ ಉವಾಚ ॥

ಶೃಣುತಂ ಮೇ ಮಹಾದೇವಗಣೌ ಮಾನ್ಯತಮೌ ಸತಾಂ ।
ವಚನಂ ಸುಖದಂ ಮೋಹನಿರ್ಮುಕ್ತಂ ಚ ಯಥಾರ್ಥಕಂ ॥ ೧೦ ॥

ಪುರಾ ಮಮ ಮತಿರ್ಭ್ರಷ್ಟಾಸೀಚ್ಛಿವೇಚ್ಛಾವಶಾದ್ಧ್ರುವಂ ।
ಸರ್ವಥಾ ಮೋಹಮಾಪನ್ನಶ್ಶಪ್ತವಾನ್ವಾಂ ಕುಶೇಮುಷಿಃ ॥ ೧೧ ॥

---

೭. ಆಗ ಸಮಯವು ಸರಿಯಾಗಿಲ್ಲವೆಂದು ತಿಳಿದು ಮೌನವಾಗಿರುವುದೇ ಶ್ರೇಯಸ್ಕರವೆಂದು ನಾವು ಭಾವಿಸಿ ಸುಮ್ಮನಿದ್ದೆವು.

೮. ನಾವು ಮಾಡಿದ ಕೆಲಸಕ್ಕೆ ತಕ್ಕ ಫಲವು ದೊರೆಯಿತೇ ಹೊರತು ಮತ್ತಾರನ್ನೂ ನಿಂದಿಸುವ ಆವಶ್ಯಕತೆಯಿಲ್ಲ. ಓ ಪ್ರಭೂ, ಸುಪ್ರಸನ್ನನಾಗು. ಈಗ ನಮ್ಮನ್ನು ಅನುಗ್ರಹಿಸು ಎಂದು ಪ್ರಾರ್ಥಿಸಿದರು.

೯. ಸೂತನು ಹೇಳಿದನು :—ಹೀಗೆ ಭಕ್ತಿಯಿಂದ ನುಡಿದ ಗಣಗಳಿರ್ವರ ಮಾತನ್ನು ಆದರದಿಂದ ಲಾಲಿಸಿ, ಆ ನಾರದಮಹರ್ಷಿಯು ಪಶ್ಚಾತ್ತಾಪಪಟ್ಟು ಪ್ರೀತಿಯಿಂದ ಅವರನ್ನು ಕುರಿತು,

೧೦. ನಾರದನಿಂತೆಂದನು :—ಮಹಾದೇವನ ಗಣಗಳಾದ ನಿಮ್ಮನ್ನು ಸತ್ಪುರುಷರೆಲ್ಲರೂ ಗೌರವಿಸುವರು. ಈಗ ಮೋಹಾದಿರಹಿತವಾಗಿ ಯಥಾರ್ಥವಾದ ನನ್ನ ಮಾತನ್ನು ಕೇಳಿರಿ.

೧೧. ಹಿಂದೆ ನನಗೆ ಶಿವನ ಇಚ್ಛೆಯಂತೆ ನಿಜವಾಗಿಯೂ ಬುದ್ಧಿಯು ನಷ್ಟವಾಗಿಬಿಟ್ಟಿತ್ತು. ಸಂಪೂರ್ಣವಾಗಿ ಮೋಹಪಾಶಕ್ಕೆ ಸಿಕ್ಕಿ ದುಷ್ಟಬುದ್ಧಿಯಾದ ನಾನು ನಿಮ್ಮಿರ್ವರನ್ನೂ ಶಪಿಸಿಬಿಟ್ಟೆ.

ಯದುಕ್ತಂ ತತ್ತಥಾ ಭಾವಿ ತಥಾಪಿ ಶೃಣುತಾಂ ಗಣೌ ।
ಶಾಪೋದ್ಧಾರಮಹಂ ವಚ್ಮಿ ಕ್ಷಮೇಥಾಮುಘಮದ್ಯ ಮೇ ॥ ೧೨ ॥

ವೀರ್ಯಾನ್ಮುನಿವರಸ್ಯಾಪ್ತ್ವಾ ರಾಕ್ಷಸೇಶತ್ವಮಾದರಾತ್ ।
ಸ್ಯಾತಾಂ ವಿಭವಸಂಯುಕ್ತೌ ಬಲಿನೌ ಸುಪ್ರತಾಪಿನೌ ॥ ೧೩ ॥

ಸರ್ವಬ್ರಹ್ಮಾಂಡರಾಜಾನೌ ಶಿವಭಕ್ತೌ ಜಿತೇಂದ್ರಿಯೌ ।
ಶಿವಾಪರತನೋರ್ಮೃತ್ಯುಂ ಪ್ರಾಪ್ಯ ಸ್ವಂ ಪದಮಾಪ್ಸ್ಯಥಃ ॥ ೧೪ ॥

॥ ಸೂತ ಉವಾಚ ॥

ಇತ್ಯಾಕರ್ಣ್ಯ ಮುನೇರ್ವಾಕ್ಯಂ ನಾರದಸ್ಯ ಮಹಾತ್ಮನಃ ।
ಉಭೌ ಹರಗಣೌ ಪ್ರೀತೌ ಸ್ವಂ ಪದಂ ಜಗ್ಮತುರ್ಮುದಾ ॥ ೧೫ ॥

ನಾರದೋಽಪಿ ಪರಂ ಪ್ರೀತೋ ಧ್ಯಾಯಂಚ್ಛಿವಮನನ್ಯಧೀಃ ।
ವಿಚಚಾರ ಮಹೀಂ ಪಶ್ಯನ್ ಶಿವತೀರ್ಥಾನ್ಯಭೀಕ್ಷ್ಣಶಃ ॥ ೧೬ ॥

೧೨. ನಾನು ಎಂತು ನುಡಿದೆನೋ ಆರೀತಿ ಆಗಿಯೇ ಆಗುವುದರಲ್ಲಿ ಸಂಶಯವಿಲ್ಲ. ಆದರೂ ಚಿಂತೆಯಿಲ್ಲ. ನನ್ನ ಮಾತು ಕೇಳಿರಿ. ಶಾಪದಿಂದ ಬಿಡುಗಡೆ ಹೊಂದುವ ಬಗೆಯನ್ನು ಹೇಳುವೆನು. ನನ್ನೀ ತಪ್ಪನ್ನು ಆಗ ಮನ್ನಿಸಿರಿ.

೧೩. ಮುನಿಶ್ರೇಷ್ಠನೊಬ್ಬನ ತೇಜಸ್ಸಿನಿಂದ ರಾಕ್ಷಸೇಶ್ವರತ್ವವನ್ನು ಪಡೆದು, ನೀವೀರ್ವರೂ ವಿಭವದಿಂದ ಕೂಡಿದವರೂ, ಬಲಿಷ್ಠರೂ, ಪ್ರತಾಪಶಾಲಿಗಳೂ ಆಗುವಿರಿ.

೧೪. ಎಲ್ಲ ಬ್ರಹ್ಮಾಂಡಗಳಿಗೂ ಅಧಿಪತಿಗಳಾಗಿಯೂ, ಶಿವಭಕ್ತರಾಗಿಯೂ, ಜಿತೇಂದ್ರಿಯರಾಗಿಯೂ ಇದ್ದು ಶಿವನ ಬೇರೊಂದು ರೂಪವನ್ನು ಧರಿಸಿದವನಿಂದಲೇ ಹತವಾಗಿ ನಿಮ್ಮ ಜಾಗಕ್ಕೆ ಮತ್ತೆ ತೆರಳುವಿರಿ ಎಂದನು.

೧೫. ಸೂತನು ಹೇಳಿದನು :—ಹೀಗೆಂಬುದಾಗಿ ಮಹಾತ್ಮನಾದ ಆ ನಾರದ ಮಹರ್ಷಿಯು ಹೇಳಿದ ಮಾತನ್ನು ಕೇಳಿ ಆ ಇಬ್ಬರು ಶಿವಗಣಗಳೂ ಹರ್ಷದಿಂದ ತಮ್ಮ ನೆಲೆಗಳಿಗೆ ತೆರಳಿದರು.

೧೬. ನಾರದನೂ ಕೂಡ ಬಹಳ ಸಂತುಷ್ಟನಾಗಿ ಅನನ್ಯಮನಸ್ಸಿನಿಂದ ಶಿವನನ್ನು ಧ್ಯಾನಿಸುತ್ತಾ ಬಾರಿಬಾರಿಗೂ ಶಿವಕ್ಷೇತ್ರಗಳನ್ನು ಸಂದರ್ಶಿಸುತ್ತಾ ಭೂಮಿಯನ್ನು ಸುತ್ತಿದನು.

ಕಾಶೀಂ ಪ್ರಾಪ್ಯಾಥ ಸ ಮುನಿಃ ಸರ್ವೋಪರಿ ವಿರಾಜಿತಾಂ ।
ಶಿವಪ್ರಿಯಾಂ ಶಂಭುಸುಖಪ್ರದಾಂ ಶಂಭುಸ್ವರೂಪಿಣೀಂ ॥ ೧೭ ॥

ದೃಷ್ಟ್ವಾ ಕಾಶೀಂ ಕೃತಾರ್ಥೋಽಭೂತ್ಕಾಶೀನಾಥಂ ದದರ್ಶ ಹ ।
ಆನರ್ಚ ಪರಮಪ್ರೀತ್ಯಾ ಪರಮಾನಂದಸಂಯುತಃ ॥ ೧೮ ॥

ಸ ಮುದಾ ಸೇವ್ಯ ತಾಂ ಕಾಶೀಂ ಕೃತಾರ್ಥೋ ಮುನಿಸತ್ತಮಃ ।
ನಮನ್ಸಂವರ್ಣಯನ್ಭಕ್ತ್ಯಾ ಸಂಸ್ಮರನ್ಪ್ರೇಮವಿಹ್ವಲಃ ॥ ೧೯ ॥

ಬ್ರಹ್ಮಲೋಕಂ ಜಗಾಮಾಥ ಶಿವಸ್ಮರಣಸನ್ಮತಿಃ ।
ಶಿವತತ್ತ್ವಂ ವಿಶೇಷೇಣ ಜ್ಞಾತುಮಿಚ್ಛುಸ್ಸ ನಾರದಃ ॥ ೨೦ ॥

ನತ್ವಾ ತತ್ರ ವಿಧಿಂ ಭಕ್ತ್ಯಾ ಸ್ತುತ್ವಾ ಚ ವಿವಿಧೈಸ್ತವೈಃ ।
ಪಪ್ರಚ್ಛ ಶಿವಸತ್ತತ್ತ್ವಂ ಶಿವಸಂಭಕ್ತಮಾನಸಃ ॥ ೨೧ ॥

---

೧೭-೧೮. ಬಳಿಕ ಆ ಮುನಿಯು ಎಲ್ಲ ಕ್ಷೇತ್ರಗಳಿಗಿಂತಲೂ ಮಿಗಿಲಾಗಿ ಶೋಭಿಸುತ್ತಿರುವುದಾಗಿಯೂ, ಶಿವನಿಗೆ ಇಷ್ಟವಾದುದಾಗಿಯೂ, ಶಿವನಿಗೆ ಸುಖವನ್ನು ನೀಡುವಂತಹುದೂ, ಶಿವಸ್ವರೂಪವಾಗಿಯೂ ಇರುವಂಥ ಕಾಶಿಯನ್ನು ಸೇರಿ, ಆ ಕಾಶಿಯನ್ನು ನೋಡಿ, ಕೃತಾರ್ಥನಾದನು. ಕಾಶೀನಾಥನಾದ ವಿಶ್ವೇಶ್ವರನನ್ನು ಸಂದರ್ಶಿಸಿದನು. ಪರಮ ಹರ್ಷಾನ್ವಿತನಾಗಿ ಪರಮಪ್ರೀತಿಯಿಂದ ಆತನನ್ನು ಪೂಜಿಸಿದನು.

೧೯. ನಾರದಮಹರ್ಷಿಯು ಕೆಲವುಕಾಲ ಆ ಕಾಶಿಯನ್ನು ಸೇವಿಸಿ ಸಂತೋಷದಿಂದ ವಿಶ್ವೇಶ್ವರನನ್ನು ನಮಸ್ಕರಿಸುತ್ತಲೂ, ಭಕ್ತಿಯಿಂದ ವರ್ಣಿಸುತ್ತಲೂ, ಪ್ರೇಮದಿಂದ ವಿವಶನಾಗಿ ನೆನಸುತ್ತಲೂ ಕೃತಾರ್ಥನಾದನು.

೨೦-೨೧. ಆಮೇಲೆ ಆ ನಾರದನು, ಶಿವನ ಸ್ಮರಣೆಯಿಂದ ಒಳ್ಳೆಯ ಬುದ್ಧಿಯನ್ನು ಪಡೆದು ವಿವರವಾಗಿ ಶಿವತತ್ತ್ವವನ್ನು ತಿಳಿಯಬೇಕೆಂದು ಬ್ರಹ್ಮಲೋಕಕ್ಕೆ ಹೋಗಿ, ಅಲ್ಲಿ ಬ್ರಹ್ಮನನ್ನು ಭಕ್ತಿಯಿಂದ ನಮಸ್ಕರಿಸಿ ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಸುತ್ತಾ ಶಿವನಲ್ಲೇ ನೆಟ್ಟಮನಸ್ಸುವಳ್ಳವನಾಗಿ ಶಿವನ ಪಾವನವಾದ ತತ್ತ್ವವನ್ನು ಹೇಳಬೇಕೆಂದು ಬ್ರಹ್ಮನನ್ನು ಪ್ರಾರ್ಥಿಸಿದನು.

॥ ನಾರದ ಉವಾಚ ॥

ಬ್ರಹ್ಮನ್ಬ್ರಹ್ಮಸ್ವರೂಪಜ್ಞ ಪಿತಾಮಹ ಜಗತ್ಪ್ರಭೋ ।
ತ್ವತ್ಪ್ರಸಾದಾನ್ಮಯಾ ಸರ್ವಂ ವಿಷ್ಣೋರ್ಮಾಹಾತ್ಮ್ಯಮುತ್ತಮಂ ॥ ೨೨ ॥

ಭಕ್ತಿಮಾರ್ಗಂ ಜ್ಞಾನಮಾರ್ಗಂ ತಪೋಮಾರ್ಗಂ ಸುದುಸ್ತರಂ ।
ದಾನಮಾರ್ಗಂ ಚ ತೀರ್ಥಾನಾಂ ಮಾರ್ಗಂ ಚ ಶ್ರುತವಾನಹಂ ॥ ೨೩ ॥

ನ ಜ್ಞಾತಂ ಶಿವತತ್ತ್ವಂ ಚ ಪೂಜಾವಿಧಿಮತಃ ಕ್ರಮಾತ್ ।
ಚರಿತ್ರಂ ವಿವಿಧಂ ತಸ್ಯ ನಿವೇದಯ ಮಮ ಪ್ರಭೋ ॥ ೨೪ ॥

ನಿರ್ಗುಣೋಽಪಿ ಶಿವಸ್ತಾತ ಸಗುಣಶ್ಶಂಕರಃ ಕಥಂ ।
ಶಿವತತ್ತ್ವಂ ನ ಜಾನಾಮಿ ಮೋಹಿತಶ್ಶಿವಮಾಯಯಾ ॥ ೨೫ ॥

ಸೃಷ್ಟೇಃ ಪೂರ್ವಂ ಕಥಂ ಶಂಭುಸ್ಸ್ವರೂಪೇಣ ಪ್ರತಿಷ್ಠಿತಃ ।
ಸೃಷ್ಟಿಮಧ್ಯೇ ಸ ಹಿ ಕಥಂ ಕ್ರೀಡನ್ಸಂವರ್ತತೇ ಪ್ರಭುಃ ॥ ೨೬ ॥

---

೨೨-೨೩. ನಾರದನು ಕೇಳಿದನು:—ಓ ಬ್ರಹ್ಮದೇವ, ನೀನು ಪರಬ್ರಹ್ಮ ಸ್ವರೂಪವನ್ನು ತಿಳಿದವನು. ಜಗತ್ಪಿತಾಮಹನೆನಿಸಿದವನು. ಜಗದೊಡೆಯನು. ನಿನ್ನ ಅನುಗ್ರಹದಿಂದ ಶ್ರೇಷ್ಠವಾದ ವಿಷ್ಣುವಿನ ಮಾಹಾತ್ಮ್ಯವೆಲ್ಲವನ್ನೂ ನಾನು ತಿಳಿದುಕೊಂಡುದಲ್ಲದೆ, ಭಕ್ತಿಮಾರ್ಗವನ್ನೂ, ಜ್ಞಾನಮಾರ್ಗವನ್ನೂ, ಕಷ್ಟಸಾಧ್ಯವಾದ ತಪಃಕ್ರಮವನ್ನೂ, ದಾನಮಾಡುವ ಬಗೆಯನ್ನೂ, ತೀರ್ಥಯಾತ್ರಾಕ್ರಮವನ್ನೂ ಕೇಳಿ ತಿಳಿದುಕೊಂಡಿರುತ್ತೇನೆ.

೨೪. ಆದರೆ ಶಿವನ ತತ್ತ್ವವನ್ನು ನಾನು ತಿಳಿದಿಲ್ಲ. ಆದುದರಿಂದ ಕ್ರಮವಾಗಿ ಆ ಶಿವನನ್ನು ಪೂಜಿಸುವ ಬಗೆಯನ್ನೂ ಮತ್ತು ಅವನ ನಾನಾವಿಧವಾದ ಚರಿತ್ರವನ್ನೂ ನನಗೆ ತಿಳಿಯಹೇಳಬೇಕು.

೨೫. ಎಲೈ ತಂದೆಯೇ, ನಿರ್ಗುಣನಾದ ಆ ಶಿವನು ಸಗುಣನಾದ ಬಗೆ ಹೇಗೆ? ಶಿವನ ಮಾಯೆಯಿಂದ ಮೋಹಿತನಾದ ನಾನು ಶಿವನ ತತ್ತ್ವವನ್ನು ತಿಳಿಯಲಾರೆ.

೨೬. ಆ ಶಂಭುವು ಈ ಸೃಷ್ಟಿಯಾಗುವ ಮೊದಲು ಯಾವ ಸ್ವರೂಪದಿಂದ ಇರುವನು? ಸೃಷ್ಟಿಯ ಸಮಯದಲ್ಲಿ ಪ್ರಭುವಾದ ಆತನು ಯಾವರೀತಿ ವಿಹರಿಸುತ್ತಿರುವನು.

ತದಂತೇ ಚ ಕಥಂ ದೇವಸ್ಸ ತಿಷ್ಠತಿ ಮಹೇಶ್ವರಃ ।
ಕಥಂ ಪ್ರಸನ್ನತಾಂ ಯಾತಿ ಶಂಕರೋ ಲೋಕಶಂಕರಃ ॥ ೨೭ ॥

ಸಂತುಷ್ಟಶ್ಚ ಸ್ವಭಕ್ತೇಭ್ಯಃ ಪರೇಭ್ಯಶ್ಚ ಮಹೇಶ್ವರಃ ।
ಕಿಂ ಫಲಂ ಯಚ್ಛತಿ ವಿಧೇ ತತ್ಸರ್ವಂ ಕಥಯಸ್ವ ನೋ ॥ ೨೮ ॥

ಸದ್ಯಃ ಪ್ರಸನ್ನೋ ಭಗವಾನ್ಭವತೀತ್ಯನುಸಂಶ್ರುತಂ ।
ಭಕ್ತಪ್ರಯಾಸಂ ಸ ಮಹಾನ್ನ ಪಶ್ಯತಿ ದಯಾಪರಃ ॥ ೨೯ ॥

ಬ್ರಹ್ಮಾ ವಿಷ್ಣುರ್ಮಹೇಶಶ್ಚ ತ್ರಯೋ ದೇವಾಶ್ಶಿವಾಂಶಜಾಃ ।
ಮಹೇಶಸ್ತತ್ರ ಪೂರ್ಣಾಂಶಸ್ಸ್ವಯಮೇವ ಶಿವಃ ಪರಃ ॥ ೩೦ ॥

ತಸ್ಯಾವಿರ್ಭಾವಮಾಖ್ಯಾಹಿ ಚರಿತಾನಿ ವಿಶೇಷತಃ ।
ಉಮಾವಿರ್ಭಾವಮಾಖ್ಯಾಹಿ ತದ್ವಿವಾಹಂ ತಥಾ ವಿಭೋ ॥ ೩೧ ॥

---

೨೭. ಆ ಸೃಷ್ಟಿಯ ಅನಂತರದಲ್ಲಿಯೂ ಸಹ ಆ ಮಹೇಶ್ವರನು ಎಂತಿರುವನು? ಲೋಕಕ್ಕೆಲ್ಲಾ ಮಂಗಲವನ್ನುಂಟುಮಾಡುವ ಆ ಶಂಕರನು ಪ್ರಸನ್ನನಾಗುವ ಬಗೆಯಾದರೂ ಎಂತು?

೨೮. ಸಂತುಷ್ಟನಾದ ಆ ಮಹೇಶ್ವರನು ತನ್ನ ಭಕ್ತರಿಗೂ, ಇತರರಿಗೂ ಯಾವ ಫಲವನ್ನು ನೀಡುವನು? ಓ ವಿಧೀ, ಅದೆಲ್ಲವನ್ನೂ ನನಗೆ ವಿವರಿಸಿ ಹೇಳು.

೨೯. ಆ ಭಗವಂತನು ಬೇಗನೆ ಪ್ರಸನ್ನನಾಗುವನೆಂದು ಕೇಳಿದೇನೆ. ದಯಾಶಾಲಿಯಾದ ಆ ಮಹಾತ್ಮನು ಭಕ್ತರು ಕಷ್ಟಪಡುವುದನ್ನು ನೋಡಿ ಎಂದಿಗೂ ಸಹಿಸಲಾರನು.

೩೦. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳು ಆ ಶಿವನ ಅಂಶದಿಂದ ಹುಟ್ಟಿದವರು. ಅವರಲ್ಲಿ ಪೂರ್ಣಾಂಶದಿಂದ ಹುಟ್ಟಿದ ಆ ಮಹೇಶ್ವರನು ಪರಮಾತ್ಮನಾದ ಎರಡನೆಯ ಶಿವನೇ ಆಗಿರುವನು.

೩೧ ಆ ಶಿವನು ಎಂತು ಆವಿರ್ಭವಿಸಿದನೆಂಬುವುದನ್ನೂ ಆತನ ಚರಿತ್ರೆಗಳನ್ನೂ ವಿವರವಾಗಿ ತಿಳಿಸು. ಅದರಂತೆಯೇ ಪಾರ್ವತಿಯು ಆವಿರ್ಭವಿಸಿದುದನ್ನೂ ಅವರೀರ್ವರಿಗೂ ವಿವಾಹವು ನಡೆದುದನ್ನೂ ತಿಳಿಸು.

**ತದ್ಗಾರ್ಹಸ್ಥ್ಯಂ ವಿಶೇಷೇಣ ತಥಾ ಲೀಲಾಃ ಪರಾ ಅಪಿ ।**
**ಏತತ್ಸರ್ವಂ ತಥಾನ್ಯಚ್ಚ ಕಥನೀಯಂ ತ್ವಯಾನಘ ॥ ೩೨ ॥**

**ತದುತ್ಪತ್ತಿಂ ವಿವಾಹಂ ಚ ಶಿವಾಯಾಸ್ತು ವಿಶೇಷತಃ ।**
**ಪ್ರಬ್ರೂಹಿ ಮೇ ಪ್ರಜಾನಾಥ ಗುಹಜನ್ಮ ತಥೈವ ಚ ॥ ೩೩ ॥**

**ಬಹುಭ್ಯಶ್ಚ ಶ್ರುತಂ ಪೂರ್ವಂ ನ ತೃಪ್ತೋಽಸ್ಮಿ ಜಗತ್ಪ್ರಭೋ ।**
**ಅತಸ್ತ್ವಾಂ ಶರಣಂ ಪ್ರಾಪ್ತಃ ಕೃಪಾಂ ಕುರು ಮಮೋಪರಿ ॥ ೩೪ ॥**

**ಇತಿ ಶ್ರುತ್ವಾ ವಚಸ್ತಸ್ಯ ನಾರದಸ್ಯಾಂಗಜಸ್ಯ ಹಿ ।**
**ಉವಾಚ ವಚನಂ ತತ್ರ ಬ್ರಹ್ಮಾ ಲೋಕಪಿತಾಮಹಃ ॥ ೩೫ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ನಾರದಪ್ರಶ್ನವರ್ಣನೋ ನಾಮ ಪಂಚಮೋಽಧ್ಯಾಯಃ**

---

೩೨. ಓ ಪಾಪರಹಿತನಾದ ಬ್ರಹ್ಮನೇ, ಅವರೀರ್ವರ ದಾಂಪತ್ಯಜೀವನವನ್ನೂ ಅದರಂತೆಯೇ ಉತ್ತಮವಾದ ಅವರ ಲೀಲಾವಿಲಾಸಗಳನ್ನೂ ಮತ್ತು ಇನ್ನೇನಿದೆಯೋ ಅದೆಲ್ಲವನ್ನೂ ನೀನು ಹೇಳಬೇಕು.

೩೩. ಓ ಸೃಷ್ಟಿಕರ್ತಾ, ಆ ಶಿವನ ಉತ್ಪತ್ತಿಯನ್ನೂ, ಮಂಗಲಸ್ವರೂಪಳಾದ ಆ ಪಾರ್ವತಿಯ ಮದುವೆಯನ್ನೂ, ಕುಮಾರಸ್ವಾಮಿಯ ಉತ್ಪತ್ತಿಯನ್ನೂ, ನನಗೆ ವಿಸ್ತಾರವಾಗಿ ತಿಳಿಸು.

೩೪. ಓ ಜಗತ್ಪ್ರಭೂ, ನಾನೀವಿಷಯವನ್ನು ಹಿಂದೆಯೇ ಅನೇಕರಿಂದ ಕೇಳಿ ತಿಳಿದಿದ್ದರೂ ನನಗೆ ತೃಪ್ತಿಯಿಲ್ಲವಾಗಿದೆ. ಆದುದರಿಂದ ನಿನ್ನನ್ನು ಮರೆ ಹೊಕ್ಕಿದ್ದೇನೆ. ನನ್ನ ಮೇಲೆ ದಯೆಯನ್ನಿಡು ಎಂದು ಪ್ರಾರ್ಥಿಸಿದನು.

೩೫. ಹೀಗೆ ತನ್ನ ಮಗನಾದ ನಾರದನು ಹೇಳಿದ ಮಾತನ್ನು ಕೇಳಿ ಲೋಕಗಳಿಗೆಲ್ಲಾ ಪಿತಾಮಹನಾದ ಬ್ರಹ್ಮನು ಇಂತೆಂದು ಹೇಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ನಾರದಪ್ರಶ್ನವರ್ಣನವೆಂಬ ಐದನೆಯ ಅಧ್ಯಾಯವು ಮುಗಿದುದು.



*

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸೃಷ್ಟಿಖಂಡೇ

## ಷಷ್ಠೋಽಧ್ಯಾಯಃ

॥ ಬ್ರಹ್ಮೋವಾಚ ॥

ಭೋ ಬ್ರಹ್ಮನ್ಸಾಧು ಪೃಷ್ಟೋಽಹಂ ತ್ವಯಾ ವಿಬುಧಸತ್ತಮ ।
ಲೋಕೋಪಕಾರಿಣಾ ನಿತ್ಯಂ ಲೋಕಾನಾಂ ಹಿತಕಾಮ್ಯಯಾ ॥ ೧ ॥

ಯಚ್ಛ್ರುತ್ವಾ ಸರ್ವಲೋಕಾನಾಂ ಸರ್ವಪಾಪಕ್ಷಯೋ ಭವೇತ್ ।
ತದಹಂ ತೇ ಪ್ರವಕ್ಷ್ಯಾಮಿ ಶಿವತತ್ತ್ವಮನಾಮಯಂ ॥ ೨ ॥

---

## ಆರನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ಮಹಾಜ್ಞಾನಿಯಾದ ಬ್ರಾಹ್ಮಣ ಶ್ರೇಷ್ಠನೇ, ಸದಾ ಪ್ರಪಂಚಕ್ಕೆ ಉಪಕಾರವನ್ನು ಮಾಡುತ್ತಿರುವ ನೀನು ಈ ಜಗತ್ತಿಗೆ ಒಳ್ಳೆಯದಾಗಲೆಂದು ಬಯಸಿ ನನ್ನನ್ನು ಚೆನ್ನಾಗಿ ಪ್ರಶ್ನೆಮಾಡಿದೆ.

೨. ಯಾವುದನ್ನು ಕೇಳಿದೊಡನೆಯೇ ಜನರೆಲ್ಲರ ಪಾಪಗಳೆಲ್ಲವೂ ನಶಿಸಿ ಹೋಗುವುವೋ ಅಂತಹ ವಿಕಾರರಹಿತವಾದ ಶುದ್ಧ ಶಿವತತ್ತ್ವವನ್ನು ನಿನಗೆ ಬೋಧಿಸುತ್ತೇನೆ.

**ಶಿವತತ್ತ್ವಂ ಮಯಾ ನೈವ ವಿಷ್ಣುನಾಪಿ ಯಥಾರ್ಥತಃ ।**
**ಜ್ಞಾತಂ ಚ ಪರಮಂ ರೂಪಮದ್ಭುತಂ ಚ ಪರೇಣ ನ ॥ ೩ ॥**

**ಮಹಾಪ್ರಲಯಕಾಲೇ ಚ ನಷ್ಟೇ ಸ್ಥಾವರಜಂಗಮೇ ।**
**ಆಸೀತ್ತಮೋಮಯಂ ಸರ್ವಮನರ್ಕಗ್ರಹತಾರಕಂ ॥ ೪ ॥**

**ಅಚಂದ್ರಮನಹೋರಾತ್ರಮನಗ್ನ್ಯನಿಲಭೂಜಲಂ ।**
**ಅಪ್ರಧಾನಂ ವಿಯಚ್ಛೂನ್ಯಮನ್ಯತೇಜೋವಿವರ್ಜಿತಂ ॥ ೫ ॥**

**ಅದೃಷ್ಟತ್ವಾದಿರಹಿತಂ ಶಬ್ದಸ್ಪರ್ಶಸಮುಜ್ಝಿತಂ ।**
**ಅವ್ಯಕ್ತಗಂಧರೂಪಂ ಚ ರಸತ್ಯಕ್ತಮದಿಙ್ಮುಖಂ ॥ ೬ ॥**

**ಇತ್ಥಂ ಸತ್ಯಂಧತಮಸೇ ಸೂಚೀಭೇದ್ಯೇ ನಿರಂತರೇ ।**
**ತತ್ಸದ್ಬ್ರಹ್ಮೇತಿ ಯಚ್ಛ್ರುತ್ವಾ ಸದೇಕಂ ಪ್ರತಿಪದ್ಯತೇ ॥ ೭ ॥**

---

೩. ಶಿವನ ತತ್ತ್ವವನ್ನೂ, ಆತನ ಅದ್ಭುತರೂಪವನ್ನೂ, ನಾನಾಗಲಿ, ವಿಷ್ಣುವಾಗಲಿ, ಮತ್ತಿನ್ನಾರಾದರೂ ಆಗಲಿ, ಯಥಾರ್ಥವಾಗಿ ಯಾರೂ ಅರಿಯರು.

೪ ಮಹಾಪ್ರಳಯದ ಸಮಯದಲ್ಲಿ ಚರಚರಾತ್ಮಕವಾದ ಈ ಪ್ರಪಂಚವೆಲ್ಲವೂ ನಾಶವಾಗಿಬಿಟ್ಟ ಮೇಲೆ ಸೂರ್ಯಚಂದ್ರಾದಿ ಗ್ರಹಗಳೂ ನಕ್ಷತ್ರಗಳೂ ಇಲ್ಲದೆ ಎಲ್ಲವೂ ಕತ್ತಲಿನಿಂದ ಆವರಿಸಲ್ಪಟ್ಟಿತ್ತು ಎಂದರೆ ಎಲ್ಲೆಲ್ಲಿಯೂ ಕತ್ತಲೆಯು ತಾನೇ ತಾನಾಗಿ ತುಂಬಿಹೋಗಿತ್ತು.

೫. ಆಗ ಚಂದ್ರನಿರಲಿಲ್ಲ. ಹಗಲು ರಾತ್ರಿಗಳಿರಲಿಲ್ಲ. ಬೆಂಕಿಯೂ, ಗಾಳಿಯೂ, ನೀರೂ, ನೆಲವೂ, ಇರಲಿಲ್ಲ. ಬೇರಾವ ತೇಜಸ್ಸೂ ಇಲ್ಲದೆ, ಎಲ್ಲಿ ನೋಡಿದರೂ ಅದೆಲ್ಲವೂ ಬರೀ ಶೂನ್ಯವಾಗಿಯೇ ತೋರುತ್ತಿತ್ತು.

೬. ನೋಡುವುದಕ್ಕೆ ಸಾಧ್ಯವಾದ ಯಾವ ವಸ್ತುಗಳೂ ಇಲ್ಲದ್ದರಿಂದ ಶಬ್ದಸ್ಪರ್ಶಗಳು ಕಂಡುಬರುತ್ತಿರಲಿಲ್ಲ. ಗಂಧ ಮತ್ತು ರೂಪ ಇವುಗಳು ಗೋಚರವೇ ಆಗುತ್ತಿರಲಿಲ್ಲ. ರಸವಿರಲೇ ಇರಲಿಲ್ಲ. ದಿಕ್ಕುಗಳೇ ಗೊತ್ತಾಗುತ್ತಿರಲಿಲ್ಲ.

೭-೧೪. ಈ ರೀತಿಯಾಗಿ ಸೂರ್ಯಚಂದ್ರಾದಿಯಾದ ಚರಾಚರಾತ್ಮಕ ಪ್ರಪಂಚವೆಲ್ಲವೂ ಇಲ್ಲದೆ, ಸೂಜಿಯ ಮೊನೆಯಿಂದ ಬಿಡಿಸುವಷ್ಟುಮಟ್ಟಿಗೆ ಎಡೆಬಿಡದೆ

**ಇತೀದೃಶಂ ಯದಾ ನಾಸೀದ್ಯತ್ತತ್ಸದಸದಾತ್ಮಕಂ ।**
**ಯೋಗಿನೋಂತರ್ಹಿತಾಕಾಶೇ ಯತ್ಪಶ್ಯಂತಿ ನಿರಂತರಂ ॥ ೮ ॥**

**ಅಮನೋಗೋಚರಂ ವಾಚಾಂ ವಿಷಯಂ ನ ಕದಾಚನ ।**
**ಅನಾಮರೂಪವರ್ಣಂ ಚ ನ ಚ ಸ್ಥೂಲಂ ನ ಯತ್ಕೃಶಂ ॥ ೯ ॥**

**ಅಹ್ರಸ್ವದೀರ್ಘಮಲಘು ಗುರುತ್ವಪರಿವರ್ಜಿತಂ ।**
**ನ ಯತ್ರೋಪಚಯಃ ಕಶ್ಚಿತ್ತಥಾ ನೋಪಚಯೋಽಪಿ ಚ ॥ ೧೦ ॥**

**ಅವಿಧತ್ತೇ ಸ ಚಕಿತಂ ಯದಸ್ತೀತಿ ಶ್ರುತಿಃ ಪುನಃ ।**
**ಸತ್ಯಂ ಜ್ಞಾನಮನಂತಂ ಚ ಪರಾನಂದಂ ಪರಂ ಮಹಃ ॥ ೧೧ ॥**

---

ಒತ್ತಾಗಿ ತಮಸ್ಸಿನಿಂದ ಆವೃತವಾಗಿರುವ ಆ ಸಮಯದಲ್ಲಿ ಯಾವ ಪರಬ್ರಹ್ಮವಸ್ತುವನ್ನು "ತತ್ಸದ್ಬ್ರಹ್ಮ" ಇತ್ಯಾದಿ ಶ್ರುತಿಯು ತ್ರಿಕಾಲಾಬಾಧಿತವಾದ ಏಕಮಾತ್ರ ವಸ್ತುವೆಂದು ಪ್ರತಿಪಾದಿಸುವುದೋ, ಯಾವುದು ಸದ್ರೂಪದಿಂದಲೂ, ಅಸದ್ರೂಪದಿಂದಲೂ ತೋರುವುದೋ ಆ ಪರಬ್ರಹ್ಮವಸ್ತುವೊಂದೇ ಪ್ರಕಾಶಿಸುತ್ತಿದ್ದಿತು. ಯೋಗಿಗಳು ಮಾತ್ರ ಆ ವಸ್ತುವನ್ನು ಅಂತರ್ಹಿತವಾದ ಹೃದಯಾಕಾಶದಲ್ಲಿ ಎಡೆಬಿಡದೆ ಸಾಕ್ಷಾತ್ಕರಿಸುವರು. ಆ ವಸ್ತುವೆಂದಿಗೂ ಮನಸ್ಸಿಗೆ ಗೋಚರವಾಗಲಾರದು. ಮಾತುಗಳಿಗೆ ನಿಲುಕಲಾರದು. ಅದಕ್ಕೆ ಹೆಸರು, ರೂಪ, ಬಣ್ಣ, ಇದೊಂದೂ ಇಲ್ಲ. ಅದು ದಪ್ಪವಾದುದೂ ಅಲ್ಲ, ಕೃಶವಾದುದೂ ಅಲ್ಲ, ಅಲ್ಲದೆ ಅದು ಗಿಡ್ಡಾಗಿಯೂ ಇಲ್ಲ, ಹಗುರವಾಗಿಯೂ ಇಲ್ಲ, ಭಾರವಾಗಿಯೂ ಇಲ್ಲ, ಅದಕ್ಕೆ ಬೆಳವಣಿಗೆಯೂ ಇಲ್ಲ, ಸವೆದುಹೋಗುವಿಕೆಯೂ ಇಲ್ಲ, ಶ್ರುತಿಯೂ ಸಹ ಹೆದರಿಹೆದರಿಕೊಂಡೇ 'ಅಸ್ತಿ' (ಇದೆ) ಎಂಬುದಾಗಿ ಅದನ್ನು ಬಣ್ಣಿಸುವುದು. ಆ ಪರಬ್ರಹ್ಮವು ಸತ್ಯಸ್ವರೂಪವಾದುದು (ಯಾವಾಗಲೂ ನಾಶವಿಲ್ಲದೆ ಹುಟ್ಟೂ ಇಲ್ಲದೆ ಇರುವಂಥದು) ಅಲ್ಲದೆ ಜ್ಞಾನಮಯವಾದುದು (ಸ್ವಪ್ರಕಾಶವಾದುದು). ಮತ್ತು ಅನಂತವಾದುದು (ಕೊನೆಯಿಲ್ಲದುದು) ಇದೂ ಅಲ್ಲದೆ ಉತ್ತಮೋತ್ತಮವಾದ ಆನಂದಸ್ವರೂಪವಾದುದಾಗಿಯೂ ಅದ್ಭುತವಾದ ತೇಜಸ್ಸಿನಿಂದ ಬೆಳಗುವಂತದೂ ಆಗಿರುವುದು. ಪ್ರಮಾಣಗಳಿಗೆ ಅದು ನಿಲುಕತಕ್ಕುದಲ್ಲ. ಅದಕ್ಕೆ ಬೇರೊಂದು ಆಧಾರವಾವುದೂ ಇಲ್ಲ, ಅದು ವಿಕಾರವನ್ನು ಹೊಂದತಕ್ಕುದಲ್ಲ, ಮತ್ತೆ ಅದಕ್ಕೆ ಆಕಾರವೇ ಇಲ್ಲ. ಸತ್ವರಜಸ್ತಮೋಗುಣಗಳಿಗೆ ಅಲ್ಲಿ ಅವಕಾಶವಿಲ್ಲ, ಯೋಗಿಗಳು ಮಾತ್ರ ಆ ವಸ್ತುವನ್ನು ಸಾಕ್ಷಾತ್ಕರಿಸಬಲ್ಲರು. ಆ ವಸ್ತುವು, ಎಲ್ಲವನ್ನೂ ವ್ಯಾಪಿಸಿ ಎಲ್ಲೆಲ್ಲಿಯೂ ತಾನೇತಾನಾಗಿದೆ. ಅದನ್ನು ನಿರ್ವಿ

**ಅಪ್ರಮೇಯಮನಾಧಾರಮವಿಕಾರಮನಾಕೃತಿ ।**
**ನಿರ್ಗುಣಂ ಯೋಗಿಗಮ್ಯಂ ಚ ಸರ್ವವ್ಯಾಪ್ಯೇಕಕಾರಕಂ ॥ ೧೨ ॥**

**ನಿರ್ವಿಕಲ್ಪಂ ನಿರಾರಂಭಂ ನಿರ್ಮಾಯಂ ನಿರುಪದ್ರವಂ ।**
**ಅದ್ವಿತೀಯಮನಾದ್ಯಂತಮವಿಕಾಶಂ ಚಿದಾತ್ಮಕಂ ॥ ೧೩ ॥**

**ಯಸ್ಯೇತ್ಥಂ ಸಂವಿಕಲ್ಪಂತೇ ಸಂಜ್ಞಾಸಂಜ್ಞೋಕ್ತಿತಃ ಸ್ಮ ವೈ ।**
**ಕಿಯತಾ ಚೈವ ಕಾಲೇನ ದ್ವಿತೀಯೇಚ್ಛಾಭವತ್ಕಿಲ ॥ ೧೪ ॥**

**ಅಮೂರ್ತೇನ ಸ್ವಮೂರ್ತಿಶ್ಚ ತೇನಾಕಲ್ಪಿ ಸ್ವಲೀಲಯಾ ।**
**ಸರ್ವೈಶ್ವರ್ಯಗುಣೋಪೇತಾ ಸರ್ವಜ್ಞಾನಮಯೀ ಶುಭಾ ॥ ೧೫ ॥**

**ಸರ್ವಗಾ ಸರ್ವರೂಪಾ ಚ ಸರ್ವದೃಕ್ಸರ್ವಕಾರಿಣೀ ।**
**ಸರ್ವೈಕವಂದ್ಯಾ ಸರ್ವಾದ್ಯಾ ಸರ್ವದಾ ಸರ್ವಸಂಸ್ಕೃತಿಃ ॥ ೧೬ ॥**

---

ಕಲ್ಪವೆಂತಲೂ, ನಿರಾರಂಭವೆಂತಲೂ (ಕ್ರಿಯಾರಹಿತವಾದುದು) ನಿರ್ಮಾಯ, (ಮಾಯೆಗೆ ಸಿಲುಕದೇ ಇರುವಂಥದು) ನಿರುಪದ್ರವ (ಯಾವ ಉಪದ್ರವಗಳೂ ಅದನ್ನು ಕೋಟಲೆಗೊಳಿಸಲಾರವು) ಅದ್ವಿತೀಯ (ಅದಕ್ಕಿಂತಲೂ ಎರಡನೆಯ ವಸ್ತು ವಿಲ್ಲ) ಅವಿಕಾಶ, ಚಿದಾತ್ಮಕ ಎಂದು ಮುಂತಾಗಿ ಸಂಜ್ಞಾವಚನಗಳಿಂದಲೂ, ನಾನಾವಿಧವಾಗಿ ಊಹಿಸುವರು. ಅಂಥ ಪರಬ್ರಹ್ಮವಸ್ತುವು ಹೀಗೆಯೇ ಇರುತ್ತಿರಲು ಅದಕ್ಕೆ ಬಹುಕಾಲದಮೇಲೆ ಇಚ್ಛೆಯುಂಟಾಯಿತು.

೧೫-೧೬. ನಿಷ್ಕ್ರಿಯವಾದ ಆ ಪರಬ್ರಹ್ಮವಸ್ತುವು ತನ್ನ ಲೀಲಾಮಾತ್ರ ದಿಂದಲೇ ತನ್ನ ಶರೀರವನ್ನು ಸೃಷ್ಟಿಸಿತು. ಆ ಶರೀರವು ಸರ್ವೈಶ್ವರ್ಯಗುಣಗಳಿಂದ ಕೂಡಿದುದು, ಸರ್ವಜ್ಞಾನಮಯವಾದುದು, ಮಂಗಲಮಯವಾದುದು. ಆ ಮೂರ್ತಿಯು (ಎಲ್ಲೆಡೆಯಲ್ಲೂ ಇರತಕ್ಕುದು.) ಸರ್ವರೂಪ (ಎಲ್ಲ ರೂಪಗಳೂ ಉಳ್ಳುದು,) ವಾಗಿಯೂ ಎಲ್ಲವನ್ನೂ ಮಾಡುವಂಥದೂ, ಎಲ್ಲರಿಂದಲೂ ನಮಸ್ಕರಿ ಸಲ್ಪಡುವಂಥದೂ, ಎಲ್ಲಕ್ಕೂ ಮೊದಲನೆಯದಾಗಿಯೂ, ಎಲ್ಲವನ್ನೂ ಕೊಡುವಂಥದೂ ಎಲ್ಲ ಸಂಸ್ಕಾರರೂಪವಾದುದೂ ಆಗಿದ್ದಿತು.

ಪರಿಕಲ್ಪ್ಯೇತಿ ತಾಂ ಮೂರ್ತಿಮೈಶ್ವರೀಂ ಶುದ್ಧರೂಪಿಣೀಂ ।
ಅದ್ವಿತೀಯಮನಾದ್ಯಂತಂ ಸರ್ವಾಭಾಸಂ ಚಿದಾತ್ಮಕಂ ॥
ಅಂತರ್ದಧೇ ಪರಾಖ್ಯಂ ಯದ್ಬ್ರಹ್ಮ ಸರ್ವಗಮವ್ಯಯಂ ॥ ೧೭ ॥

ಅಮೂರ್ತೇ ಯತ್ಪರಾಖ್ಯಂ ವೈ ತಸ್ಯ ಮೂರ್ತಿಸ್ಸದಾಶಿವಃ ।
ಅರ್ವಾಚೀನಾಃ ಪರಾಚೀನಾ ಈಶ್ವರಂ ತಂ ಜಗುರ್ಬುಧಾಃ ॥ ೧೮ ॥

ಶಕ್ತಿಸ್ತದೈಕಲೇನಾಪಿ ಸ್ವೈರಂ ವಿಹರತಾ ತನುಃ ।
ಸ್ವವಿಗ್ರಹಾತ್ಸ್ವಯಂ ಸೃಷ್ಟಾ ಸ್ವಶರೀರಾನಪಾಯಿನೀ ॥ ೧೯ ॥

ಪ್ರಧಾನಂ ಪ್ರಕೃತಿಂ ತಾಂ ಚ ಮಾಯಾಂ ಗುಣವತೀಂ ಪರಾಂ ।
ಬುದ್ಧಿತತ್ತ್ವಸ್ಯ ಜನನೀಮಾಹುರ್ವಿಕೃತಿವರ್ಜಿತಾಂ ॥ ೨೦ ॥

---

೧೭. ಹೀಗೆ ಅದ್ವಿತೀಯವೂ, ಆದ್ಯಂತರಹಿತವೂ, ಸರ್ವಸ್ವರೂಪವೂ, ಪ್ರಕಾಶಮಯವೂ, ಸರ್ವಗವೂ, ಅವಿನಾಶಿಯೂ ಆದ ಆ ಪರಬ್ರಹ್ಮವು ಶುದ್ಧಸ್ವರೂಪವುಳ್ಳ ಆ ಈಶ್ವರ ಮೂರ್ತಿಯನ್ನು (ಶರೀರವನ್ನು) ಕಲ್ಪಿಸಿ ಅಂತರ್ಧಾನಹೊಂದಿತು.

೧೮. ನಿಷ್ಕ್ರಿಯಾವಸ್ಥೆಯಲ್ಲಿ ಯಾವುದು ಪರಬ್ರಹ್ಮವೆನಿಸಿತೋ ಅದರ ಮೂರ್ತಿಯು (ಶರೀರವು) ಸದಾಶಿವನೆಂದು ತಿಳಿ. ಆ ಸದಾಶಿವ ಮೂರ್ತಿಯನ್ನೇ ಈಚಿನ ಮತ್ತು ಹಿಂದಿನ ತಿಳಿದ ವಿದ್ವಾಂಸರು ಈಶ್ವರನೆಂದು ಕರೆಯುವರು.

೧೯. ಆಗ ಸ್ವಚ್ಛಂದವಾಗಿ ವಿಹರಿಸುತ್ತಿದ್ದ ಆ ಪರಬ್ರಹ್ಮಮೂರ್ತಿಯು ಒಂಟಿಯಾಗಿದ್ದರೂ ಸಹ, ಅದರ ಶರೀರವನ್ನೆಡಬಿಡದಂತಿರುವ ಶಕ್ತಿಯು, ಆ ಪರಬ್ರಹ್ಮ ವಿಗ್ರಹದಿಂದ ತಾನಾಗಿಯೇ ಸೃಷ್ಟಿಸಲ್ಪಟ್ಟಿತು.

೨೦. ಆ ಶಕ್ತಿಯನ್ನೇ ಪ್ರಧಾನವೆಂತಲೂ, ಪ್ರಕೃತಿಯೆಂತಲೂ, ಮಾಯೆಯೆಂತಲೂ, ಸತ್ವ, ರಜಸ್ಸು, ತಮಸ್ಸುಗಳೆಂಬ ಗುಣತ್ರಯಗಳುಳ್ಳವಳೆಂತಲೂ, ಬುದ್ಧಿತತ್ವದ ಮಾತೆಯೆಂತಲೂ, ವಿಕಾರ ವರ್ಜಿತಗಳೆಂತಲೂ ನಾನಾವಿಧವಾಗಿ ಕರೆಯುವರು.

**ಸಾ ಶಕ್ತಿರಂಬಿಕಾ ಪ್ರೋಕ್ತಾ ಪ್ರಕೃತಿಃ ಸಕಲೇಶ್ವರೀ ।**
**ತ್ರಿದೇವಜನನೀ ನಿತ್ಯಾ ಮೂಲಕಾರಣಮಿತ್ಯುತ ॥ ೨೧ ॥**

**ಅಸ್ಯಾ ಅಷ್ಟೌ ಭುಜಾಶ್ಚಾಸನ್ವಿಚಿತ್ರವದನಾ ಶುಭಾ ।**
**ಏಕಾ ಚಂದ್ರಸಹಸ್ರಸ್ಯ ವದನೇ ಭಾಶ್ಚ ನಿತ್ಯಶಃ ॥ ೨೨ ॥**

**ನಾನಾಭರಣಸಂಯುಕ್ತಾ ನಾನಾಗತಿಸಮನ್ವಿತಾ ।**
**ನಾನಾಯುಧಧರಾ ದೇವೀ ಫುಲ್ಲಪಂಕಜಲೋಚನಾ ॥ ೨೩ ॥**

**ಅಚಿಂತ್ಯತೇಜಸಾ ಯುಕ್ತಾ ಸರ್ವಯೋನಿಃ ಸಮುದ್ಯತಾ ।**
**ಏಕಾಕಿನೀ ಯದಾ ಮಾಯಾ ಸಂಯೋಗಾಚ್ಚಾಪ್ಯನೇಕಿಕಾ ॥ ೨೪ ॥**

---

೨೧. ಆ ಪರಬ್ರಹ್ಮಶಕ್ತಿಯೇ ಅಂಬಿಕೆಯೆಂದು ಕರೆಯಲ್ಪಡುವಳು. ಅವಳನ್ನೇ ಪ್ರಕೃತಿಯೆಂತಲೂ, ಸಕಲೇಶ್ವರಿಯೆಂತಲೂ ಹೇಳುವರು. ಮತ್ತು ಆ ಅಂಬಿಕೆಯೇ ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳಿಗೂ, ತಾಯಿಯೆನಿಸಿದವಳು, ಅಲ್ಲದೆ, ಅವಳು ನಿತ್ಯಳೆಂತಲೂ, ಮೂಲಕಾರಣವೆಂತಲೂ ಹೇಳಲ್ಪಡುವಳು.

೨೨. ಈಕೆಗೆ ಎಂಟು ಕೈಗಳು, ವಿಚಿತ್ರವಾದ ಮುಖಗಳು, ಇದ್ದುವು. ಸಾವಿರಾರು ಚಂದ್ರರು ಒಟ್ಟಿಗೇ ಸೇರಿದರೆ ಉಂಟಾಗುವಷ್ಟುಮಟ್ಟಿನ ಪಾವನವಾದ ಕಾಂತಿಯು ಆಕೆಯ ಮುಖಮಂಡಲದಲ್ಲಿ ಯಾವಾಗಲೂ ನೆಲಸಿದ್ದಿತು.

೨೩. ಆ ದೇವಿಯು ನಾನಾವಿಧವಾದ ಒಡವೆಗಳಿಂದ ಅಲಂಕೃತಳಾಗಿದ್ದಳು. ನಾನಾವಿಧವಾದ ಗತಿಗಳಿಂದ ಕೂಡಿದವಳಾಗಿದ್ದಳು. ಆಕೆಯ ಕೈಗಳು ವಿವಿಧವಾದ ಆಯುಧಗಳಿಂದ ಶೋಭಿಸುತ್ತಿದ್ದುವು. ಕಂಗಳು ಅರಳಿದ ತಾವರೆಯನ್ನು ಹೋಲುತ್ತಿದ್ದುವು.

೨೪. ಆಕೆಯ ತೇಜಸ್ಸನ್ನು ಊಹಿಸಲೂ ಸಾಧ್ಯವಿಲ್ಲವಾಗಿತ್ತು. ಆಕೆಯು ಸರ್ವಭೂತಗಳಿಗೂ ಕಾರಣಭೂತಳು. ಮಾಯಾರೂಪಿಣಿಯಾದ ಆಕೆಯು ಒಂಟಿಯಾಗಿದ್ದರೂ ವಿವಿಧಸಂಯೋಗವಶದಿಂದ ವೈವಿಧ್ಯವನ್ನು ಪಡೆವಳು.

ಪರಃ ಪುಮಾನೀಶ್ವರಃ ಸ ಶಿವಶ್ಶಂಭುರನೀಶ್ವರಃ ।
ಶೀರ್ಷೇ ಮಂದಾಕಿನೀಧಾರೀ ಭಾಲಚಂದ್ರಸ್ತ್ರಿಲೋಚನಃ ॥ ೨೫ ॥

ಪಂಚವಕ್ತ್ರಃ ಪ್ರಸನ್ನಾತ್ಮಾ ದಶಬಾಹುಸ್ತ್ರಿಶೂಲಧೃಕ್ ।
ಕರ್ಪೂರಗೌರಸುಸಿತೋ ಭಸ್ಮೋದ್ಧೂಲಿತವಿಗ್ರಹಃ ॥ ೨೬ ॥

ಯುಗಪಚ್ಚ ತಯಾ ಶಕ್ತ್ಯಾ ಸಾಕಂ ಕಾಲಸ್ವರೂಪಿಣಾ ।
ಶಿವಲೋಕಾಭಿಧಂ ಕ್ಷೇತ್ರಂ ನಿರ್ಮಿತಂ ತೇನ ಬ್ರಹ್ಮಣಾ ॥ ೨೭ ॥

ತದೇವ ಕಾಶಿಕೇತ್ಯೇತತ್ಪ್ರೋಚ್ಯತೇ ಕ್ಷೇತ್ರಮುತ್ತಮಂ ।
ಪರಂ ನಿರ್ವಾಣಸಂಖ್ಯಾನಂ ಸರ್ವೋಪರಿ ವಿರಾಜಿತಂ ॥ ೨೮ ॥

ತಾಭ್ಯಾಂ ಚ ರಮಣಾಭ್ಯಾಂ ಚ ತಸ್ಮಿನ್ಕ್ಷೇತ್ರೇ ಮನೋರಮೇ ।
ಪರಮಾನಂದರೂಪಾಭ್ಯಾಂ ಪರಮಾನಂದರೂಪಿಣೇ ॥ ೨೯ ॥

---

೨೫–೨೬ ಆ ಈಶ್ವರನನ್ನೇ ಪರಮಪುರುಷನೆಂಬುದಾಗಿ ತಿಳಿ. ಆತನನ್ನು ಶಿವನೆಂದೂ, ಶಂಭುವೆಂತಲೂ ಕರೆಯುವರು. ಬೇರೆಯಾವಾತನೂ ಅತನಿಗೆ ಪ್ರಭುವಾಗಲಾರನು. ಆತನ ತಲೆಯಲ್ಲಿ ಗಂಗೆಯು ಶೋಭಿಸುತ್ತಿದ್ದಳು. ಹಣೆಯಂಚಿನಲ್ಲಿ ಬಾಲಚಂದ್ರನು ಮೆರೆಯುತ್ತಿದ್ದನು. ಆತನಿಗೆ ಮೂರು ಕಣ್ಣುಗಳು, ಐದು ಮುಖಗಳು, ಹತ್ತು ಕೈಗಳು ಇದ್ದುವು. ಆತನು ತ್ರಿಶೂಲವನ್ನು ಧರಿಸಿದ್ದನು. ಕರ್ಪೂರದಂತೆ ಬೆಳ್ಳಗೆ ಆತನ ಮೈಬಣ್ಣವಿದ್ದಿತು. ಶರೀರವೆಲ್ಲಾ ಭಸ್ಮದಿಂದ ಉದ್ಧೂಲಿತವಾಗಿತ್ತು.

೨೭. ಕಾಲಸ್ವರೂಪಿಯಾದ ಆ ಪರಮಪುರುಷನು ಆ ಶಕ್ತಿಯೊಡಗೂಡಿ, ಶಿವಲೋಕವೆಂಬ ಕ್ಷೇತ್ರವನ್ನು ಒಟ್ಟಿಗೇ ನಿರ್ಮಿಸಿದನು.

೨೮. ಆ ಶಿವಲೋಕವೇ ಉತ್ತಮವಾದ ಕಾಶೀಕ್ಷೇತ್ರವೆನಿಸಿತು. ಶ್ರೇಷ್ಠವಾದ ಮೋಕ್ಷಭೂಮಿಯೆನಿಸಿ, ಎಲ್ಲಕ್ಕಿಂತಲೂ ಮೇಲೆ ಆ ಕ್ಷೇತ್ರವು ವಿರಾಜಿಸುತ್ತಿತ್ತು.

೨೯. ಆ ಮನೋಹರವಾದ ಕ್ಷೇತ್ರದಲ್ಲಿ ಪರಮಾನಂದ ಸ್ವರೂಪರಾದ, ಆ ಶಿವಶಕ್ತಿಯರೊಡನೆ ಕೂಡಿ, ಕಾಶಿಯು ಪರಮಾನಂದದಾಯಕವೆನಿಸಿತು.

**ಮುನೇ ಪ್ರಲಯಕಾಲೇಽಪಿ ನ ತತ್ಕ್ಷೇತ್ರಂ ಕದಾಚನ ।**
**ವಿಮುಕ್ತಂ ಹಿ ಶಿವಾಭ್ಯಾಂ ಯದವಿಮುಕ್ತಂ ತತೋ ವಿದುಃ ॥ ೩೦ ॥**

**ಅಸ್ಯಾನಂದವನಂ ನಾಮ ಪುರಾಕಾರಿ ಪಿನಾಕಿನಾ ।**
**ಕ್ಷೇತ್ರಸ್ಯಾನಂದಹೇತುತ್ವಾದವಿಮುಕ್ತಮನಂತರಂ ॥ ೩೧ ॥**

**ಅಥಾನಂದವನೇ ತಸ್ಮಿಂಛಿವಯೋ ರಮಮಾಣಯೋಃ ।**
**ಇಚ್ಛೇತ್ಯಭೂತ್ಸುರರ್ಷೇ ಹಿ ಸೃಜ್ಯಃ ಕೋಽಪ್ಯಪರಃ ಕಿಲ ॥ ೩೨ ॥**

**ಯಸ್ಮಿನ್ನ್ಯಸ್ಯ ಮಹಾಭಾರಮಾವಾಂ ಸ್ವಸ್ವೈರಚಾರಿಣೌ ।**
**ನಿರ್ವಾಣಧಾರಣಂ ಕುರ್ವಃ ಕೇವಲಂ ಕಾಶಿಶಾಯಿನೌ ॥ ೩೩ ॥**

**ಸ ಏವ ಸರ್ವಂ ಕುರುತಾಂ ಸ ಏವ ಪರಿಪಾತು ಚ ।**
**ಸ ಏವ ಸಂವೃಣೋತ್ವಂತೇ ಮದನುಗ್ರಹತಸ್ಸದಾ ॥ ೩೪ ॥**

೩೦. ಓ ನಾರದ, ಪ್ರಳಯಕಾಲದಲ್ಲಿಯೂ ಸಹ ಬಿಡದೆ, ಶಿವಪಾರ್ವತಿಯರು ಅಲ್ಲಿಯೇ ಯಾವಾಗಲೂ ನೆಲಸಿರುವುದರಿಂದ ಆ ಕಾಶೀಕ್ಷೇತ್ರವನ್ನು ಅವಿಮುಕ್ತ ವೆನ್ನುವರು.

೩೧. ಆ ಕ್ಷೇತ್ರವು ಆನಂದದಾಯಕವಾಗಿದ್ದುದರಿಂದ, ಮೊದಲು, ಆ ಕ್ಷೇತ್ರಕ್ಕೆ ಆನಂದವನವೆಂದು ಶಿವನು ಹೆಸರಿಟ್ಟನು. ಆಮೇಲೆ ಅವಿಮುಕ್ತವೆಂಬ ಹೆಸರು ಬಂದಿತು.

೩೨. ಓ ನಾರದ, ಬಳಿಕ ಆ ಆನಂದವನದಲ್ಲಿ ಶಿವಪಾರ್ವತಿಯರು ವಿಹರಿಸುತ್ತಿರಲು, ಅವರಿಗೆ ಮತ್ತೊಬ್ಬನನ್ನು ಸೃಷ್ಟಿಸಬೇಕೆಂಬ ಇಚ್ಛೆಯುಂಟಾಯಿತು.

೩೩. ಆ ಪುರುಷನಲ್ಲಿ ನಾವು ಭಾರವನ್ನು ಹೊರಿಸಿಬಿಟ್ಟು, ಈರ್ವರೂ ಈ ಕಾಶಿಯಲ್ಲೇ ಇದ್ದುಕೊಂಡು, ಸ್ವಚ್ಛಂದವಾಗಿ ಮೋಕ್ಷಸುಖದಲ್ಲಿ ವಿಹರಿಸುತ್ತಿರೋಣ.

೩೪. ನನ್ನ ಅನುಗ್ರಹದಿಂದ ಯಾವಾಗಲೂ ಆ ಪುರುಷನೇ ಎಲ್ಲವನ್ನೂ ಸೃಷ್ಟಿಸಲಿ. ಅವನೇ ಎಲ್ಲವನ್ನೂ ಪಾಲಿಸಲಿ. ಕೊನೆಗೆ ಎಲ್ಲವನ್ನೂ ಆತನೇ ಉಪಸಂಹರಿಸಲಿ.

**ಚೇತಸ್ಸಮುದ್ರಮಾಕುಂಚ್ಯ ಚಿಂತಾಕಲ್ಲೋಲಲೋಲಿತಂ ।**
**ಸತ್ತ್ವರತ್ನಂ ತಮೋಗ್ರಾಹಂ ರಜೋವಿದ್ರುಮವಲ್ಲಿತಂ ॥ ३४ ॥**

**ಯಸ್ಯ ಪ್ರಸಾದಾತ್ತಿಷ್ಠಾವಃ ಸುಖಮಾನಂದಕಾನನೇ ।**
**ಪರಿಕ್ಷಿಪ್ತಮನೋವೃತ್ತೌ ಬಹಿಶ್ಚಿಂತಾತುರೇ ಸುಖಂ ॥ ३५ ॥**

**ಸಂಪ್ರಧಾರ್ಯೇತಿ ಸ ವಿಭುಸ್ತಯಾ ಶಕ್ತ್ಯಾ ಪರೇಶ್ವರಃ ।**
**ಸವ್ಯೇ ವ್ಯಾಪರಯಾಂಚಕ್ರೇ ದಶಮೇಽಂಗೇ ಸುಧಾಸವಂ ॥ ३६ ॥**

**ತತಃ ಪುಮಾನಾವಿರಾಸೀದೇಕಸ್ತ್ರೈಲೋಕ್ಯಸುಂದರಃ ।**
**ಶಾಂತಃ ಸತ್ತ್ವಗುಣೋದ್ರಿಕ್ತೋ ಗಾಂಭೀರ್ಯಾಮಿತಸಾಗರಃ ॥ ३७ ॥**

**ತಥಾ ಚ ಕ್ಷಮಯಾ ಯುಕ್ತೋ ಮುನೇಽಲಬ್ಧೋಪಮೋಽಭವತ್ ।**
**ಇಂದ್ರನೀಲದ್ಯುತಿಃ ಶ್ರೀಮಾನ್ಪುಂಡರೀಕೋತ್ತಮೇಕ್ಷಣಃ ॥ ३८ ॥**

---

३४-३६. ಯಾವ ಪುರುಷನ ಸಹಾಯದಿಂದ, ನಮ್ಮ ಮನಸ್ಸನ್ನು ಆಕರ್ಷಿಸುತ್ತಿರುವ, ಮತ್ತು ಚಿಂತೆ, ರೋಗಗಳಿಂದ ದೂರವಾದ, ಈ ಆನಂದವನದಲ್ಲಿ ಸುಖವಾಗಿ ನಾವಿಬ್ಬರೂ ಇರಬಹುದೋ, ಅಂತಹ ಪುರುಷನೊಬ್ಬನನ್ನು ಸೃಷ್ಟಿಸಬೇಕೆಂಬುದಾಗಿ ನಿಶ್ಚಯಿಸಿ ಯೋಚನೆಗಳೆಂಬ ಅಲೆಗಳಿಂದಲೂ, ಸತ್ವಗುಣವೆಂಬ ರತ್ನಗಳಿಂದಲೂ, ರಜೋಗುಣವೆಂಬ ಬಳ್ಳಿಗಳಿಂದಲೂ, ತಮೋಗುಣವೆಂಬ ಮೊಸಳೆಗಳಿಂದಲೂ ಕೂಡಿರುವ ಮನಸ್ಸೆಂಬ ಸಮುದ್ರವನ್ನು ಕಡೆದು, ಆ ಶಕ್ತಿಯೊಡನೆ ಆಲೋಚಿಸಿ, ಆ ಸರ್ವೇಶ್ವರನಾದ ಪರಮಪುರುಷನು ತನ್ನ ಎಡಪಾರ್ಶ್ವದ ಅವಯವದಲ್ಲಿ ಅಮೃತಪ್ರವಾಹವನ್ನು ಹರಿಸಿದನು.

३७-४०. ಬಳಿಕ ಆ ಪರಮಪುರುಷನ ಎಡಭಾಗದಿಂದ ಮೂರುಲೋಕಗಳಲ್ಲಿಯೂ ಸಾಟಿಯೇ ಇಲ್ಲದ ಸೌಂದರ್ಯದಿಂದ ಒಪ್ಪುವ ಪುರುಷನೊಬ್ಬನು ಆವಿರ್ಭವಿಸಿದನು. ಆತನು ಮಹಾಶಾಂತನಾಗಿದ್ದನು, ಸತ್ವಗುಣವು ಪ್ರಧಾನವಾಗಿ ಆತನಲ್ಲಿ ನೆಲಸಿದ್ದಿತು, ಗಾಂಭೀರ್ಯದ ವಿಷಯದಲ್ಲಿ ಸಾಗರವೂ ಆತನನ್ನು ಹೋಲುತ್ತಿರಲಿಲ್ಲ. ಓ ಮುನೀಂದ್ರ, ಕ್ಷಮೆಯಲ್ಲಿ ಸಹ ಎಲ್ಲಿಯೂ ಆತನಿಗೆ ಹೋಲಿಕೆ ದೊರೆಯುತ್ತಿರಲಿಲ್ಲ, ಆತನ ಶ್ಯಾಮಲವಾದ ಶರೀರಕಾಂತಿಯು ಇಂದ್ರನೀಲಮಣಿಯ ಕಾಂತಿಯನ್ನು ಹೀಯಾಳಿಸುತ್ತಿತ್ತು, ಕಮಲದಂತೆ ಉತ್ತಮವಾದ ನಯನ ಯುಗಳದಿಂದ

ಸುವರ್ಣಕೃತಿಚ್ಛಚ್ಛ್ರೇಷ್ಠದುಕೂಲಯುಗಲಾವೃತಃ ।
ಲಸತ್ಪ್ರಚಂಡದೋರ್ದಂಡಯುಗಲೋಹ್ಯಪರಾಜಿತಃ ॥ ೪೦ ॥

ತತಃ ಸ ಪುರುಷಶ್ಶಂಭುಂ ಪ್ರಣಮ್ಯ ಪರಮೇಶ್ವರಂ ।
ನಾಮಾನಿ ಕುರು ಮೇ ಸ್ವಾಮಿನ್ವದ ಕರ್ಮ ಜಗಾವಿತಿ ॥ ೪೧ ॥

ತಚ್ಛ್ರುತ್ವಾ ವಚನಂ ಪ್ರಾಹ ಶಂಕರಃ ಪ್ರಹಸನ್ಪ್ರಭುಃ ।
ಪುರುಷಂ ತಂ ಮಹೇಶಾನೋ ವಾಚಾ ಮೇಘಗಭೀರಯಾ ॥ ೪೨ ॥

॥ ಶಿವ ಉವಾಚ ॥

ವಿಷ್ಣ್ವಿತಿ ವ್ಯಾಪಕತ್ವಾತ್ತೇ ನಾಮ ಖ್ಯಾತಂ ಭವಿಷ್ಯತಿ ।
ಬಹೂನ್ಯನ್ಯಾನಿ ನಾಮಾನಿ ಭಕ್ತಸೌಖ್ಯಕರಾಣಿ ಹಿ ॥ ೪೩ ॥

ತಪಃ ಕುರು ದೃಢೋ ಭೂತ್ವಾ ಪರಮಂ ಕಾರ್ಯಸಾಧನಂ ।
ಇತ್ಯುಕ್ತ್ವಾ ಶ್ವಾಸಮಾರ್ಗೇಣ ದದೌ ಚ ನಿಗಮಂ ತತಃ ॥ ೪೪ ॥

---

ಆತನು ಒಪ್ಪುತ್ತಿದ್ದನು. ಆತನು ಉಟ್ಟಿದ್ದ ಮತ್ತು ಹೊದ್ದಿದ್ದ, ಉತ್ತಮವಾದ ವಸ್ತ್ರಗಳು, ಚಿನ್ನದವಳಿಗಳ ಕೆಲಸದಿಂದ ಶೋಭಿಸುತ್ತಿದ್ದುವು. ಆತನ ನೀಳವಾದ ತೋಳುಗಳು ಬಹು ಬಲಿಷ್ಠವಾಗಿದ್ದುವು. ಪರಾಜಯದ ಸುಳಿವು ಸಹ ಆತನ ಬಳಿಯಲ್ಲಿ ಸುಳಿಯುತ್ತಿರಲಿಲ್ಲ.

೪೧. ಆಮೇಲೆ ಆ ಪುರುಷನು, ಪರಮೇಶ್ವರನಾದ ಆ ಶಿವನನ್ನು ನಮಸ್ಕರಿಸಿ, ಎಲೈ ಸ್ವಾಮಿಯೇ! ನನ್ನ ಹೆಸರುಗಳೇನು? ನಾನು ಮಾಡತಕ್ಕ ಕೆಲಸವಾವುದು? ಎಂದನು.

೪೨. ಆ ಮಾತನ್ನು ಕೇಳಿ ಪ್ರಭುವಾದ ಆ ಶಂಕರನು ನಸುನಗುತ್ತಾ ಮೇಘಗಂಭೀರಧ್ವನಿಯಿಂದ ಆ ಪುರುಷನನ್ನು ಕುರಿತು ಇಂತೆಂದನು.

೪೩. ನೀನು ಎಲ್ಲಾ ಕಡೆಯಲ್ಲೂ ವ್ಯಾಪಿಸಿಕೊಂಡಿರುವುದರಿಂದ 'ವಿಷ್ಣು' ಎಂಬುದಾಗಿಯೇ ನಿನ್ನ ಹೆಸರು ಪ್ರಸಿದ್ಧವಾಗುವುದಲ್ಲದೆ, ಭಕ್ತರಿಗೆ ಸೌಖ್ಯಗಳನ್ನುಂಟುಮಾಡುವಂಥಾ ಇನ್ನೂ ಅನೇಕ ಹೆಸರುಗಳು ನಿನಗೆ ಉಂಟಾಗುವುವು.

೪೪. ನೀನು ಧೃಢವಾದ ಮನಸ್ಸಿನಿಂದ, ಕೆಲಸಗಳೆಲ್ಲಕ್ಕೂ ಪರಮಸಾಧಕವಾದಂಥ ತಪಸ್ಸನ್ನಾಚರಿಸು, ಎಂದು ಹೇಳಿ ತನ್ನ ಶ್ವಾಸಮಾರ್ಗದಿಂದ ವೇದಗಳನ್ನು ವಿಷ್ಣುವಿಗೆ ಉಪದೇಶವಿತ್ತನು.

ತತೋಽಚ್ಯುತಃ ಶಿವಂ ನತ್ವಾ ಚಕಾರ ವಿಪುಲಂ ತಪಃ ।
ಅಂತರ್ಧಾನಂ ಗತಃ ಶಕ್ತ್ಯಾ ಸಲೋಕಃ ಪರಮೇಶ್ವರಃ ॥ ೪೫ ॥

ದಿವ್ಯಂ ದ್ವಾದಶಸಾಹಸ್ರಂ ವರ್ಷಂ ತಪ್ತ್ವಾಪಿ ಚಾಚ್ಯುತಃ ।
ನ ಪ್ರಾಪ ಸ್ವಾಭಿಲಷಿತಂ ಸರ್ವದಂ ಶಂಭುದರ್ಶನಂ ॥ ೪೬ ॥

ತತಃ ಸಂಶಯಮಾಪನ್ನಶ್ಚಿಂತಿತಂ ಹೃದಿ ಸಾದರಂ ।
ಮಯಾದ್ಯ ಕಿಂ ಪ್ರಕರ್ತವ್ಯಮಿತಿ ವಿಷ್ಣುಃ ಶಿವಂ ಸ್ಮರನ್ ॥ ೪೭ ॥

ಏತಸ್ಮಿನ್ನಂತರೇ ವಾಣೀ ಸಮುತ್ಪನ್ನಾ ಶಿವಾಚ್ಛುಭಾ ।
ತತಃ ಪುನಃ ಪ್ರಕರ್ತವ್ಯಂ ಸಂಶಯಸ್ಯಾಪನುತ್ತಯೇ ॥ ೪೮ ॥

ತತಸ್ತೇನ ಚ ತಚ್ಛ್ರುತ್ವಾ ತಪಸ್ತಪ್ತಂ ಸುದಾರುಣಂ ।
ಬಹುಕಾಲಂ ತದಾ ಬ್ರಹ್ಮಧ್ಯಾನಮಾರ್ಗಪರೇಣ ಹಿ ॥ ೪೯ ॥

---

೪೫. ಬಳಿಕ ವಿಷ್ಣುವು ಈಶ್ವರನನ್ನು ನಮಸ್ಕರಿಸಿ ಬಹು ದೊಡ್ಡ ತಪಸ್ಸನ್ನು ಮಾಡಿದನು. ಜ್ಯೋತಿರ್ಮಯನಾಗಿ ಪ್ರಕಾಶಿಸುತ್ತಿರುವ ಆ ಪರಮೇಶ್ವರನೂ ಸಹ ಶಕ್ತಿಯೊಡನೆ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೪೬. ಹನ್ನೆರಡುಸಹಸ್ರ ದೇವ ವರ್ಷಗಳಕಾಲ ತಪಸ್ಸನ್ನು ಮಾಡಿದರೂ ಆ ವಿಷ್ಣುವು, ತನಗೆ ಅಪೇಕ್ಷಿತವಾದ ಎಲ್ಲ ಇಷ್ಟಾರ್ಥಗಳನ್ನೂ ಕೊಡುವ ಶಿವನ ದರ್ಶನವನ್ನು ಪಡೆಯಲಿಲ್ಲ.

೪೭. ಆಮೇಲೆ ವಿಷ್ಣುವು ಮನಸ್ಸಿನಲ್ಲಿ ಸಂಶಯವನ್ನೂ ಚಿಂತೆಯನ್ನೂ ಹೊಂದಿ, ಶಿವನನ್ನು ನೆನೆಯುತ್ತಾ ನಾನೀಗ ಏನುಮಾಡಬೇಕು ಎಂದು ಯೋಚಿಸುತ್ತಿದ್ದನು.

೪೮. ಇಷ್ಟರಲ್ಲಿಯೇ, 'ಈ ಸಂಶಯನಿವಾರಣೆಗಾಗಿ ಮರಳಿ ತಪಸ್ಸನ್ನಾಚರಿಸಬೇಕು' ಎಂಬ ಶುಭಕರವಾದ ಮಾತು ಶಿವನಿಂದ (ಇಚ್ಛೆಯಿಂದ) ಕೇಳಿಸಿತು.

೪೯. ಬಳಿಕ ಆ ಮಾತನ್ನು ಕೇಳಿ ವಿಷ್ಣುವು, ಪರಬ್ರಹ್ಮಮೂರ್ತಿಯಲ್ಲೇ ನಟ್ಟ ಮನಸ್ಸುಳ್ಳವನಾಗಿ ಆತನನ್ನು ಧ್ಯಾನಿಸುತ್ತಾ ಬಹಳಕಾಲ ಘೋರವಾದ ತಪಸ್ಸನ್ನು ಆಚರಿಸಿದನು.

**ತತಃ ಸ ಪುರುಷೋ ವಿಷ್ಣುಃ ಪ್ರಬುದ್ಧೋ ಧ್ಯಾನಮಾರ್ಗತಃ ।**
**ಸುಪ್ರೀತೋ ವಿಸ್ಮಯಂ ಪ್ರಾಪ್ತಃ ಕಿಂ ಯತ್ತತ್ತ್ವಮಹೋ ಇತಿ ॥ ೫೦ ॥**

**ಪರಿಶ್ರಮುವತಸ್ತಸ್ಯ ವಿಷ್ಣೋಃ ಸ್ವಾಂಗೇಭ್ಯ ಏವ ಚ ।**
**ಜಲಧಾರಾ ಹಿ ಸಂಯಾತಾ ವಿವಿಧಾಶ್ಶಿವಮಾಯಯಾ ॥ ೫೧ ॥**

**ಅಭಿವ್ಯಾಪ್ತಂ ಚ ಸಕಲಂ ಶೂನ್ಯಂ ಯತ್ತನ್ಮಹಾಮುನೇ ।**
**ಬ್ರಹ್ಮರೂಪಂ ಜಲಮಭೂತ್ಸ್ಪರ್ಶನಾತ್ಪಾಪನಾಶನಂ ॥ ೫೨ ॥**

**ತದಾ ಶ್ರಾಂತಶ್ಚ ಪುರುಷೋ ವಿಷ್ಣುಸ್ತಸ್ಮಿನ್ಜಲೇ ಸ್ವಯಂ ।**
**ಸುಷ್ವಾಪ ಪರಮಪ್ರೀತೋ ಬಹುಕಾಲಂ ವಿಮೋಹಿತಃ ॥ ೫೩ ॥**

**ನಾರಾಯಣೇತಿ ನಾಮಾಪಿ ತಸ್ಯಾಸೀಚ್ಛ್ರುತಿಸಂಮತಂ ।**
**ನಾನ್ಯತ್ಕಿಂಚಿತ್ತದಾ ಹ್ಯಾಸೀತ್ಪ್ರಾಕೃತಂ ಪುರುಷಂ ವಿನಾ ॥ ೫೪ ॥**

---

೫೦. ಆಮೇಲೆ, ಶಿವನಿಂದ ಸೃಷ್ಟಿಸಲ್ಪಟ್ಟ ಪುರುಷನಾದ ವಿಷ್ಣುವು, ಧ್ಯಾನದಿಂದ ಎಚ್ಚೆತ್ತು ಪ್ರಸನ್ನವಾದ ಮನಸ್ಸಿನಿಂದ, ಅಬ್ಬಾ ! ಆ ತತ್ವವೆಂತಹುದು, ಎಂದು ವಿಸ್ಮಯವನ್ನು ಹೊಂದಿದನು.

೫೧. ಹೀಗೆ ಬಹುಕಾಲ ತಪಸ್ಸುಮಾಡಿ ಬಳಲಿ ಬೆಂಡಾಗಿಹೋದ ಆ ವಿಷ್ಣುವಿನ ಅವಯುವಗಳಿಂದ, ಬಹುವಿಧವಾಗಿ ನೀರು ಧಾರಾಕಾರವಾಗಿ ಶಿವನ ಮಾಯೆಯಿಂದ ಹರಿಯತೊಡಗಿತು.

೫೨ ಓ ಮಹರ್ಷಿ, ಆ ನೀರಿನಿಂದ ಬಯಲುಬಯಲಾಗಿದ್ದ ಆ ಎಲ್ಲ ಪ್ರದೇಶವೂ ವ್ಯಾಪಿಸಲ್ಪಟ್ಟಿತು. ಮುಟ್ಟಿದೊಡನೆಯೇ ಪಾಪಗಳೆಲ್ಲವನ್ನೂ ಸಂಹರಿಸುವಂತಹ ಆ ನೀರು ಬ್ರಹ್ಮರೂಪವೆನಿಸಿತು.

೫೩. ಆಗ ವಿಷ್ಣುವೆಂದು ಹೆಸರುಳ್ಳ ಆ ಪುರುಷನು ಬಹು ಬಳಲಿದವನಾಗಿ ಆ ನೀರಿನ ಮೇಲೆಯೇ, ಬಹಳಕಾಲ ಮಾಯೆಯಿಂದ ವ್ಯಾಮರೆತು ಅಲ್ಲಿಯೇ ಮಲಗಿಬಿಟ್ಟನು.

೫೪. ಆಗಲೇ ಆತನಿಗೆ, ವೇದಪ್ರತಿವಾದಿತವಾದ ನಾರಾಯಣನೆಂಬ ಹೆಸರು ಉಂಟಾಯಿತು. (ನರನಿಂದ ಅಂದರೆ ಪುರುಷನಿಂದ ಹುಟ್ಟಿದ ನೀರು, ನಾರವೆನಿಸಿತು.

ಏತಸ್ಮಿನ್ನಂತರೇ ಕಾಲೇ ತತ್ತ್ವಾನ್ಯಾಸನ್ಮಹಾತ್ಮನಃ ।
ತತ್ಪ್ರಕಾರಂ ಶೃಣು ಪ್ರಾಜ್ಞ ಗದತೋ ಮೇ ಮಹಾಮತೇ ॥ ೫೫ ॥

ಪ್ರಕೃತೇಶ್ಚ ಮಹಾನಾಸೀನ್ಮಹತಶ್ಚ ಗುಣಾಸ್ತ್ರಯಃ ।
ಅಹಂಕಾರಸ್ತತೋ ಜಾತಸ್ತ್ರಿವಿಧೋ ಗುಣಭೇದತಃ ॥ ೫೬ ॥

ತನ್ಮಾತ್ರಾಶ್ಚ ತತೋ ಜಾತಾಃ ಪಂಚ ಭೂತಾನಿ ವೈ ತತಃ ।
ತದೈವ ತಾನೀಂದ್ರಿಯಾಣಿ ಜ್ಞಾನಕರ್ಮಮಯಾನಿ ಚ ॥ ೫೭ ॥

ತತ್ತ್ವಾನಾಮಿತಿ ಸಂಖ್ಯಾನಮುಕ್ತಂ ತೇ ಋಷಿಸತ್ತಮ ।
ಜಡಾತ್ಮಕಂ ಚ ತತ್ಸರ್ವಂ ಪ್ರಕೃತೇಃ ಪುರುಷಂ ವಿನಾ ॥ ೫೮ ॥

---

ಆ ನಾರವೇ ಅಯನವಾಗಿ ಎಂದರೆ ಮಾರ್ಗವಾಗಿ ಉಳ್ಳವನು ನಾರಾಯಣ.) ಹೀಗೆ ಶಿವನ ಶಕ್ತಿಯಿಂದ ಹುಟ್ಟಿದ ನಾರಾಯಣನು ಹೊರತು ಮತ್ತಾವುದೂ ಆಗ ಇರಲಿಲ್ಲ.

೫೫. ವಿಶಾಲವಾದ ಬುದ್ಧಿಯುಳ್ಳ ಓ ನಾರದ, ಈನಡುವೆ, ಮಹಾತ್ಮನಾದ ಆ ಪ್ರಾಕೃತಪುರುಷನ ದೆಸೆಯಿಂದ ಇಪ್ಪತ್ತನಾಲ್ಕು ತತ್ತ್ವಗಳು ಹುಟ್ಟಿದುವು ಅದರ ಕ್ರಮವನ್ನು ವಿವರಿಸುವೆನು ಕೇಳು.

೫೬. ಪ್ರಕೃತಿಯಿಂದ ಮಹತ್ತೆಂಬುದು ಹುಟ್ಟಿತು. ಆ ಮಹತ್ತಿನಿಂದ ಸತ್ವ, ರಜಸ್ಸು, ತಮಸ್ಸುಗಳೆಂಬ ಗುಣಗಳು ಹುಟ್ಟಿದುವು. ಆ ಗುಣತ್ರಯದಿಂದ, ಕ್ರಮವಾಗಿ, ಸಾತ್ವಿಕಾಹಂಕಾರ, ರಾಜಸಾಹಂಕಾರ, ತಾಮಸಾಹಂಕಾರವೆಂದು ಮೂರು ಬಗೆಯಾದ ಅಹಂಕಾರಗಳು ಹುಟ್ಟಿದವು.

೫೭. ಆ ಅಹಂಕಾರದಿಂದ, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ತನ್ಮಾತ್ರಗಳೂ, ಅವುಗಳಿಂದ, ಆಕಾಶ, ವಾಯು, ತೇಜಸ್ಸು, ಜಲ, ಭೂಮಿ, ಎಂಬ ಪಂಚಭೂತಗಳೂ ಹುಟ್ಟಿದುವು. ಆಗಲೇ, ಪಾಂಚಭೌತಿಕಗಳಾದ ಶ್ರೋತ್ರ, ತ್ವಕ್, ಚಕ್ಷುಸ್ಸು, ಜಿಹ್ವಾ, ಘ್ರಾಣಗಳೆಂಬ ಐದು ಜ್ಞಾನೇಂದ್ರಿಯಗಳು ಹುಟ್ಟಿದುವು.

೫೮. ಎಲೈ ಋಷಿವರ್ಯನೇ, ಈ ರೀತಿಯಾಗಿ ತತ್ವಗಳಾವುವೆಂಬುದನ್ನು ತಿಳಿಸಿಯಾಯಿತು. ಪುರುಷನೊಬ್ಬನನ್ನು ಹೊರತು, ಪ್ರಕೃತಿಯು ಮೊದಲುಗೊಂಡು, ಉಳಿದುದೆಲ್ಲವೂ, ಜಡವೆಂದು ತಿಳಿ.

ತ್ರದೈಕೀಕೃತಂ ತತ್ತ್ವಂ ಚತುರ್ವಿಂಶತಿಸಂಖ್ಯಕಂ ।
ವೇಚ್ಛಯಾ ಗೃಹೀತ್ವಾ ಸ ಸುಷ್ವಾಪ ಬ್ರಹ್ಮರೂಪಕೇ ॥ ೫೯ ॥

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ವಿಷ್ಣೂತ್ಪತ್ತಿವರ್ಣನೋ
ನಾಮ ಷಷ್ಠೋಽಧ್ಯಾಯಃ**



೫೯. ಪ್ರಕೃತಿ, ಮಹತ್ತು, ಗುಣಗಳು, ಅಹಂಕಾರ, ತನ್ಮಾತ್ರಗಳೈದು, ಪಂಚ ೂತಗಳೈದು, ಜ್ಞಾನೇಂದ್ರಯಗಳೈದು, ಕರ್ಮೇಂದ್ರಿಯಗಳೈದು ಇವೆಲ್ಲ ಒಟ್ಟು ೇರಿ ಇಪ್ಪತ್ತನಾಲ್ಕು ತತ್ತ್ವಗಳು. ಶಿವನ ಇಚ್ಛೆಯಿಂದ ಆ ನಾರಾಯಣನು ಇವೆಲ್ಲ ನ್ನೂ ತೆಗೆದುಕೊಂಡು ಬ್ರಹ್ಮರೂಪವಾದ ಆ ನೀರಿನ ಮೇಲೆ ಮಲಗಿದ್ದನು.

ಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲ
ನೆಯ ಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ವಿಷ್ಣುವಿನ ಉತ್ಪತ್ತಿ
ವರ್ಣನವೆಂಬ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಸೃಷ್ಟಿಖಂಡೇ
## ಸಪ್ತಮೋಽಧ್ಯಾಯಃ

॥ ಬ್ರಹ್ಮೋವಾಚ ॥

**ಸುಪ್ತೇ ನಾರಾಯಣೇ ದೇವೇ ನಾಭೌ ಪಂಕಜಮುತ್ತಮಂ ।**
**ಆವಿರ್ಬಭೂವ ಸಹಸಾ ಬೃಹದ್ವೈ ಶಂಕರೇಚ್ಛಯಾ ॥ ೧ ॥**

**ಅನಂತಯಷ್ಟಿಕಾಯುಕ್ತಂ ಕರ್ಣಿಕಾರಸಮಪ್ರಭಂ ।**
**ಅನಂತಯೋಜನಾಯಾಮಮನಂತೋಚ್ಛ್ರಾಯಸಂಯುತಂ ॥ ೨ ॥**

---

## ಏಳನೆಯ ಅಧ್ಯಾಯವು

೧. ಹೀಗೆ ಆ ನಾರಾಯಣನು ಮಲಗಿಬಿಟ್ಟಮೇಲೆ. ಶಿವನ ಇಚ್ಛೆಯಿಂದ, ಇದ್ದಕ್ಕಿದ್ದಂತೆಯೇ, ಆ ನಾರಾಯಣನ ನಾಭಿಯ ದೆಸೆಯಿಂದ ಬಹು ದೊಡ್ಡದಾದ ಮತ್ತು ಶ್ರೇಷ್ಠವಾದ ಕಮಲವೊಂದು ಹೊರಹೊರಟಿತು.

೨-೩. ಅದಕ್ಕೆ ನಾನಾ ಎಸಳುಗಳು ಇದ್ದವು. ಅದರ ಬಣ್ಣವು ಕರ್ಣಿಕಾರ (ಬೆಟ್ಟತಾವರೆ) ಪುಷ್ಪದಂತೆ ಇದ್ದಿತು, ಅದು ಅನೇಕ ಯೋಜನಗಳಷ್ಟು ಅಗಲವಾಗಿದ್ದಿತು. ಅಲ್ಲದೆ, ಅನೇಕ ಯೋಜನಗಳಷ್ಟು ಎತ್ತರವಾಗಿತ್ತು, ಅದರ ಪ್ರಭೆಯು ಕೋಟಿಸೂರ್ಯರಿಗೆ ಸರಿಸಮವಾಗಿತ್ತು. ಅದು ಬಹು ಸುಂದರವಾಗಿಯೂ, ಅತಿ

ಕೋಟಿಸೂರ್ಯಪ್ರತೀಕಾಶಂ ಸುಂದರಂ ತತ್ತ್ವಸಂಯುತಂ ।
ಅತ್ಯದ್ಭುತಂ ಮಹಾರಮ್ಯಂ ದರ್ಶನೀಯಮನುತ್ತಮಂ ॥ ೩ ॥

ಕೃತ್ವಾ ಯತ್ನಂ ಪೂರ್ವವತ್ಸ ಶಂಕರಃ ಪರಮೇಶ್ವರಃ ।
ದಕ್ಷಿಣಾಂಗಾನ್ನಿಜಾನ್ಮಾಂ ವೈ ಸಾಂಬಶ್ಶಂಭುರಜೀಜನತ್ ॥ ೪ ॥

ಸ ಮಾಯಾಮೋಹಿತಂ ಕೃತ್ವಾ ಮಾಂ ಮಹೇಶೋ ದ್ರುತಂ ಮುನೇ ।
ತನ್ನಾಭಿಪಂಕಜಾದಾವಿರ್ಭಾವಯಾಮಾಸ ಲೀಲಯಾ ॥ ೫ ॥

ಏವಂ ಪದ್ಮಾತ್ತತೋ ಜಜ್ಞೇ ಪುತ್ರೋಽಹಂ ಹೇಮಗರ್ಭಕಃ ।
ಚತುರ್ಮುಖೋ ರಕ್ತವರ್ಣಸ್ತ್ರಿಪುಂಡ್ರಾಂಕಿತಮಸ್ತಕಃ ॥ ೬ ॥

ತನ್ಮಾಯಾಮೋಹಿತಶ್ಚಾಹಂ ನಾವಿದಂ ಕಮಲಂ ವಿನಾ ।
ಸ್ವದೇಹಜನಕಂ ತಾತ ಪಿತರಂ ಜ್ಞಾನದುರ್ಬಲಃ ॥ ೭ ॥

---

ರಮಣೀಯವಾಗಿಯೂ, ಮಹಾದ್ಭುತವಾಗಿಯೂ, ಪುನಃ ಪುನಃ ನೋಡಬೇಕು ಎಂದೆನಿಸುವಂತೆಯೂ ಅತ್ಯುತ್ತಮವಾಗಿ ಶೋಭಿಸುತ್ತಿತ್ತು.

೪. ಜಗಜ್ಜನನಿಯೊಡಗೂಡಿದ ಪರಮಪುರುಷನಾದ ಆ ಶಂಕರನು ಮೊದಲಿನಂತೆಯೇ, ಪ್ರಯತ್ನವನ್ನು ಮಾಡಿ ತನ್ನ ಶರೀರದ ಬಲಭಾಗದಿಂದ ನನ್ನನ್ನು (ಬ್ರಹ್ಮ) ಸೃಷ್ಟಿಸಿದನು.

೫. ಓ ಮುನೀಂದ್ರ, ಕೇಳು, ಆ ಮಹೇಶ್ವರನು ನನ್ನನ್ನು ಮಾಯೆಯಿಂದ ಮೋಹಿತನನ್ನಾಗಿ ಮಾಡಿ, ಒಡನೆಯೇ, ಲೀಲಾಮಾತ್ರದಿಂದ ಆ ವಿಷ್ಣುವಿನ ನಾಭಿಕಮಲದಿಂದ ಹೊರಗೆ ಬರುವಂತೆ ಮಾಡಿದನು.

೬. ಈರೀತಿಯಾಗಿ ನಾನು ಹುಟ್ಟುವಾಗಲೇ, ಹಿರಣ್ಯಗರ್ಭನೂ, ನಾಲ್ಕು ಮುಖಗಳುಳ್ಳವನೂ, ಕೆಂಪುಬಣ್ಣವುಳ್ಳವನೂ, ಮೂರು ಪಟ್ಟೆ ವಿಭೂತಿಯಿಂದ ಭೂಷಿತವಾದ ಲಲಾಟಪ್ರದೇಶವುಳ್ಳವನೂ ಆಗಿ ಆ ಶಿವನ ಪುತ್ರನಾದ ನಾನು ಕಮಲದಿಂದ ಈಚೆಗೆ ಬಂದೆನು.

೭. ಓ ವತ್ಸ, ನಾನು ಆತನ ಮಾಯೆಯಿಂದ ಮೋಹಿತನಾಗಿ, ಜ್ಞಾನವಿಲ್ಲದೆ ಕಮಲವನ್ನು ಹೊರತು, ನನ್ನೀದೇಹಕ್ಕೆ ಕಾರಣಭೂತನಾದ ಆ ಜನಕನನ್ನು ಯಾರೆಂದು ಅರಿಯಲಿಲ್ಲ.

ಕೋऽಹಂ ವಾ ಕುತ ಆಯಾತಃ ಕಿಂ ಕಾರ್ಯಂ ತು ಮದೀಯಕಂ ।
ಕಸ್ಯ ಪುತ್ರೋऽಹಮುತ್ಪನ್ನಃ ಕೇನೈವ ನಿರ್ಮಿತೋऽಧುನಾ ॥ ೮ ॥

ಇತಿ ಸಂಶಯಮಾಪನ್ನಂ ಬುದ್ಧಿಮಾರ್ಗಂ ಸಮುಪದ್ಯತ ।
ಕಿಮರ್ಥಂ ಮೋಹಮಾಯಾಮಿ ತಜ್ಜ್ಞಾನಂ ಸುಕರಂ ಖಲು ॥ ೯ ॥

ಏತತ್ಕಮಲಪುಷ್ಪಸ್ಯ ಪತ್ರಾರೋಹಸ್ಥಲಂ ಹ್ಯಧಃ ।
ಮತ್ಕರ್ತಾ ಚ ಸ ವೈ ತತ್ರ ಭವಿಷ್ಯತಿ ನ ಸಂಶಯಃ ॥ ೧೦ ॥

ಇತಿ ಬುದ್ಧಿಂ ಸಮಾಸ್ಥಾಯ ಕಮಲಾದವರೋಹಯಂ ।
ನಾಲೇ ನಾಲೇ ಗತಸ್ತತ್ರ ವರ್ಷಾಣಾಂ ಶತಕಂ ಮುನೇ ॥ ೧೧ ॥

ನ ಲಬ್ಧಂ ತು ಮಯಾ ತತ್ರ ಕಮಲಸ್ಥಾನಮುತ್ತಮಂ ।
ಸಂಶಯಂ ಚ ಪುನಃ ಪ್ರಾಪ್ತಃ ಕಮಲೇ ಗಂತುಮುತ್ಸುಕಃ ॥ ೧೨ ॥

---

೮. ನಾನು ಯಾರು? ಎಲ್ಲಿಂದ ಬಂದೆ? ನನ್ನ ಕೆಲಸವಾದರೂ ಏನು? ನಾನು ಯಾರಿಗೆ ಮಗನಾಗಿ ಹುಟ್ಟಿದೆ? ನಾನೀಗ ಏತಕ್ಕೋಸ್ಕರ ನಿರ್ಮಿಸಲ್ಪಟ್ಟೆ?

೯. ಈರೀತಿ ಸಂಶಯದಿಂದ ತೊಳಲುತ್ತಿದ್ದ ನನಗೆ ಇದ್ದಕ್ಕಿದಂತೆಯೇ ಹೀಗೆ ಬುದ್ಧಿಯುಂಟಾಯಿತು. ನನಗೇಕೆ ಈರೀತಿ ಮಂಕುಕವಿಯಿತು? ಆದುದರಿಂದ ಜ್ಞಾನವನ್ನು ಸಂಪಾದಿಸುವುದೇ ಒಳ್ಳೆಯದಲ್ಲವೇ?

೧೦. ಈ ತಾವರೇ ಹೂವಿನ ಕೆಳಗಡೆ, ಎಂದರೆ, ಎಲೆಗಳು ಬೆಳೆದಿರುವ ಸ್ಥಳದಲ್ಲಿ ನನ್ನ ಜನಕನು ಇದ್ದೇ ಇರಬೇಕು, ಸಂಶಯವಿಲ್ಲ.

೧೧. ಓ ನಾರದ, ಹೀಗೆ ಬುದ್ಧಿಯುಂಟಾದ ಮೇಲೆ ಕಮಲದಿಂದ ಕೆಳಗಿಳಿದೆನು. ನೂರು ವರ್ಷಗಳವರೆಗೂ ಅದರ ಪ್ರತಿಯೊಂದು ನಾಳದಲ್ಲಿಯೂ ಸುತ್ತಾಡಿದೆನು.

೧೨. ಆದರೇನು, ನಾನು ಕಮಲದ ಬುಡವನ್ನು ಕಂಡುಹಿಡಿಯಲಾಗಲಿಲ್ಲ. ಪುನಃ ನನ್ನನ್ನು ಸಂಶಯವಾವರಿಸಿತು. ಆಮೇಲೆ ಕಮಲದ ಮೇಲಿನ ಕೊನೆಯನ್ನು ಕಾಣಬೇಕೆಂದು ಇಚ್ಛೆಯುಂಟಾಯಿತು.

ಆರುರೋಹಾಥ ಕಮಲಂ ನಾಲಮಾರ್ಗೇಣ ವೈ ಮುನೇ ।
ಕುಡ್ಮಲಂ ಕಮಲಸ್ಯಾಥ ಲಬ್ಧವಾನ್ನ ವಿಮೋಹಿತಃ ॥ ೧೩ ॥

ನಾಲಮಾರ್ಗೇಣ ಭ್ರಮತೋ ಗತಂ ವರ್ಷಶತಂ ಪುನಃ ।
ಕ್ಷಣಮಾತ್ರಂ ತದಾ ತತ್ರ ತತಸ್ತಿಷ್ಠನ್ವಿಮೋಹಿತಃ ॥ ೧೪ ॥

ತದಾ ವಾಣೀ ಸಮುತ್ಪನ್ನಾ ತಪೇತಿ ಪರಮಾ ಶುಭಾ ।
ಶಿವೇಚ್ಛಯಾಪರಾ ವ್ಯೋಮ್ನೋ ಮೋಹವಿಧ್ವಂಸಿನೀ ಮುನೇ ॥ ೧೫ ॥

ತಚ್ಛ್ರುತ್ವಾ ವ್ಯೋಮವಚನಂ ದ್ವಾದಶಾಬ್ದಂ ಪ್ರಯತ್ನತಃ ।
ಪುನಸ್ತಪ್ತಂ ತಪೋ ಘೋರಂ ದ್ರಷ್ಟುಂ ಸ್ವಜನಕಂ ತದಾ ॥ ೧೬ ॥

ತದಾ ಹಿ ಭಗವಾನ್ವಿಷ್ಣುಶ್ಚತುರ್ಬಾಹುಸ್ಸುಲೋಚನಃ ।
ಮಯ್ಯೇವಾನುಗ್ರಹಂ ಕರ್ತುಂ ದ್ರುತಮಾವಿರ್ಬಭೂವ ಹ ॥ ೧೭ ॥

---

೧೩. ಓ ಮಹರ್ಷಿ, ಬಳಿಕ ಆ ಕಮಲದ ದಂಟಿನ ಮಾರ್ಗವಾಗಿ ಮೇಲೇರ ತೊಡಗಿದೆನು. ಮಾಯಾಮೋಹಿತನಾದ ನಾನು ಆ ಕಮಲದ ಮೊಗ್ಗನ್ನೂ ಹೊಂದ ಲಾಗಲಿಲ್ಲ.

೧೪. ಮತ್ತೆ ಈರೀತಿಯಾಗಿ ಆ ನಾಲಮಾರ್ಗದಲ್ಲಿ ಸುತ್ತುತ್ತಿರುವಂತೆಯೇ ನೂರು ವರ್ಷಗಳು ಕಳೆದುಹೋದವು. ಆಗ ನಾನು ಒಂದು ಕ್ಷಣಕಾಲ ಅಲ್ಲಿಯೇ ಮಂಕುಹಿಡಿದವನಂತೆ ನಿಂತುಬಿಟ್ಟೆನು.

೧೫. ಎಲೈ ಮುನಿಯೇ, ಆಗ ಶಿವನ ಇಚ್ಛೆಯಿಂದ, ಮೋಹವನ್ನು ಧ್ವಂಸ ಗೊಳಿಸುವಂಥ ಪರಮಶುಭಕರವಾದ, ಶ್ರೇಷ್ಠವಾದ, 'ತಪ' ಎಂದರೆ ತಪಸ್ಸನ್ನು ಮಾಡು ಎಂಬ ಮಾತು ಆಕಾಶದ ಕಡೆಯಿಂದ ಕೇಳಿಬಂದಿತು.

೧೬. ಆಗ ಆ ಆಕಾಶವಾಣಿಯನ್ನು ಕೇಳಿ, ನನ್ನ ಜನಕನನ್ನು ಕಾಣಬೇಕೆಂಬ ಹಿರಿಯಾಸೆಯಿಂದ ಮತ್ತೆ ಹನ್ನೆರಡು ವರ್ಷಗಳಕಾಲ ಘೋರವಾದ ತಪಸ್ಸನ್ನಾ ಚರಿಸಿದೆನು.

೧೭. ಆಗ ನನ್ನಲ್ಲಿ ಕೃಪೆಮಾಡಲು, ನಾಲ್ಕು ತೋಳುಗಳಿಂದಲೂ, ಒಳ್ಳೆಯ ಕಣ್ಣುಗಳಿಂದಲೂ ಒಪ್ಪುತ್ತಿರುವ ಭಗವಂತನಾದ ನಾರಾಯಣನು ಬೇಗನೆ ಆವಿರ್ಭವಿ ಸಿದನು.

**ಶಂಖಚಕ್ರಾಯುಧಕರೋ ಗದಾಪದ್ಮಧರಃ ಪರಃ ।**
**ಘನಶ್ಯಾಮಲಸರ್ವಾಂಗಃ ಪೀತಾಂಬರಧರಃ ಪರಃ ॥ ೧೮ ॥**

**ಮುಕುಟಾದಿಮಹಾಭೂಷಃ ಪ್ರಸನ್ನಮುಖಪಂಕಜಃ ।**
**ಕೋಟಿಕಂದರ್ಪಸಂಕಾಶಸ್ಸಂದೃಷ್ಟೋ ಮೋಹಿತೇನ ಸಃ ॥ ೧೯ ॥**

**ತದ್ದೃಷ್ಟ್ವಾ ಸುಂದರಂ ರೂಪಂ ವಿಸ್ಮಯಂ ಪರಮಂ ಗತಃ ।**
**ಕಾಲಾಭಂ ಕಾಂಚನಾಭಂ ಚ ಸರ್ವಾತ್ಮಾನಂ ಚತುರ್ಭುಜಂ ॥ ೨೦ ॥**

**ತಥಾಭೂತಮಹಂ ದೃಷ್ಟ್ವಾ ಸದಸನ್ಮಯಮಾತ್ಮನಾ ।**
**ನಾರಾಯಣಂ ಮಹಾಬಾಹುಂ ಹರ್ಷಿತೋ ಹ್ಯಭವಂ ತದಾ ॥ ೨೧ ॥**

**ಮಾಯಯಾ ಮೋಹಿತಶ್ಶಂಭೋಸ್ತದಾ ಲೀಲಾತ್ಮನಃ ಪ್ರಭೋಃ ।**
**ಅವಿಜ್ಞಾಯ ಸ್ವಜನಕಂ ತಮವೋಚಂ ಪ್ರಹರ್ಷಿತಃ ॥ ೨೨ ॥**

---

೧೮-೧೯. ಆತನು ತನ್ನ ನಾಲ್ಕು ಕೈಗಳಲ್ಲೂ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ್ದನು. ನೀರುತುಂಬಿದ ಮೇಘದಂತೆ ಆತನ ಶರೀರಕಾಂತಿಯು ಶ್ಯಾಮಲವಾಗಿತ್ತು. ಹೊಂಬಣ್ಣದ ಪಟ್ಟೆಮಡಿಯನ್ನುಟ್ಟಿದ್ದನು. ಕಿರೀಟವೇ ಮೊದಲಾದ ಆಭರಣಗಳಿಂದ ಆತನು ಅಲಂಕೃತನಾಗಿದ್ದನು. ನಗುತ್ತಿರುವ ಆತನ ಮುಖವು ಕಮಲವನ್ನು ಹೋಲುತ್ತಿತ್ತು. ಸೌಂದರ್ಯದಲ್ಲಿ, ಕೋಟಿ ಮನ್ಮಥರು ಒಟ್ಟಿಗೆ ಬಂದು ನಿಂತರೂ ಆತನನ್ನು ಸರಿಗಟ್ಟಲಾರರು. ಅಂತಹ ವೈಭವದಿಂದ ಮೆರೆಯುತ್ತಿದ್ದ ಆ ನಾರಾಯಣನನ್ನು ಶಿವಮಾಯಾಮೋಹಿತನಾದ ನಾನು ಕಂಡೆನು.

೨೦-೨೧. ಆ ಸುಂದರವಾದ ರೂಪವನ್ನು ಕಂಡೊಡನೆ ನಾನು ಬಹಳ ಆಶ್ಚರ್ಯಪಟ್ಟೆನು. ನೀಲವಾದ ಕಾಂತಿಯುಳ್ಳ ಮತ್ತು ಚಿನ್ನದಂತೆ ಹೊಳೆಯುತ್ತಿದ್ದ ಆ ಸರ್ವಾತ್ಮಕನೂ, ನಾಲ್ಕು ತೋಳುಗಳುಳ್ಳವನೂ, ಸತ್ತಾಗಿಯೂ, ಅಸತ್ತಾಗಿಯೂ ಇರುವ ರೂಪವುಳ್ಳಂಥ ಮಹಾಬಾಹುವಾದ ಶ್ರೀಮನ್ನಾರಾಯಣನನ್ನು ಕಂಡು ಆಗ ನಾನು ಹರ್ಷವನ್ನು ಹೊಂದಿದೆನು.

೨೨. ಲೀಲಾಮಯನೂ ಪ್ರಭುವೂ ಆದ ಆ ಶಿವನ ಮಾಯೆಯಿಂದ ಮೋಹಿತನಾದ ನಾನು, ನನ್ನ ತಂದೆ ಯಾರೆಂದು ತಿಳಿಯದೆ ಆ ನಾರಾಯಣನನ್ನು ಕುರಿತು ಇಂತೆಂದೆನು.

॥ ಬ್ರಹ್ಮೋವಾಚ ॥

ಕಸ್ತ್ವಂ ವದೇತಿ ಹಸ್ತೇನ ಸಮುತ್ಥಾಪ್ಯ ಸನಾತನಂ ।
ತದಾ ಹಸ್ತಪ್ರಹಾರೇಣ ತೀವ್ರೇಣ ಸುದೃಢೇನ ತು　　॥ ೨೩ ॥

ಪ್ರಬುದ್ಧ್ಯೋತ್ಥಾಯ ಶಯನಾತ್ಸಮಾಸೀನಃ ಕ್ಷಣಂ ವಶೀ ।
ದದರ್ಶ ನಿದ್ರಾವಿಕ್ಲಿನ್ನನೀರಜಾಮಲಲೋಚನಃ　　॥ ೨೪ ॥

ಮಾಮತ್ರ ಸಂಸ್ಥಿತಂ ಭಾಸಾಧ್ಯಾಸಿತೋ ಭಗವಾನ್ಹರಿಃ ।
ಆಹ ಚೋತ್ಥಾಯ ಬ್ರಹ್ಮಾಣಂ ಹಸನ್ಮಾಂ ಮಧುರಂ ಸಕೃತ್　　॥ ೨೫ ॥

॥ ವಿಷ್ಣುರುವಾಚ ॥

ಸ್ವಾಗತಂ ಸ್ವಾಗತಂ ವತ್ಸ ಪಿತಾಮಹ ಮಹಾದ್ಯುತೇ ।
ನಿರ್ಭಯೋ ಭವ ದಾಸ್ಯೇಽಹಂ ಸರ್ವಾನ್ಕಾಮಾನ್ನ ಸಂಶಯಃ　　॥ ೨೬ ॥

ತಸ್ಯ ತದ್ವಚನಂ ಶ್ರುತ್ವಾ ಸ್ಮಿತಪೂರ್ವಂ ಸುರರ್ಷಭಃ ।
ರಜಸಾ ಬದ್ಧವೈರಶ್ಚ ತಮುವೋಚಂ ಜನಾರ್ದನಂ　　॥ ೨೭ ॥

---

೨೩-೨೫. ಆ ಪುರಾಣಪುರುಷನಾದ ಶ್ರೀಹರಿಯನ್ನು ನೀನಾರು, ಹೇಳು ಎಂದು ಕೈಯಿಂದ ತಟ್ಟಿ ಎಬ್ಬಿಸಿದೆನು. ಆಗ ತೀವ್ರವೂ ಸುದೃಢವೂ ಆದ ನನ್ನ ತಿವಿತದಿಂದ ಎಚ್ಚೆತ್ತು, ಹಾಸಿಗೆಯ ಮೇಲೆದ್ದು ಕ್ಷಣಕಾಲ ಕುಳಿತುಕೊಂಡು, ಸೌಮ್ಯವಾದ ಕಾಂತಿಯಿಂದ ಬೆಳಗುತ್ತಿದ್ದ ಆ ಶ್ರೀಹರಿಯು ಅಲ್ಲಿ ನಿಂತಿದ್ದ ನನ್ನನ್ನು ಕಂಡು ಒಂದುಬಾರಿ ನಸುನಕ್ಕು, ಎದ್ದುನಿಂತು ಮಧುರವಾಗಿ ನನ್ನನ್ನು ಕುರಿತಿಂತೆಂದನು.

೨೬. ಓ ವತ್ಸ, ಪಿತಾಮಹ! ಓ ಮಹಾತೇಜಸ್ವಿ ನಿನಗೆ ಸ್ವಾಗತವು. ನಿನಗೆ ಶುಭಾಗಮನವು, ಭಯಪಡಬೇಡ, ನಿನ್ನ ಇಷ್ಟಾರ್ಥಗಳೆಲ್ಲವನ್ನೂ ಕೊಡುವೆನು, ಸಂದೇಹಪಡಬೇಡ ಎಂದನು.

೨೭. ಅವನ ಆ ಮಾತನ್ನು ಕೇಳಿ ದೇವತೆಗಳಿಗೆಲ್ಲಾ ಶ್ರೇಷ್ಠನಾದ ನಾನು, ರಜೋಗುಣದ ಆಧಿಕ್ಯದಿಂದ ಆತನಲ್ಲಿ ದ್ವೇಷವುಳ್ಳವನಾಗಿ ನಗುತ್ತಾ ಆ ಜನಾರ್ದನನಿಗೆ ಹೀಗೆಂದೆನು.

॥ ಬ್ರಹ್ಮೋವಾಚ ॥

ಭಾಷಸೇ ವತ್ಸ ವತ್ಸೇತಿ ಸರ್ವಸಂಹಾರಕಾರಣಂ ।
ಮಾಮಿಹಾತಿಸ್ಮಿತಂ ಕೃತ್ವಾ ಗುರುಶ್ಶಿಷ್ಯಮಿವಾನಘ ॥ ೨೮ ॥

ಕರ್ತಾರಂ ಜಗತಾಂ ಸಾಕ್ಷಾತ್ಪ್ರಕೃತೇಶ್ಚ ಪ್ರವರ್ತಕಂ ।
ಸನಾತನಮಜಂ ವಿಷ್ಣುಂ ವಿರಿಂಚಿಂ ವಿಷ್ಣುಸಂಭವಂ ॥ ೨೯ ॥

ವಿಶ್ವಾತ್ಮಾನಂ ವಿಧಾತಾರಂ ಧಾತಾರಂ ಪಂಕಜೇಕ್ಷಣಂ ।
ಕಿಮರ್ಥಂ ಭಾಷಸೇ ಮೋಹಾದ್ವಕ್ತುಮರ್ಹಸಿ ಸತ್ವರಂ ॥ ೩೦ ॥

ವೇದೋ ಮಾಂ ವಕ್ತಿ ನಿಯಮಾತ್ಸ್ವಯಂಭುವಮಜಂ ವಿಭುಂ ।
ಪಿತಾಮಹಂ ಸ್ವರಾಜಂ ಚ ಪರಮೇಷ್ಠಿನಮುತ್ತಮಂ ॥ ೩೧ ॥

ಇತ್ಯಾಕರ್ಣ್ಯ ಹರಿರ್ವಾಕ್ಯಂ ಮಮ ಕ್ರುದ್ಧೋ ರಮಾಪತಿಃ ।
ಸೋಽಪಿ ಮಾಮಾಹ ಜಾನೇ ತ್ವಾಂ ಕರ್ತಾರಮಿತಿ ಲೋಕತಃ ॥ ೩೨ ॥

೨೮-೩೦. ಓ ಪೂಜ್ಯನೇ, ಇದೇನು? ಎಲ್ಲರನ್ನೂ ಧ್ವಂಸಮಾಡಿಬಿಡುವ ನನ್ನನ್ನು ಅತಿಯಾಗಿ ನಗುತ್ತಾ, ಗುರುವು ಶಿಷ್ಯನನ್ನು ಕರೆವಂತೆ, ವತ್ಸ, ವತ್ಸ, ಎಂದು ಕರೆಯುತ್ತೀಯೆ? ನಿನಗೆ ತಿಳಿಯದೇನು? ಈ ಜಗತ್ತುಗಳನ್ನೆಲ್ಲಾ ನಾನೇ ಸೃಷ್ಟಿಸುವೆನು. ಸಾಕ್ಷಾತ್ತಾಗಿ ಪ್ರಕೃತಿಯನ್ನೂ ಸಹ ಹೀಗೆ ಹೀಗೆ ಮಾಡೆಂದು ನಿಯಮಿಸುವೆನು ನನ್ನನ್ನು ಪುರಾಣಪುರುಷನೆಂದೂ, ಜನ್ಮರಹಿತನೆಂದೂ, ಸರ್ವವ್ಯಾಪಿಯೆಂದೂ, ವಿಷ್ಣುಸಂಭವನೆಂತಲೂ ನೀನರಿಯೆಯಾ? ಕೇವಲ ಮೋಹಕ್ಕೆ ಸಿಲುಕಿದವನಾಗಿ, ಸರ್ವಪ್ರಪಂಚಸ್ವರೂಪನಾಗಿಯೂ, ಎಲ್ಲದಕ್ಕೂ ನಿರ್ಮಾತೃನಾಗಿಯೂ, ಕಮಲದಂತೆ ಕಣ್ಣುಳ್ಳವನೂ, ಧಾತೃವೂ ಆದ ನನ್ನನ್ನು ಹೀಗೆ ಏನೆಂದು ಮಾತನಾಡಿಸುವೆ? ನೀವಿದಕ್ಕೆ ಬೇಗನೆ ಉತ್ತರವನ್ನು ಕೊಡು.

೩೧. ವೇದವೂ ಸಹ ನಿಯಮದಿಂದ ನನ್ನನ್ನು, ಸ್ವಯಂಭು (ತಾನಾಗಿಯೇ ಎಂದರೆ ಬೇರೊಂದು ಕಾರಣವಿಲ್ಲದೆ, ಹುಟ್ಟಿದವನು) ಅಜ, (ಹುಟ್ಟಿಲ್ಲದವನು) ವಿಭು (ಎಲ್ಲೆಡೆಯೂ ಇರತಕ್ಕವನು) ಪಿತಾಮಹ, ಸ್ವರಾಟ್ (ಸ್ವಯಂಪ್ರಕಾಶ) ಪರಮೇಷ್ಠೀ (ಶ್ರೇಷ್ಠವಾದ ಸ್ಥಾನದಲ್ಲಿರುವವನು) ಎಂಬುದಾಗಿ ಹೊಗಳುತ್ತದೆ ಎಂದೆನು.

೩೨. ಹೀಗೆ ನನ್ನ ಮಾತನ್ನು ಕೇಳಿ ಲಕ್ಷ್ಮೀದೇವಿಯ ವಲ್ಲಭನಾದ ಆ ಶ್ರೀಹರಿಯು ಕುಪಿತನಾಗಿ, ನಾನೂ ಜನರ ಮುಖಾಂತರ ನೀನು ಕರ್ತೃವೆಂದು ಕೇಳಿ ಬಲ್ಲೆನು, ಎಂದು ನನ್ನನ್ನು ಕುರಿತು ಹೇಳಿದನು.

॥ ವಿಷ್ಣುರುವಾಚ ॥

**ಕರ್ತುಂ ಧರ್ತುಂ ಭವಾನಂಗಾದವತೀರ್ಣೋ ಮಮಾವ್ಯಯಾತ್ ।**
**ವಿಸ್ಮೃತೋಽಸಿ ಜಗನ್ನಾಥ ನಾರಾಯಣಮನಾಮಯಂ ॥ ೩೩ ॥**

**ಪುರುಷಂ ಪರಮಾತ್ಮಾನಂ ಪುರುಹೂತಂ ಪುರುಷ್ಟುತಂ ।**
**ವಿಷ್ಣುಮಚ್ಯುತಮೀಶಾನಂ ವಿಶ್ವಸ್ಯ ಪ್ರಭವೋದ್ಭವಂ ॥ ೩೪ ॥**

**ನಾರಾಯಣಂ ಮಹಾಬಾಹುಂ ಸರ್ವವ್ಯಾಪಕಮೀಶ್ವರಂ ।**
**ಮನ್ನಾಭಿಪದ್ಮತಸ್ತ್ವಂ ಹಿ ಪ್ರಸೂತೋ ನಾತ್ರ ಸಂಶಯಃ ॥ ೩೫ ॥**

**ತವಾಪರಾಧೋ ನಾಸ್ತ್ಯತ್ರ ತ್ವಯಿ ಮಯಾಕೃತಂ ಮಮ ।**
**ಶೃಣು ಸತ್ಯಂ ಚತುರ್ವಕ್ತ್ರ ಸರ್ವದೇವೇಶ್ವರೋ ಹ್ಯಹಂ ॥ ೩೬ ॥**

**ಕರ್ತಾ ಹರ್ತಾ ಚ ಭರ್ತಾ ಚ ನ ಮಯಾಸ್ತಿ ಸಮೋ ವಿಭುಃ ।**
**ಅಹಮೇವ ಪರಂ ಬ್ರಹ್ಮ ಪರಂ ತತ್ತ್ವಂ ಪಿತಾಮಹ ॥ ೩೭ ॥**

---

೩೩-೩೫. ಓ ಚತುರ್ಮುಖ, ನೀನು ಈ ಜಗತ್ತನ್ನು ಸೃಷ್ಟಿಸಲೂ, ರಕ್ಷಿಸಲೂ, ನಾಶರಹಿತವಾದ ನನ್ನ ಅಂಗದಿಂದ ಹುಟ್ಟಿದೆಯಲ್ಲವೆ? ಜಗತ್ತಿಗೆಲ್ಲಾ ಪ್ರಭುವೂ, ನಿರಾಮಯನೂ ಆದ ನಾರಾಯಣನಾದ ನನ್ನನ್ನು ಮರೆತೆಯೇನು? ನಾನು ಪುರುಷನೂ, ಪರಮಾತ್ಮನೂ, ಎಲ್ಲರಿಗಿಂತಲೂ ಮೊದಲು ಆಹ್ವಾನಿಸಲ್ಪಡುವವನೂ, ಸ್ತುತಿಮಾಡಲ್ಪಡತಕ್ಕವನೂ ಅಲ್ಲವೆ? ವಿಷ್ಣುವೂ, ಅಚ್ಯುತನೂ, ಈಶಾನನೂ, ಈ ಜಗತ್ತು ಹುಟ್ಟಲು ಕಾರಣಭೂತನೂ, ಮಹಾಬಾಹುವೂ, ಸರ್ವವ್ಯಾಪಿಯೂ, ಈಶ್ವರನೂ, ನಾರಾಯಣನಾದ ನಾನಲ್ಲದೆ ಮತ್ತಾರು ಇರುವರು? ನೀನು ಖಂಡಿತವಾಗಿಯೂ ನನ್ನ ನಾಭಿಯಿಂದ ಹೊರಹೊರಟ ಕಮಲದಿಂದ ಹುಟ್ಟಿದವನೇ, ಈ ವಿಷಯದಲ್ಲಿ ಸಂಶಯವಿಲ್ಲ.

೩೬-೩೮. ಓ ಚತುರ್ಮುಖ, ಇಲ್ಲಿ ನಿನ್ನ ತಪ್ಪೇನೂ ಇಲ್ಲ, ಇದೆಲ್ಲವೂ ನನ್ನ ಮಾಯೆಯ ಫಲ, ಸತ್ಯವಾಗಿ ಹೇಳುತ್ತೇನೆ, ಕೇಳು. ನಾನೇ ಎಲ್ಲ ದೇವತೆಗಳಿಗೂ ಒಡೆಯನು. ಕರ್ತೃವೂ ನಾನೇ, ಹರ್ತೃವೂ (ಸಂಹರಿಸುವವನು) ನಾನೇ, ಭರ್ತೃವೂ (ಪೋಷಿಸುವವನು) ನಾನೇ. ನನಗೆ ಸರಿಸಮನಾದ ವಿಭುವು ಯಾವನೂ ಇಲ್ಲ. ಓ ಪಿತಾಮಹ, ನಾನೇ ಪರಬ್ರಹ್ಮ, ಆ ಪರತತ್ವವೂ ನಾನೇ, ಪರಂಜ್ಯೋತಿಯೂ,

**ಅಹಮೇವ ಪರಂ ಜ್ಯೋತಿಃ ಪರಮಾತ್ಮಾ ತ್ವಹಂ ವಿಭುಃ ।**
**ಅದ್ಯ ದೃಷ್ಟಂ ಶ್ರುತಂ ಸರ್ವಂ ಜಗತ್ಯಸ್ಮಿನ್ಚರಾಚರಂ ॥ ೩೮ ॥**

**ತತ್ತ್ವದ್ವಿದ್ಧಿ ಚತುರ್ವಕ್ತ್ರ ಸರ್ವಂ ಮನ್ಮಯಮಿತ್ಯಥ ।**
**ಮಯಾ ಸೃಷ್ಟಂ ಪುರಾವ್ಯಕ್ತಂ ಚತುರ್ವಿಂಶತಿತತ್ತ್ವಕಂ ॥ ೩೯ ॥**

**ನಿತ್ಯಂ ತೇಷ್ವಣವೋ ಬದ್ಧಾಸ್ಸೃಷ್ಟಕ್ರೋಧಭಯಾದಯಃ ।**
**ಪ್ರಭಾವಾಶ್ಚ ಭವಾನಂಗಾನ್ಯನೇಕಾನೀಹ ಲೀಲಯಾ ॥ ೪೦ ॥**

**ಸೃಷ್ಟ್ವಾ ಬುದ್ಧಿರ್ಮಯಾ ತಸ್ಯಾಮಹಂಕಾರಸ್ತ್ರಿಧಾ ತತಃ ।**
**ತನ್ಮಾತ್ರಂ ಪಂಚಕಂ ತಸ್ಮಾನ್ಮನೋ ದೇಹೇಂದ್ರಿಯಾಣಿ ಚ ॥ ೪೧ ॥**

**ಆಕಾಶಾದೀನಿ ಭೂತಾನಿ ಭೌತಿಕಾನಿ ಚ ಲೀಲಯಾ ।**
**ಇತಿ ಬುಧ್ವಾ ಪ್ರಜಾನಾಥ ಶರಣಂ ವ್ರಜ ಮೇ ವಿಧೇ ॥ ೪೨ ॥**

ಪರಮಾತ್ಮನೂ, ನಾನೇ. ಈ ಪ್ರಪಂಚದಲ್ಲಿ ಕಂಡ, ಕೇಳಿದ ಸ್ಥಾವರ ಜಂಗಮಾತ್ಮಕವಾದ ವಸ್ತುವಾವುದುಂಟೋ ಅದೆಲ್ಲವೂ, ನಾನೇ ಎಂಬುದಾಗಿ ತಿಳಿ.

೩೯-೪೨. ಮೊದಲು ನಾನು ಅವ್ಯಕ್ತವನ್ನೂ ಇಪ್ಪತ್ತನಾಲ್ಕು ತತ್ವಗಳನ್ನೂ ಸೃಷ್ಟಿಸಿದೆನು. ಅವುಗಳಲ್ಲಿ, ಕೋಪ, ಹೆದರಿಕೆ ಮೊದಲಾದವುಗಳಿಗೆ ಕಾರಣಗಳಾದ ಅಣುಗಳು ಯಾವಾಗಲೂ ನೆಲಸಿರುವುವು. ಅವುಗಳ ಪ್ರಭಾವದಿಂದಲೇ ನೀನೂ ಇತರ ಅಂಗಗಳೂ ಹುಟ್ಟಿದುವು. ನಾನೇ ಲೀಲೆಯಿಂದ ಬುದ್ಧಿಯನ್ನೂ, ಅದರಲ್ಲಿ, ಮೂರುವಿಧವಾದ ಅಹಂಕಾರವನ್ನೂ ಸೃಷ್ಟಿಸಿದೆನು. ಆ ಅಹಂಕಾರದಿಂದ ಐದು ತನ್ಮಾತ್ರಗಳೂ, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೂ, ಆಕಾಶಾದಿ ಪಂಚಭೂತಗಳೂ, ಇತರ ಪಾಂಚಭೌತಿಕವಸ್ತುಗಳೂ ಸೃಷ್ಟಿಸಲ್ಪಟ್ಟುವು. ಈರೀತಿ ಚೆನ್ನಾಗಿ ತಿಳಿದುಕೊಂಡು, ನನಗೆ ಶರಣಾಗತನಾಗು. ನಾನೆಲ್ಲ ತೊಂದರೆಗಳಿಂದಲೂ ನಿನ್ನನ್ನು ಖಂಡಿತವಾಗಿಯೂ ಕಾಪಾಡುತ್ತೇನೆ.

**ಅಹಂ ತ್ವಾಂ ಸರ್ವದುಃಖೇಭ್ಯೋ ರಕ್ಷಿಷ್ಯಾಮಿ ನ ಸಂಶಯಃ ।**

**॥ ಬ್ರಹ್ಮೋವಾಚ ॥**

**ಇತಿ ಶ್ರುತ್ವಾ ವಚಸ್ತಸ್ಯ ಬ್ರಹ್ಮಾ ಕ್ರೋಧಸಮನ್ವಿತಃ ।**
**ಕೋ ವಾ ತ್ವಮಿತಿ ಸಂಭತ್ಸ್ಯಾಬ್ರುವಂ ಮಾಯಾವಿಮೋಹಿತಃ ॥ ೪೩ ॥**

**ಕಿಮರ್ಥಂ ಭಾಷಸೇ ಭೂರಿ ಬಹ್ವನರ್ಥಕರಂ ವಚಃ ।**
**ನೇಶ್ವರಸ್ತ್ವಂ ಪರಂ ಬ್ರಹ್ಮ ಕಶ್ಚಿತ್ಕರ್ತಾ ಭವೇತ್ತವ ॥ ೪೪ ॥**

**ಮಾಯಯಾ ಮೋಹಿತಶ್ಚಾಹಂ ಯುದ್ಧಂ ಚಕ್ರೇ ಸುದಾರುಣಂ ।**
**ಹರಿಣಾ ತೇನ ವೈ ಸಾರ್ಧಂ ಶಂಕರಸ್ಯ ಮಹಾಪ್ರಭೋಃ ॥ ೪೫ ॥**

**ಏವಂ ಮಮ ಹರೇಶ್ಚಾಸೀತ್ಸಂಗರೋ ರೋಮಹರ್ಷಣಃ ।**
**ಪ್ರಲಯಾರ್ಣವಮಧ್ಯೇ ತು ರಜಸಾ ಬದ್ಧವೈರಯೋಃ ॥ ೪೬ ॥**

**ಏತಸ್ಮಿನ್ನಂತರೇ ಲಿಂಗಮಭವಚ್ಚಾವಯೋಃ ಪುರಃ ।**
**ವಿವಾದಶಮನಾರ್ಥಂ ಹಿ ಪ್ರಬೋಧಾರ್ಥಂ ತಥಾವಯೋಃ ॥ ೪೭ ॥**

---

೪೩. ಹೀಗೆಂದು ಆತನು ನುಡಿದ ಮಾತನ್ನು ಕೇಳಿ ನನಗೆ ಕೋಪವುಂಟಾಯಿತು. ಮಾಯೆಯಿಂದ ಮೋಹಿತನಾದ ನಾನು ಅವನನ್ನು ನೀನಾರೆಂದು ಗದರಿಸಿ ನುಡಿದೆನು.

೪೪. ಸುಮ್ಮನೆ ಏತಕ್ಕೋಸ್ಕರ ಅನರ್ಥವನ್ನುಂಟುಮಾಡುವ ಮಾತುಗಳನ್ನು ಬಹುವಾಗಿ ಹರಟುತ್ತೀಯೆ? ನೀನೇನು ಈಶ್ವರನೇ? ಪರಬ್ರಹ್ಮನೇ? ನಿನ್ನನ್ನೂ ಸೃಷ್ಟಿಸಿದವನು ಮತ್ತೊಬ್ಬನಿರಬೇಕಷ್ಟೆ? ಎಂದು ಹೇಳಿ,

೪೫. ಮಹಾಪ್ರಭುವಾದ ಶಿವನ ಮಾಯೆಯಿಂದ ಮೋಹಿತನಾದ ನಾನು, ಆ ಶ್ರೀಹರಿಯೊಡನೆ, ಬಹು ಭಯಂಕರವಾದ ಯುದ್ಧವನ್ನು ಮಾಡಿದೆನು.

೪೬. ಈರೀತಿಯಾಗಿ, ಪ್ರಳಯಕಾಲದಲ್ಲಿ ತಾನೇ ತಾನಾಗಿ ವ್ಯಾಪಿಸಿದ್ದ ಆ ಮಹಾಸಾಗರದ ನಡುವೆ, ರಜೋಗಣಕ್ಕೆ ವಶರಾಗಿ, ಬಹುದ್ವೇಷದಿಂದ ಹೊಡೆದಾಡುತ್ತಿದ್ದ ನಮ್ಮೀರ್ವರಿಗೂ, ವೈನವಿರೇಳುವಂತಹ ಭಾರಿ ಯುದ್ಧವು ನಡೆಯಿತು.

೪೭. ಈಮಧ್ಯೆ, ನಮ್ಮೀರ್ವರಿಗೂ ಉಂಟಾದ ಜಗಳವನ್ನು ಪರಿಹರಿಸಲೂ, ನಮ್ಮನ್ನು ಈ ಮಾಯೆಯಿಂದ ಎಚ್ಚರಿಸಲೂ, ನಮ್ಮೆದುರಿಗೆ ಲಿಂಗವೊಂದು ಆವಿರ್ಭವಿಸಿತು.

ಜ್ವಾಲಾಮಾಲಾಸಹಸ್ರಾಢ್ಯಂ ಕಾಲಾನಲಶತೋಪಮಮ್ ।
ಕ್ಷಯವೃದ್ಧಿವಿನಿರ್ಮುಕ್ತಮಾದಿಮಧ್ಯಾಂತವರ್ಜಿತಮ್ ॥ ೪೮ ॥

ಅನೌಪಮ್ಯಮನಿರ್ದೇಶ್ಯಮವ್ಯಕ್ತಂ ವಿಶ್ವಸಂಭವಮ್ ।
ತಸ್ಯ ಜ್ವಾಲಾಸಹಸ್ರೇಣ ಮೋಹಿತೋ ಭಗವಾನ್ಹರಿಃ ॥ ೪೯ ॥

ಮೋಹಿತಂ ಚಾಹ ಮಾಮತ್ರ ಕಿಮರ್ಥಂ ಸ್ಪರ್ಧಸೇಽಧುನಾ ।
ಆಗತಸ್ತು ತೃತೀಯೋಽತ್ರ ತಿಷ್ಠತಾಂ ಯುದ್ಧಮಾವಯೋಃ ॥ ೫೦ ॥

ಕುತ ಏವಾತ್ರ ಸಂಭೂತಃ ಪರೀಕ್ಷಾವೋಽಗ್ನಿಸಂಭವಮ್ ।
ಅಧೋ ಗಮಿಷ್ಯಾಮ್ಯನಲಸ್ತಂಭಸ್ಯಾನುಪಮಸ್ಯ ಚ ॥ ೫೧ ॥

ಪರೀಕ್ಷಾರ್ಥಂ ಪ್ರಜಾನಾಥ ತಸ್ಯ ವೈ ವಾಯುವೇಗತಃ ।
ಭವಾನೂರ್ಧ್ವಂ ಪ್ರಯತ್ನೇನ ಗಂತುಮರ್ಹಸಿ ಸತ್ವರಮ್ ॥ ೫೨ ॥

---

೪೮. ಆ ಲಿಂಗವು ಅಲೆಯಲೆಯಾಗಿ ಹೊರಹೊರಡುತ್ತಿರುವ ಸಹಸ್ರಾರು ಜ್ವಾಲೆಗಳನ್ನು ಚೆಲ್ಲುತ್ತಾ ಪ್ರಳಯಕಾಲಾಗ್ನಿಗಳು ನೂರಾರು ಸೇರಿದಂತೆ ಉಜ್ಜ್ವಲವಾಗಿ ಬೆಳಗುತ್ತಾ, ಏರುತಗ್ಗುಗಳಿಲ್ಲದೆ, ಆದಿಮಧ್ಯಾಂತಗಳಿಲ್ಲದೆ, ಯಾವುದೊಂದರೊಡನೆಯೂ, ಹೋಲಿಸಲು ಅಸಾಧ್ಯವಾದುದಾಗಿ, 'ಹೀಗೆ, ಇಂತು,' ಎಂದು ನಿರ್ದೇಶಿಸಲೂ ಸಾಧ್ಯವಿಲ್ಲದೆ, ಅವ್ಯಕ್ತವೆನಿಸಿಕೊಂಡು, ಪ್ರಪಂಚಕ್ಕೆಲ್ಲಾ ಕಾರಣವೆನಿಸಿ ಬೆಳಗುತ್ತಿತ್ತು.

೪೯-೫೦. ಜ್ವಾಲಾಮಯವಾದ ಆ ಲಿಂಗದ ಸೀಮಾತೀತವಾದ ಪ್ರಭೆಯಿಂದ ಮೋಹಿತನಾಗಿ ಆ ಭಗವಂತನಾದ ವಿಷ್ಣುವು ತನ್ನಂತೆಯೇ ಮೋಹಿತನಾದ ನನ್ನನ್ನು ಕುರಿತು ಇಂತೆಂದನು. ಈಗ ಇನ್ನೇತಕ್ಕೆ ನನ್ನೊಡನೆ ಸೆಣಸತೊಡಗುವೆ? ಇಲ್ಲಿ ನೋಡು, ಮೂರನೆಯವನೊಬ್ಬನು ಬಂದಿದ್ದಾನೆ. ನಮ್ಮಿಬ್ಬರಿಗೂ ಈ ಯುದ್ಧ ಸಾಕು.

೫೧-೫೨. ನೀಳವಾದ ಜ್ವಾಲೆಗಳನ್ನು ಕಕ್ಕುತ್ತಿರುವ ಈ ಲಿಂಗವು ಇಲ್ಲಿ ಹೇಗೆ ಸಂಭವಿಸಿತು? ಎನ್ನುವುದನ್ನು ಪರೀಕ್ಷಿಸೋಣ, ಓ ಪ್ರಜಾಪತೀ! ಅಸದೃಶವಾದ ಈ ಅನಲಸ್ತಂಭದ ಕೆಳಗೆ ಪರೀಕ್ಷಿಸಲೋಸುಗ ವಾಯುವೇಗದಿಂದ ಹೋಗುವೆನು. ನೀನೂ ಹಾಗೆಯೇ ಪರೀಕ್ಷಿಸಲು ಮೇಲುಗಡೆ ಬೇಗನೆ ಹೋಗು ಎಂದನು.

॥ ಬ್ರಹ್ಮೋವಾಚ ॥

ಏವಂ ವ್ಯಾಹೃತ್ಯ ವಿಶ್ವಾತ್ಮಾ ಸ್ವರೂಪಮಕರೋತ್ತದಾ ।
ವಾರಾಹಮಹಮಪ್ಯಾಶು ಹಂಸತ್ವಂ ಪ್ರಾಪ್ತವಾನ್ಮುನೇ ॥ ೫೩ ॥

ತದಾ ಪ್ರಭೃತಿ ಮಾಮಾಹುರ್ಹಂಸಹಂಸೋ ವಿರಾಡಿತಿ ।
ಹಂಸಹಂಸೇತಿ ಯೋ ಬ್ರೂಯಾತ್ಸ ಹಂಸೋಽಥ ಭವಿಷ್ಯತಿ ॥ ೫೪ ॥

ಸುಶ್ವೇತೋ ಹ್ಯನಲಪ್ರಖ್ಯೋ ವಿಶ್ವತಃ ಪಕ್ಷಸಂಯುತಃ ।
ಮನೋಽನಿಲಜವೋ ಭೂತ್ವಾ ಗತೋರ್ಧ್ವಂ ಚೋರ್ಧ್ವತಃ ಪುರಾ ॥ ೫೫ ॥

ನಾರಾಯಣೋಽಪಿ ವಿಶ್ವಾತ್ಮಾ ಸುಶ್ವೇತೋ ಹ್ಯಭವತ್ತದಾ ।
ದಶಯೋಜನವಿಸ್ತೀರ್ಣಂ ಶತಯೋಜನಮಾಯತಂ ॥ ೫೬ ॥

---

೫೩. ಓ ನಾರದ, ಹೀಗೆಂದು ಆ ವಿಶ್ವಾತ್ಮಕನಾದ ಹರಿಯು ನುಡಿದು, ಆಗ ಹಂದಿಯ ರೂಪವನ್ನು ತಾಳಿದನು. ನಾನೂ ಕೂಡ ಬೇಗನೆ ಹಂಸದ ಸ್ವರೂಪವನ್ನು ಧರಿಸಿದೆನು.

೫೪. ಅದುಮೊದಲುಗೊಂಡು ನನ್ನನ್ನು ಹಂಸ, ಹಂಸ, ಎಂದು ಕರೆಯುವರು. ಹಂಸ, ಹಂಸ, ಎಂದು ಯಾವನು ನುಡಿಯುವನೋ, ಅವನು ಆಮೇಲೆ ಹಂಸವೇ ಆಗುವನು.

೫೫. ಒಳ್ಳೆಯ ಶುಭ್ರವಾದ ಬಣ್ಣವನ್ನು ತಳೆದು, ಬೆಂಕಿಯಂತೆ ಬೆಳಗುತ್ತಾ ಸುತ್ತಲೂ ರೆಕ್ಕೆಗಳನ್ನು ಹೊಂದಿ, ವಾಯುವೇಗ ಮನೋವೇಗಗಳಿಂದ ಮೇಲಕ್ಕೆ ಬಹು ದೂರ ಹೋದೆನು. ವಿಶ್ವಾತ್ಮಕನಾದ ಆ ಶ್ರೀಹರಿಯೂ ಸಹ ಆಗ ಬಹು ಬೆಳ್ಳಗೆ ಆಗಿಹೋದನು.

೫೬-೫೮. ಆ ಹರಿಯು ತಳೆದ ಆ ವರಾಹಾಕೃತಿಯ ಅದ್ಭುತ ಸ್ವರೂಪವನ್ನು ಏನೆಂದು ಹೇಳಲಿ? ಹತ್ತು ಯೋಜನಗಳಷ್ಟು ಅದರ ದೇಹದ ಅಡ್ಡಗಲವಿತ್ತು. ನೂರು ಯೋಜನಗಳಷ್ಟು ಅದು ಉದ್ದವಾಗಿತ್ತು, ಅದರ ದೇಹವು ಮೇರುಪರ್ವತವನ್ನು ಹೋಲುತ್ತಿತ್ತು. ಅದರ ಕೋರೆದಾಡೆಗಳು ಬಹು ಮೊನಚಾಗಿಯೂ, ಬೆಳ್ಳಗೂ, ಭಯಂಕರವಾಗಿಯೂ ಇದ್ದುವು. ಅದರ ಮುಸುಡಿಯು ಬಹು ಉದ್ದವಾಗಿತ್ತು. ಘುರು ಘುರು ಎಂದು ಬಹು ಘಟ್ಟಿಯಾಗಿ ಶಬ್ದಮಾಡುತ್ತಿತ್ತು. ಅದರ

ನೇರುಪರ್ವತವರ್ಷ್ಮಾಣಂ ಗೌರತೀಕ್ಷ್ಣೋಗ್ರದಂಷ್ಟ್ರಿಣಂ ।
ಕಾಲಾದಿತ್ಯಸಮಾಭಾಸಂ ದೀರ್ಘಘೋಣಂ ಮಹಾಸ್ವನಂ ॥ ೫೭ ॥

ಹ್ರಸ್ವಪಾದಂ ವಿಚಿತ್ರಾಂಗಂ ಜೈತ್ರಂ ದೃಢಮನೌಪಮಂ ।
ವಾರಾಹಾಕಾರಮಾಸ್ಥಾಯ ಗತವಾಂಸ್ತದಧೋ ಜವಾತ್ ॥ ೫೮ ॥

ಏವಂ ವರ್ಷಸಹಸ್ರಂ ಚ ಚರನ್ವಿಷ್ಣುರಧೋಗತಃ ।
ತದಾಪ್ರಭೃತಿ ಲೋಕೇಷು ಶ್ವೇತವಾರಹಸಂಜ್ಞಕಃ ॥ ೫೯ ॥

ಕಲ್ಪೋ ಬಭೂವ ದೇವರ್ಷೇ ನರಾಣಾಂ ಕಾಲಸಂಜ್ಞಕಃ ।
ಬಭ್ರಾಮ ಬಹುಧಾ ವಿಷ್ಣುಃ ಪ್ರಭವಿಷ್ಣುರಧೋಗತಃ ॥ ೬೦ ॥

ನಾಪಶ್ಯದಲ್ಪಮಪ್ಯಸ್ಯ ಮೂಲಂ ಲಿಂಗಸ್ಯ ಸೂಕರಃ ।
ತಾವತ್ಕಾಲಂ ಗತಶ್ಚೋರ್ಧ್ವಮಹಮಪ್ಯರಿಸೂದನಃ ॥ ೬೧ ॥

---

ಕಾಲುಗಳು ಗಿಡ್ಡಾಗಿದ್ದುವು, ಅವಯವಗಳೆಲ್ಲವೂ ವಿಚಿತ್ರವಾಗಿದ್ದುವು. ಆ ವರಾಹವು ಮಹಾಬಲಶಾಲಿಯೂ, ವಿಜಯೋನ್ಮಾದದಿಂದ ಉಬ್ಬುವಂಥದೂ, ಅನುಪಮವಾದುದೂ ಆಗಿತ್ತು. ಅದರ ಕಾಂತಿಯು ಪ್ರಳಯಕಾಲದ ಸೂರ್ಯನನ್ನು ಹೋಲುತಿತ್ತು. ಇಂತಹ ವರಾಹಾಕೃತಿಯನ್ನು ತಳೆದು ಬೇಗನೆ, ಆ ಲಿಂಗದ ಬುಡವನ್ನು ಕಂಡುಹಿಡಿಯಲು ಆ ಹರಿಯು ಹೊರಟನು.

೫೯. ಈರೀತಿಯಾಗಿ ವಿಷ್ಣುವು ಒಂದುಸಾವಿರ ವರ್ಷಗಳು ಸುತ್ತಾಡುತ್ತಾ ಕೆಳಕ್ಕೆ ಹೋದನು. ಅದುಮೊದಲುಕೊಂಡು ಜಗತ್ತಿನಲ್ಲಿ ಆತನಿಗೆ ಶ್ವೇತವರಾಹನೆಂಬ ಹೆಸರುಂಟಾಯಿತು. ಅಲ್ಲದೆ ಮಾನವರಿಗೆ ಶ್ವೇತವರಾಹಕಲ್ಪವೆಂಬ ಕಾಲಮಾನವೂ ಉಂಟಾಯಿತು.

೬೦. ಮಹಾಸಾಹಸಿಯಾದ ಆ ವಿಷ್ಣುವು ಆಲಿಂಗದ ಬುಡವನ್ನು ಕಾಣಲು, ಕೆಳಗಡೆ ಬಹು ವಿಧವಾಗಿ ಸುತ್ತಾಡಿದನು. ಆದರೂ,

೬೧. ವರಾಹಮೂರ್ತಿಧಾರಿಯಾದ ವಿಷ್ಣುವು ಸ್ವಲ್ಪವೂ ಸಹ ಲಿಂಗದ ಬುಡವನ್ನು ಕಂಡುಹಿಡಿಯಲಾಗಲಿಲ್ಲ. ಶತ್ರುಗಳ ಹುಟ್ಟೇ ಇಲ್ಲವೆನ್ನಿಸುವ ನಾನೂ ಸಹ ಅಷ್ಟು ಕಾಲದವರೆಗೆ ಮೇಲೇರುತ್ತಿದ್ದೆನು.

**ಸತ್ವರಂ ಸರ್ವಯತ್ನೇನ ತಸ್ಯಾಂತಂ ಜ್ಞಾತುಮಿಚ್ಛಯಾ ।**
**ಶ್ರಾಂತೋ ನ ದೃಷ್ಟ್ವಾ ತಸ್ಯಾಂತಮಹಂ ಕಾಲಾದಧೋಗತಃ ॥ ೬೨ ॥**

**ತಥೈವ ಭಗವಾನ್ವಿಷ್ಣುಶ್ಶ್ರಾಂತಂ ಕಮಲಲೋಚನಃ ।**
**ಸರ್ವದೇವನಿಭಸ್ತೂರ್ಣಮುತ್ಥಿತಸ್ಸ ಮಹಾವಪುಃ ॥ ೬೩ ॥**

**ಸಮಾಗತೋ ಮಯಾ ಸಾರ್ಧಂ ಪ್ರಣಿಪತ್ಯ ಭವಂ ಮುಹುಃ ।**
**ಮಾಯಯಾ ಮೋಹಿತಶ್ಶಂಭೋಸ್ತಸ್ಥೌ ಸಂವಿಗ್ನಮಾನಸಃ ॥ ೬೪ ॥**

**ಪೃಷ್ಠತಃ ಪಾರ್ಶ್ವತಶ್ಚೈವ ಹ್ಯಗ್ರತಃ ಪರಮೇಶ್ವರಂ ।**
**ಪ್ರಣಿಪತ್ಯ ಮಯಾ ಸಾರ್ಧಂ ಸಸ್ಮಾರ ಕಿಮಿದಂ ತ್ವಿತಿ ॥ ೬೫ ॥**

**ಅನಿರ್ದೇಶ್ಯಂ ಚ ತದ್ರೂಪಮನಾಮ ಕರ್ಮವರ್ಜಿತಂ ।**
**ಅಲಿಂಗಂ ಲಿಂಗತಾಂ ಪ್ರಾಪ್ತಂ ಧ್ಯಾನಮಾರ್ಗೇಽಪ್ಯಗೋಚರಂ ॥ ೬೬ ॥**

---

೬೨. ಅದರ ಕೊನೆಯನ್ನು ಹೇಗಾದರೂ ಮಾಡಿ, ಸರ್ವಪ್ರಯತ್ನದಿಂದಲೂ ಬೇಗನೆ ಕಂಡುಹಿಡಿಯಬೇಕೆಂಬಾಸೆಯಿಂದ ಪ್ರಯತ್ನಿಸಿ ಸಾಧ್ಯವಿಲ್ಲದೆ ಬಹು ಬಳಲಿದವನಾಗಿ ನಾನೂ ಬಹುಕಾಲ ಕೆಳಗಿಳಿದು ಬಂದೆನು.

೬೩. ಹಾಗೆಯೇ, ಸರ್ವದೇವಸದೃಶನಾದ ಆ ಪುಂಡರೀಕಾಕ್ಷನೂ ಕೆಳಗಡೆ ಕೊನೆಯನ್ನು ಕಂಡುಹಿಡಿಯಲಾರದೆ ಬಳಲಿ ಬೇಗಬೇಗನೆ ಮೇಲಕ್ಕೇರಿ ಬಂದನು.

೬೪. ಮೇಲಕ್ಕೆ ಬಂದು ನನ್ನೊಡನೆ ಶಿವನನ್ನು ಪುನಃ ಪುನಃ ನಮಸ್ಕರಿಸಿ, ಆತನ ಮಾಯೆಯಿಂದ ಮೋಹಿತನಾಗಿ, ಕದಡಿದ ಮನಸ್ಸುಳ್ಳವನಾಗಿ ಸುಮ್ಮನೆ ನಿಂತುಬಿಟ್ಟನು.

೬೫. ಹಿಂದೆಯೂ, ಎರಡು ಪಕ್ಕಗಳಲ್ಲೂ, ಮುಂದುಗಡೆಯೂ ಆ ಪರಮೇಶ್ವರನನ್ನು ಮತ್ತೊಮ್ಮೆ ನನ್ನೊಡನೆ ನಮಸ್ಕರಿಸಿ ಇದೇನು ? ಒಂದೂ ಗೊತ್ತಾಗುವುದಿಲ್ಲವಲ್ಲ ? ಎಂದು ಆಲೋಚಿಸತೊಡಗಿದನು.

೬೬. ಆ ವಸ್ತುವಿನ ರೂಪವಿಂಥದೆಂದು ನಿರ್ದೇಶಿಸಲು ಸಾಧ್ಯವಿಲ್ಲ. ಅದಕ್ಕೆ ಹೆಸರೂ ಇಲ್ಲ, ಕರ್ಮವೂ ಇಲ್ಲ. ಊಹೆಗೂ ನಿಲುಕದಿರುವಂಥಾ, ಯಾವ ಗುರುತೂ ಇಲ್ಲದಿರುವ, ಆ ವಸ್ತುವು ಬಳಿಕ ಈ ಲಿಂಗಸ್ವರೂಪವನ್ನು ಪಡೆಯಿತು.

**ಸ್ವಸ್ಥಂ ಚಿತ್ತಂ ತದಾ ಕೃತ್ವಾ ನಮಸ್ಕಾರಪರಾಯಣೌ ।**
**ಬಭೂವತುರುಭಾವಾವಾಮಹಂ ಹರಿರಪಿ ಧ್ರುವಂ ॥ ೬೭ ॥**

**ಜಾನೀವೋ ನ ಹಿ ತೇ ರೂಪಂ ಯೋಽಸಿ ಯೋಽಸಿ ಮಹಾಪ್ರಭೋ ।**
**ನಮೋಽಸ್ತು ತೇ ಮಹೇಶಾನ ರೂಪಂ ದರ್ಶಯ ನೌ ತ್ವರನ್ ॥ ೬೮ ॥**

**ಏವಂ ಶರಚ್ಛತಾನ್ಯಾಸನ್ನಮಸ್ಕಾರಂ ಪ್ರಕುರ್ವತೋಃ ।**
**ಆವಯೋರ್ಮುನಿಶಾರ್ದೂಲ ಮದಮಾಸ್ಥಿತಯೋಸ್ತದಾ ॥ ೬೯ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ವಿಷ್ಣುಬ್ರಹ್ಮವಿವಾದವರ್ಣನೋ ನಾಮ ಸಪ್ತಮೋಽಧ್ಯಾಯಃ**



---

೬೭. ಆಗ ನಾನೂ ಶ್ರೀಹರಿಯೂ, ಮನಸ್ಸನ್ನು ಶುದ್ಧವಾಗಿಟ್ಟುಕೊಂಡು ಸುಮ್ಮನೆ ನಮಸ್ಕಾರಮಾಡಲು ತೊಡಗಿದೆವು.

೬೮. ಓ ಮಹಾಪ್ರಭೂ! ನೀನು ಯಾರೋ? ಹೇಗಿರುವೆಯೋ? ನಿನ್ನ ರೂಪವೆಂಥದೋ? ನಾವರಿಯೆವು. ಓ ಮಹೇಶ್ವರ! ನಿನಗೆ ನಮಸ್ಕಾರವು. ಜಾಗ್ರತೆ ನಿನ್ನ ಸ್ವರೂಪವನ್ನು ನಮಗೆ ತೋರು ಎಂದು ಪ್ರಾರ್ಥಿಸಿದೆವು.

೬೯. ಓ ಮುನಿಶ್ರೇಷ್ಠ, ಹೀಗೆ ಅಹಂಕಾರದಿಂದ ಮತ್ತರಾಗಿದ್ದ ನಾವಿಬ್ಬರೂ ನಮಸ್ಕಾರಗಳನ್ನು ಮಾಡುತ್ತಿರಲು ನೂರು ವರ್ಷಗಳು ಕಳೆದುಹೋದುವು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ವಿಷ್ಣುಬ್ರಹ್ಮವಿವಾದವರ್ಣನವೆಂಬ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸೃಷ್ಟಿಖಂಡೇ

## ಅಷ್ಟಮೋಽಧ್ಯಾಯಃ

---

॥ ಬ್ರಹ್ಮೋವಾಚ ॥ !

ಏವಂ ತಯೋರ್ಮುನಿಶ್ರೇಷ್ಠ ದರ್ಶನಂ ಕಾಂಕ್ಷಮಾಣಯೋಃ ।
ವಿಗರ್ವಯೋಶ್ಚ ಸುರಯೋಃ ಸದಾ ನೌ ಸ್ಥಿತಯೋರ್ಮುನೇ ॥ ೧ ॥

ದಯಾಲುರಭವಚ್ಛಂಭುರ್ದೀನಾನಾಂ ಪ್ರತಿಪಾಲಕಃ ।
ಗರ್ವಿಣಾಂ ಗರ್ವಹರ್ತಾ ಚ ಸರ್ವೇಷಾಂ ಪ್ರಭುರವ್ಯಯಃ. ॥ ೨ ॥

ತದಾ ಸಮಭವತ್ತತ್ರ ನಾದೋ ವೈ ಶಬ್ದಲಕ್ಷಣಃ ।
ಓಮೋಮಿತಿ ಸುರಶ್ರೇಷ್ಠಾತ್ಸುವ್ಯಕ್ತಃ ಪ್ಲುತಲಕ್ಷಣಃ ॥ ೩ ॥

---

## ಎಂಟನೆಯ ಅಧ್ಯಾಯವು

೧-೨. ಬ್ರಹ್ಮನು ಹೇಳಿದನು :—ಎಲೈ ನಾರದಮುನಿ, ಈ ರೀತಿಯಾಗಿ ನಾವು (ಬ್ರಹ್ಮ ಮತ್ತು ವಿಷ್ಣುಗಳು) ಗರ್ವವನ್ನು ತ್ಯಜಿಸಿ, ಶಿವನ ದರ್ಶನವನ್ನು ಮಾಡಲು ದ್ವೇಶದಿಂದ ಅವನನ್ನು ಸ್ತುತಿಸುತ್ತಿರಲು, ದೀನರನ್ನು ಸಲಹತಕ್ಕವನೂ, ಗರ್ವಿಗಳ ಗರ್ವವನ್ನು ನಾಶಮಾಡತಕ್ಕವನೂ, ಎಲ್ಲರಿಗೂ ಪ್ರಭುವೂ ಆದಂತಹ ಶಿವನು ನಮ್ಮಲ್ಲಿ ಅನುಗ್ರಹವುಳ್ಳವನಾದನು.

೩. ಆಗ ಅಲ್ಲಿ ಓಂಕಾರರೂಪವಾದ ದೀರ್ಘವಾದ ಒಂದು ಶಬ್ದಧ್ವನಿಯು, ಸ್ಪಷ್ಟವಾಗಿ ಕೇಳಿಸಿತು.

ಕಿಮಿದಂ ತ್ವಿತಿ ಸಂಚಿಂತ್ಯ ಮಯಾ ತಿಷ್ಠನ್ಮಹಾಸ್ವನಃ ।
ವಿಷ್ಣುಸ್ಸರ್ವಸುರಾರಾಧ್ಯೋ ನಿರ್ವೈರಸ್ತುಷ್ಟಚೇತಸಾ ॥ ೪ ॥

ಲಿಂಗಸ್ಯ ದಕ್ಷಿಣೇ ಭಾಗೇ ತಥಾಪಶ್ಯತ್ಸನಾತನಂ ।
ಆದ್ಯಂ ವರ್ಣಮಕಾರಾಖ್ಯಮುಕಾರಂ ಚೋತ್ತರೇ ತತಃ ॥ ೫ ॥

ಮಕಾರಂ ಮಧ್ಯತಶ್ಚೈವ ನಾದಮಂತೇಽಸ್ಯ ಚೋಮಿತಿ ।
ಸೂರ್ಯಮಂಡಲವದ್ದೃಷ್ಟ್ವಾ ವರ್ಣಮಾದ್ಯಂ ತು ದಕ್ಷಿಣೇ ॥ ೬ ॥

ಉತ್ತರೇ ಪ್ರಾವಕಪ್ರಖ್ಯಮುಕಾರಮೃಷಿಸತ್ತಮ ।
ಶೀತಾಂಶುಮಂಡಲಪ್ರಖ್ಯಂ ಮಕಾರಂ ತಸ್ಯ ಮಧ್ಯತಃ ॥ ೭ ॥

ತಸ್ಯೋಽಪರಿ ತದಾಽಪಶ್ಯಚ್ಛುದ್ಧಸ್ಫಟಿಕಸುಪ್ರಭಂ ।
ತುರೀಯಾತೀತಮಮಲಂ ನಿಷ್ಕಲಂ ನಿರುಪದ್ರವಂ ॥ ೮ ॥

---

೪-೫. ಆಗ ನಾನೂ ವಿಷ್ಣುವೂ ಸಹ ಚಕಿತರಾಗಿ ಇದಾವ ಶಬ್ದವೆಂದು ಯೋಚಿಸುತ್ತಾ ನಿಷ್ಕಲ್ಮಷವೂ ಶಾಂತವೂ ಆದ ಬುದ್ಧಿಯಿಂದ ವಿಮರ್ಶಿಸಲು, ಶಿವ ಲಿಂಗದ ಬಲಭಾಗದಲ್ಲಿ ಅನಾದಿಯಾದ ಶಿವಸ್ವರೂಪವಾದ ಆ ಓಂಕಾರದ ಅಕಾರ ವನ್ನೂ ಎಡಭಾಗದಲ್ಲಿ ' ಉ ' ಕಾರವನ್ನೂ ನೋಡಿದೆವು. ಮಕಾರವು ಆ ಶಿವಲಿಂಗದ ಮಧ್ಯಭಾಗದಲ್ಲಿಯೂ, ಓಂ ಎಂಬ ನಾದವು (ಧ್ವನಿಯು) ಅದರ ಸಮೀಪದಲ್ಲಿಯೂ ಕಾಣಿಸಿದುವು.

೬-೭. ಆ ಶಿವಲಿಂಗದ ದಕ್ಷಿಣಭಾಗದಲ್ಲಿ ಆ ಅಕಾರವು ಸೂರ್ಯಮಂಡಲದಂತೆ ಪ್ರಕಾಶಿಸುತ್ತಲಿದ್ದಿತು. ಉತ್ತರಭಾಗದಲ್ಲಿನ ಉಕಾರವು ಅಗ್ನಿಯಂತೆ ರಾಜಿಸುತ್ತಲಿತ್ತು ಮಧ್ಯದಲ್ಲಿ ಮಕಾರವು ಚಂದ್ರಮಂಡಲದಂತೆ ಶಾಂತವಾಗಿ ವಿರಾಜಿಸುತ್ತಲಿತ್ತು.

೮-೧೦. ಆ ಲಿಂಗದ ಮೇಲ್ಭಾಗದಲ್ಲಿ ಶುದ್ಧಸ್ಫಟಿಕದಂತೆ ಶುಭ್ರವೂ, ತ್ರಿಮೂರ್ತಿ ಗಳಿಗೆ ಕಾರಣವೂ, ಅಜ್ಞಾನಸಂಬಂಧವಿಲ್ಲದುದೂ, ಆದಕಾರಣ ನಿರ್ಮಲವೂ, ಅವ ಯವಗಳಿಲ್ಲದುದೂ, ದುಃಖಸಂಬಂಧವಿಲ್ಲದುದೂ, ತನ್ನಲ್ಲಿ ಭೇದವಿಲ್ಲದುದೂ, ತನ್ನಂ ತಿರುವ ಇನ್ನೊಂದು ವಸ್ತುವಿನ ಭೇದವಿಲ್ಲದುದೂ, ತನಗಿಂತಲೂ ವಿರುದ್ಧವಾಗಿರುವ ಇನ್ನೊಂದು ವಸ್ತುವಿನ ಭೇದವಿಲ್ಲದುದೂ, ಒಳಹೊರಗುಗಳೆಂಬ ಭೇದವಿಲ್ಲದುದಾ ದರೂ ಮಾಯಾಮಯವಾದ ಒಳಹೊರಗು ಭೇದಗಳುಳ್ಳದುದೂ, ಎಲ್ಲೆಡೆಯಲ್ಲಿ

ನಿರ್ದ್ವಂದ್ವಂ ಕೇವಲಂ ಶೂನ್ಯಂ ಬಾಹ್ಯಾಭ್ಯಂತರವರ್ಜಿತಂ ।
ಸ ಬಾಹ್ಯಾಭ್ಯಂತರೇ ಚೈವ ಬಾಹ್ಯಾಭ್ಯಂತರಸಂಸ್ಥಿತಂ ॥ ೯ ॥

ಆದಿಮಧ್ಯಾಂತರಹಿತಮಾನಂದಸ್ಯಾದಿಕಾರಣಂ ।
ಸತ್ಯಮಾನಂದಮಮೃತಂ ಪರಂ ಬ್ರಹ್ಮ ಪರಾಯಣಂ ॥ ೧೦ ॥

ಕುತ ಏವಾತ್ರ ಸಂಭೂತಃ ಪರೀಕ್ಷಾವೋಽಗ್ನಿಸಂಭವಂ ।
ಅಧೋ ಗಮಿಷ್ಯಾಮ್ಯನಲಸ್ತಂಭಸ್ಯಾನುಪಮಸ್ಯ ಚ ॥ ೧೧ ॥

ವೇದಶಬ್ದೋಭಯಾವಶಂ ವಿಶ್ವಾತ್ಮಾನಂ ವ್ಯಚಿಂತಯತ್ ।
ತದಾಽಭವದೃಷಿಸ್ತತ್ರ ಋಷೇಸ್ಸಾರತಮಂ ಸ್ಮೃತಂ ॥ ೧೨ ॥

ತೇನೈವ ಋಷಿಣಾ ವಿಷ್ಣುರ್ಜ್ಞಾತವಾನ್ಪರಮೇಶ್ವರಃ ।
ಮಹಾದೇವಂ ಪರಂ ಬ್ರಹ್ಮ ಶಬ್ದಬ್ರಹ್ಮತನುಂ ಪರಂ ॥ ೧೩ ॥

---

ವ್ಯಾಪಕವಾಗಿರುವುದೂ, ಉತ್ಪತ್ತಿ ವಿನಾಶಸ್ಥಿತಿ ಮುಂತಾದ ವಸ್ತುವಿಕಾರಗಳಿಲ್ಲದುದೂ, ಲೋಕದಲ್ಲಿಯ ವಿಷಯಗಳಿಂದಾಗುವ ಆನಂದವನ್ನುಂಟುಮಾಡುವುದೂ, ಸತ್ಯಸ್ವರೂಪವೂ ಜ್ಞಾನಸ್ವರೂಪವೂ, ಆನಂದಸ್ವರೂಪವೂ ಜಗತ್ತಿಗೆಲ್ಲಾ ಆಧಾರವಾದುದೂ ಆದಂತಹ ಶಬ್ದಬ್ರಹ್ಮವನ್ನು ನಾನೂ ವಿಷ್ಣುವೂ ಸಹ ನೋಡಿದೆವು.

೧೧. ಆಗ ವಿಷ್ಣುವು ಈ ಶಬ್ದವು ಎಲ್ಲಿಂದ ಬಂದಿತು? ತೇಜೋಮಯವಾದ ಈ ಲಿಂಗವನ್ನು ಪರೀಕ್ಷಿಸೋಣ. ಮಹತ್ತಾದ ಈ ಅಗ್ನಿಸ್ತಂಭದ ಮೂಲಭಾಗಕ್ಕೆ ಹೋಗಿ ಪರೀಕ್ಷಿಸುವೆನು. ಎಂದು ಶಬ್ದಬ್ರಹ್ಮಸ್ವರೂಪನೂ ಜಗದ್ರೂಪನೂ ಆದಂತಹ ಆ ಪರಮಾತ್ಮನನ್ನು ಹಾಗೆಯೇ ಧ್ಯಾನಿಸಿದನು.

೧೨-೧೩. ಆಗ ಅಲ್ಲಿ ಋಷಿಯೋರ್ವನು ಕಾಣಿಸಿಕೊಂಡನು. ಆ ಋಷಿಯಿಂದ ವಿಷ್ಣುವು ತನಗೆ ಕೇಳಿಸಿದ (ಓಂಕಾರ) ಧ್ವನಿಯು, ಶಬ್ದಬ್ರಹ್ಮಸ್ವರೂಪನೂ, ಪರಬ್ರಹ್ಮಸ್ವರೂಪನೂ, ದೇವದೇವನೂ, ಆದ ಪರಮೇಶ್ವರನ ಶಬ್ದಬ್ರಹ್ಮಸ್ವರೂಪವಾದುದೆಂದು ತಿಳಿದನು.

ಚಿಂತಯಾ ರಹಿತೋ ರುದ್ರೋ ವಾಚೋ ಯನ್ಮನಸಾ ಸಹ ।
ಅಪ್ರಾಪ್ಯ ತನ್ನಿವರ್ತಂತೇ ವಾಚ್ಯಸ್ತ್ವೇಕಾಕ್ಷರೇಣ ಸಃ ॥ ೧೪ ॥

ಏಕಾಕ್ಷರೇಣ ತದ್ವಾಚ್ಯಮೃತಂ ಪರಮಕಾರಣಂ ।
ಸತ್ಯಮಾನಂದಮಮೃತಂ ಪರಂ ಬ್ರಹ್ಮ ಪರಾತ್ಪರಂ ॥ ೧೫ ॥

ಏಕಾಕ್ಷರಾದಕಾರಾಖ್ಯಾದ್ಭಗವಾನ್ಬೀಜಕೋಽಂಡಜಃ ।
ಏಕಾಕ್ಷರಾದುಕಾರಾಖ್ಯಾದ್ಧರಿಃ ಪರಮಕಾರಣಂ ॥ ೧೬ ॥

ಏಕಾಕ್ಷರಾನ್ಮಕಾರಾಖ್ಯಾದ್ಭಗವಾನ್ನೀಲಲೋಹಿತಃ ।
ಸರ್ಗಕರ್ತಾ ತ್ವಕಾರಾಖ್ಯೋ ಹ್ಯುಕಾರಾಖ್ಯಸ್ತು ಮೋಹಕಃ ॥ ೧೭ ॥

ಮಕಾರಾಖ್ಯಸ್ತು ಯೋ ನಿತ್ಯಮನುಗ್ರಹಕರೋಽಭವತ್ ।
ಮಕಾರಾಖ್ಯೋ ವಿಭುರ್ಬೀಜೀ ಹ್ಯಕಾರೋ ಬೀಜ ಉಚ್ಯತೇ ॥ ೧೮ ॥

---

೧೪. ಶಿವನನ್ನು ಚಿಂತಿಸಲಸಾಧ್ಯವು. ಕಾರಣವೇನೆಂದರೆ ಮನಸ್ಸು ಮೊದಲುಗೊಂಡು ಯಾವ ಇಂದ್ರಿಯಗಳೂ ಅವನನ್ನು ವಿಷಯೀಕರಿಸಲಾರವು; ಅವನಿಗೆ ರೂಪವಿಲ್ಲವು. ಆದರೆ ಓಂಕಾರರೂಪವಾಗಿ ಆತನನ್ನು ಧ್ಯಾನಿಸಬಹುದು.

೧೫. ಓಂಕಾರರೂಪವಾದ ಒಂದು ಅಕ್ಷರವು—ಸತ್ಯವೂ, ಜಗತ್ತಿಗೆ ಪರಮಕಾರಣವೂ, ಆನಂದ ಮತ್ತೂ ಜ್ಞಾನಸ್ವರೂಪವೂ, ನಾಶವಿಲ್ಲದುದೂ, ಸರ್ವೋತ್ಕೃಷ್ಟವೂ ಆದತಂಹ ಪರಬ್ರಹ್ಮಸ್ವರೂಪವನ್ನು ಬೋಧಿಸುವುದು.

೧೬. ಓಂಕಾರದಲ್ಲಿನ ಅಕಾರದಿಂದ ಭಗವಾನ್ ಬ್ರಹ್ಮನು ಜನಿಸಿದನು. ಉಕಾರವೆಂಬ ಒಂದು ಅಕ್ಷರದಿಂದ ಜಗತ್ಕಾರಣನಾದ ಹರಿಯು ಜನಿಸಿದನು; ಮಕಾರದಿಂದ ಭಗವಾನ್ ರುದ್ರನು ಜನಿಸಿದನು.

೧೭. ಅಕಾರಸ್ವರೂಪಬ್ರಹ್ಮನು ಸೃಷ್ಟಿಕರ್ತನಾದನು. ಉಕಾರಸ್ವರೂಪನಾದ ಹರಿಯು ಜಗತ್ತನ್ನು ಮೋಹಗೊಳಿಸುವವನಾದನು. ಮಕಾರಸ್ವರೂಪನಾದ ಶಿವನು ನಿತ್ಯವೂ ಅನುಗ್ರಹಿಸುವವನಾದನು.

೧೮-೧೯. ಮಕಾರಸ್ವರೂಪೀ ಶಿವನು ಜಗತ್ತಿಗೆ ಕಾರಣವಾದ ಬೀಜವುಳ್ಳವನು. ಅಕಾರಸ್ವರೂಪನಾದ ಬ್ರಹ್ಮನೇ ಬೀಜವು. ಪ್ರಕೃತಿ ಮತ್ತು ಪುರುಷರನ್ನು ಸೃಜಿಸುವ

**ಉಕಾರಾಖ್ಯೋ ಹರಿರ್ಯೋನಿಃ ಪ್ರಧಾನಪುರುಷೇಶ್ವರಃ ।**
**ಬೀಜೀ ಚ ಬೀಜಂ ತದ್ಯೋನಿರ್ನಾದಾಖ್ಯಶ್ಚ ಮಹೇಶ್ವರಃ ॥ ೧೯ ॥**

**ಬೀಜೀ ವಿಭಜ್ಯ ಚಾತ್ಮಾನಂ ಸ್ವೇಚ್ಛಯಾ ತು ವ್ಯವಸ್ಥಿತಃ ।**
**ಅಸ್ಯ ಲಿಂಗಾದಭೂದ್ಬೀಜಮಕಾರೋ ಬೀಜಿನಃ ಪ್ರಭೋ ॥ ೨೦ ॥**

**ಉಕಾರಯೋನೌ ನಿಃಕ್ಷಿಪ್ತಮವರ್ದ್ಧತ ಸಮಂತತಃ ।**
**ಸೌವರ್ಣಮಭವಚ್ಚಾಂಡಮಾವೇದ್ಯಂ ತದಲಕ್ಷಣಂ ॥ ೨೧ ॥**

**ಅನೇಕಾಬ್ದಂ ತಥಾ ಚಾಪ್ಸು ದಿವ್ಯಮಂಡಂ ವ್ಯವಸ್ಥಿತಂ ।**
**ತತೋ ವರ್ಷಸಹಸ್ರಾಂತೇ ದ್ವಿಧಾ ಕೃತಮಜೋದ್ಭವಂ ॥ ೨೨ ॥**

**ಅಂಡಮಪ್ಸು ಸ್ಥಿತಂ ಸಾಕ್ಷಾದ್ವ್ಯಾಘಾತೇನೇಶ್ವರೇಣ ತು ।**
**ತಥಾಽಸ್ಯ ಸುಶುಭಂ ಹೈಮಂ ಕಪಾಲಂ ಚೋರ್ಧ್ವಸಂಸ್ಥಿತಂ ॥ ೨೩ ॥**

---

ಉಕಾರಸ್ವರೂಪನಾದ ಹರಿಯು ಯೋನಿಯು (ಜಗತ್ತು ಜನಿಸುವ ಸ್ಥಾನವು.) ಬೀಜ, ಬೀಜವುಳ್ಳವನು, ಯೋನಿ ಈ ಮೂರಕ್ಕೂ ಸ್ವರೂಪನಾದವನು ನಾದರೂಪನಾದ ಪರಮೇಶ್ವರನು.

೨೦. ಬೀಜಿ (ಬೀಜವುಳ್ಳವನು) ಯಾದ ಶಿವನು ತನ್ನ ಸ್ವರೂಪವನ್ನು ವಿಭಾಗಿಸಿ ಸ್ವೇಚ್ಛೆಯಾಗಿ ಮುಂದೆ ಹೇಳುವಂತೆ ವಿಹರಿಸುತ್ತಲಿರುವನು. ಜಗದೊಡೆಯನಾದ ಆ ಬೀಜಿಯ ಲಿಂಗದಿಂದ ಅಕಾರ (ಬ್ರಹ್ಮ) ರೂಪವಾದ ಬೀಜ (ಜಗತ್ಕಾರಣ) ಉಂಟಾಯಿತು.

೨೧. ಆ ಬೀಜವನ್ನು ಬೀಜಿಯಾದ ಶಿವನು ಉಕಾರ (ವಿಷ್ಣು) ವೆಂಬ ಯೋನಿಯಲ್ಲಿ ಹಾಕಿದನು. ಅಲ್ಲಿ ಆ ಬೀಜವು ಬೆಳೆದು ಏಕರೂಪವಾದ ಮತ್ತು ಮಹತ್ತಾದ ಒಂದು ಸುವರ್ಣಮಯವಾದ ಗೋಳವಾಯಿತು.

೨೨. ಆಮೇಲಾಗೋಳವು ಬಹಳವರ್ಷಗಳ ಕಾಲ ಹಾಗೆಯೇ ನೀರಿನಲ್ಲಿ ಇದ್ದಿತು. ಬಳಿಕ ಒಂದುಸಾವಿರ ವರ್ಷಗಳಮೇಲೆ ಈಶ್ವರನು ಸಾಕ್ಷಾತ್ತಾಗಿ (ತಾನೇ) ಆ ಗೋಳವನ್ನು ಒಡೆದು, ಎರಡು ಭಾಗವಾಗಿ ಮಾಡಿದನು.

೨೩. ಆಗ ಆ ಅಂಡದ ಒಂದು ಸುವರ್ಣಭಾಗವು ಮೇಲೆ (ಆಕಾಶದಲ್ಲಿ) ನಿಂತಿತು. ಅದೇ ಸ್ವರ್ಗವು. ಮತ್ತೊಂದು ಕೆಳಗೆ ನಿಂತಿತು. ಅದು ಶಬ್ದ, ರಸ, ಸ್ಪರ್ಶ, ಗಂಧ, ರೂಪ, ಎಂಬ ಐದು ಸ್ವರೂಪವಾಗಿರುವ ಈ ಪೃಥಿವಿಯಾಯಿತು.

ಜಜ್ಞೇ ಸಾ ದ್ಯೌಸ್ತದಪರಂ ಪೃಥಿವೀ ಪಂಚಲಕ್ಷಣಾ ।
ತಸ್ಮಾದಂಡಾದ್ಭವೋ ಜಜ್ಞೇ ಕಕಾರಾಖ್ಯಶ್ಚತುರ್ಮುಖಃ ॥ ೨೪ ॥

ಸ ಸ್ರಷ್ಟಾ ಸರ್ವಲೋಕಾನಾಂ ಸ ಏವ ತ್ರಿವಿಧಃ ಪ್ರಭುಃ ।
ಏವಮೋಮೋಮಿತಿ ಪ್ರೋಕ್ತಮಿತ್ಯಾಹುರ್ಯಜುಷಾಂ ವರಾಃ ॥ ೨೫ ॥

ಯಜುಷಾಂ ವಚನಂ ಶ್ರುತ್ವಾ ಋಚಃ ಸಾಮಾನಿ ಸಾದರಂ ।
ಏವಮೇವ ಹರೇ ಬ್ರಹ್ಮನ್ನಿತ್ಯಾಹುಶ್ಚಾವಯೋಸ್ತದಾ ॥ ೨೬ ॥

ತತೋ ವಿಜ್ಞಾಯ ದೇವೇಶಂ ಯಥಾವಚ್ಛಕ್ತಿಸಂಭವೈಃ ।
ಮಂತ್ರಂ ಮಹೇಶ್ವರಂ ದೇವಂ ತುಷ್ಟಾವ ಸುಮಹೋದಯಂ ॥ ೨೭ ॥

ಏತಸ್ಮಿನ್ನಂತರೇಽನ್ಯಚ್ಚ ರೂಪಮದ್ಭುತಸುಂದರಂ ।
ದದರ್ಶ ಚ ಮಯಾ ಸಾರ್ಧಂ ಭಗವಾನ್ವಿಶ್ವಪಾಲಕಃ ॥ ೨೮ ॥

---

೨೪-೨೫. ಮತ್ತು ಆ ಗೋಳದಿಂದ ನಾಲ್ಕು ಮುಖಗಳುಳ್ಳ ಬ್ರಹ್ಮನು ಜನಿಸಿದನು. ಅವನು ಸಕಲ ಜಗತ್ತುಗಳಿಗೆ ಸೃಷ್ಟಿಕರ್ತನು, ಮತ್ತು ಲಯಸ್ಥಿತಿಗಳನ್ನೂ ಮಾಡುವನು. ಓಂಕಾರದ ಸ್ವರೂಪವು ಹೀಗೆಂದು ಯಜುರ್ವೇದದಲ್ಲಿ ಹೇಳಿರುವುದು.

೨೬. ಎಲೈ ನಾರದ, ಹೀಗೆಂದು, ಋಗ್ವೇದಪುರುಷ ಮತ್ತು ಸಾಮವೇದ ಪುರುಷ ಇವರು ಯಜುರ್ವೇದ ವಾಕ್ಯವನ್ನು ಕೇಳಿ ತಿಳಿದು ಎಲೈ, ಬ್ರಹ್ಮ ಮತ್ತು ಹರಿಗಳೆ! ಓಂಕಾರಸ್ವರೂಪವು ಹೀಗೆಯೇ ಇರುವುದೆಂದು ನಮಗೆ ಹೇಳಿದರು.

೨೭. ಆಮೇಲೆ ಹರಿಯು ತನ್ನ 'ಶಕ್ತಿಗನುಸಾರವಾಗಿ ಶಬ್ದಬ್ರಹ್ಮಸ್ವರೂಪನಾದ ಮಹೇಶ್ವರನನ್ನು ತಿಳಿದು, ಮಹಾಮಹಿಮನೂ ದೇವದೇವನೂ ಆದ ಆ ಮಹೇಶ್ವರನನ್ನು ಸ್ತೋತ್ರಮಾಡಿದನು.

೨೮-೩೦. ಈ ಮಧ್ಯದಲ್ಲಿ ನನಗೂ ಜಗತ್ಪಾಲಕನಾದ ಹರಿಗೂ ಸಹ ಇನ್ನೊಂದು ಅದ್ಭುತವೂ, ಸುಂದರವೂ ಆದ ಸ್ವರೂಪವು ಕಾಣಿಸಿತು. ಆ ಸ್ವರೂಪವು ಐದು ಮುಖಗಳುಳ್ಳದುದಾಗಿತ್ತು. ಹತ್ತು ಕೈಗಳಿದ್ದುವು. ಕರ್ಪೂರದಂತೆ ಬಿಳಿಯ ವರ್ಣವುಳ್ಳದುದು; ತುಂಬಾ ಕಾಂತಿಮತ್ತಾಗಿದ್ದಿತು. ಅನೇಕ ಬಗೆಯ ಆಭರಣ

**ಪಂಚವಕ್ತ್ರಂ ದಶಭುಜಂ ಗೌರಕರ್ಪೂರವನ್ಮುನೇ ।**
**ನಾನಾಕಾಂತಿಸಮಾಯುಕ್ತಂ ನಾನಾಭೂಷಣಭೂಷಿತಂ　　　॥ ೨೯ ॥**

**ಮಹೋದಾರಂ ಮಹಾವೀರ್ಯಂ ಮಹಾಪುರುಷಲಕ್ಷಣಂ ।**
**ತಂ ದೃಷ್ಟ್ವಾ ಪರಮಂ ರೂಪಂ ಕೃತಾರ್ಥೋऽಭೂನ್ಮಯಾ ಹರಿಃ ॥ ೩೦ ॥**

**ಅಥ ಪ್ರಸನ್ನೋ ಭಗವಾನ್ಮಹೇಶಃ ಪರಮೇಶ್ವರಃ ।**
**ದಿವ್ಯಂ ಶಬ್ದಮಯಂ ರೂಪಮಾಖ್ಯಾಯ ಪ್ರಹಸನ್ಸ್ಥಿತಃ　　　॥ ೩೧ ॥**

**ಅಕಾರಸ್ತಸ್ಯ ಮೂರ್ಧಾ ಹಿ ಲಲಾಟೋ ದೀರ್ಘ ಉಚ್ಯತೇ ।**
**ಇಕಾರೋ ದಕ್ಷಿಣಂ ನೇತ್ರಮೀಕಾರೋ ವಾಮಲೋಚನಂ　　　॥ ೩೨ ॥**

**ಉಕಾರೋ ದಕ್ಷಿಣಂ ಶ್ರೋತ್ರಮೂಕಾರೋ ವಾಮ ಉಚ್ಯತೇ ॥**
**ಋಕಾರೋ ದಕ್ಷಿಣಂ ತಸ್ಯ ಕಪೋಲಂ ಪರಮೇಷ್ಠಿನಃ　　　॥ ೩೩ ॥**

**ವಾಮಂ ಕಪೋಲಮೃಕಾರೋ ಲೃ ಲೄ ನಾಸಾಪುಟೇ ಉಭೇ ।**
**ಏಕಾರಶ್ಚೋಷ್ಠ ಊರ್ಧ್ವಶ್ಚ ಹ್ಯೈಕಾರಸ್ತ್ವಧರೋ ವಿಭೋಃ　　　॥ ೩೪ ॥**

---

ಗಳಿಂದ ಅಲಂಕೃತವಾಗಿತ್ತು. ತುಂಬಾ ಉನ್ನತವಾಗಿದ್ದು ಬಲಿಷ್ಠವಾಗಿದ್ದಿತು. ಮಹಾ ಪುರುಷಲಕ್ಷಣಗಳಿಂದ ಶೋಭಿಸುತ್ತಲಿದ್ದಿತು. ಇಂತಹ ಸ್ವರೂಪವನ್ನು ನೋಡಿ ನಾನೂ ಹರಿಯೂ ಸಹ ಆಗ ಕೃತಕೃತ್ಯರಾದೆವು.

೩೧. ಬಳಿಕ ಭಗವಂತನೂ ಪರಮೇಶ್ವರನೂ ಆದ ಮಹಾದೇವನು ಪ್ರಸನ್ನ ನಾಗಿ ದಿವ್ಯವಾದ ತನ್ನ ಶಬ್ದಬ್ರಹ್ಮಸ್ವರೂಪವನ್ನು ಬೀರುತ್ತಾ ಅಲ್ಲಿ ನಿಂತನು.

೩೨. ಅಕಾರವು ಆ ಶಿವನ (ಶಬ್ದಬ್ರಹ್ಮನ) ಶಿರಸ್ಸು. ಆಕಾರವು ಹಣೆಯು, ಇಕಾರವು ಬಲಗಣ್ಣು, ಈಕಾರವು ಎಡಗಣ್ಣು.

೩೩-೩೫. ದೇವದೇವನೂ ಶಬ್ದಬ್ರಹ್ಮಸ್ವರೂಪನೂ ಆದ ಆ ಶಿವನ ಬಲ ಕಿವಿಯು ಉಕಾರವು. ಊಕಾರವು ಎಡಗಿವಿಯು, ಋಕಾರವು ಬಲಗೆನ್ನೆಯು, ಎಡ ಗೆನ್ನೆಯು ೠಕಾರವು. ಲೃ, ಲೄ ಈ ವರ್ಣಗಳು ಕ್ರಮವಾಗಿ ಎರಡು ನಾಸಿಕಾ (ಮೂಗು) ಪುಟಗಳು. ಏಕಾರವು ಮೇಲುದುಟಿಯು, ಐಕಾರವು ಕೆಳದುಟಿಯು, ಓ

ಓಕಾರಶ್ಚ ತಥೌಕಾರೋ ದಂತಪಂಕ್ತಿದ್ವಯಂ ಕ್ರಮಾತ್ ।
ಅಮಸ್ತು ತಾಲುನೀ ತಸ್ಯ ದೇವದೇವಸ್ಯ ಶೂಲಿನಃ ॥ ೩೫ ॥

ಕಾದಿಪಂಚಾಕ್ಷರಾಣ್ಯಸ್ಯ ಪಂಚ ಹಸ್ತಾಶ್ಚ ದಕ್ಷಿಣೇ ।
ಚಾದಿಪಂಚಾಕ್ಷರಾಣ್ಯೇವಂ ಪಂಚ ಹಸ್ತಾಸ್ತು ವಾಮತಃ ॥ ೩೬ ॥

ಟಾದಿಪಂಚಾಕ್ಷರಂ ಪಾದಾಸ್ತಾದಿಪಂಚಾಕ್ಷರಂ ತಥಾ ।
ಪಕಾರ ಉದರಂ ತಸ್ಯ ಫಕಾರಃ ಪಾರ್ಶ್ವ ಉಚ್ಯತೇ ॥ ೩೭ ॥

ಬಕಾರೋ ವಾಮಪಾರ್ಶ್ವಸ್ತು ಭಕಾರಃ ಸ್ಕಂಧ ಉಚ್ಯತೇ ।
ಮಕಾರೋ ಹೃದಯಂ ಶಂಭೋರ್ಮಹಾದೇವಸ್ಯ ಯೋಗಿನಃ ॥ ೩೮ ॥

ಯಕಾರಾದಿಸಕಾರಾಂತಾ ವಿಭೋರ್ವೈ ಸಪ್ತಧಾತವಃ ।
ಹಕಾರೋ ನಾಭಿರೂಪೋ ಹಿ ಕ್ಷಕಾರೋ ಘ್ರಾಣ ಉಚ್ಯತೇ ॥ ೩೯ ॥

ಏವಂ ಶಬ್ದಮಯಂ ರೂಪಮಗುಣಸ್ಯ ಗುಣಾತ್ಮನಃ ।
ದೃಷ್ಟ್ವಾ ತಮುಮಯಾ ಸಾರ್ಧಂ ಕೃತಾರ್ಥೋಽಭೂನ್ಮಯಾ ಹರಿಃ ॥ ೪೦ ॥

---

ಓಔಕಾರಗಳೆರಡೂ ಕ್ರಮವಾಗಿ ಮೇಲುಕೆಳಗಿನ ಎರಡು ದಂತ ಪಂಗ್ತಿ (ಹಲ್ಲುಸಾಲು) ಗಳು. ಅಂ ಅಃ ಎಂಬ ಅಕ್ಷರಗಳು ಆ ಶಿವನ ಎರಡು ದವಡೆಗಳು.

೩೬-೩೯. ಕಕಾರಾದಿ ಐದು ಅಕ್ಷರಗಳು ದೇವನ ಐದು ಬಲಗೈಗಳು. ಚಕಾರಾದಿ ಐದು ಅಕ್ಷರಗಳು ಐದು ಎಡಗೈಗಳು. ಟಕಾರಾದಿ ಐದು ಅಕ್ಷರಗಳು ಐದು ಬಲಗಾಲುಗಳು. ತಕಾರಾದಿ ಐದು ಅಕ್ಷರಗಳು ಎಡಗಾಲುಗಳು. ಪಕಾರವು ಹೊಟ್ಟೆಯು. ಫಕಾರವು ಶರೀರದ ಬಲಭಾಗವು, (ಪಕ್ಕವು) ಬಕಾರವು ಎಡಭಾಗವು. ಭಕಾರವು ಭುಜವು. ಮಕಾರವು ಹೃದಯವು. ಯಕಾರ ಮೊದಲುಗೊಂಡು ಸಕಾರದವರೆಗಿನ ಏಳು ಅಕ್ಷರಗಳು ಮಹಾಯೋಗಿಯೂ, ಮಹಾದೇವನೂ ಆದ ಶಿವನ ಏಳು ಧಾತುಗಳು. ಹಕಾರವು ನಾಭಿ (ಹೊಕ್ಕಳು) ಯು. ಕ್ಷಕಾರವು ಘ್ರಾಣೇಂದ್ರಿಯವು.

೪೦. ಹೀಗೆ ನಿರ್ಗುಣನಾದರೂ ಮಾಯಾಮಯವಾದ ಗುಣಗಳುಳ್ಳ ಶಿವನ ಉಮೆಯೊಡನಿರುವ ಶಬ್ದಬ್ರಹ್ಮಸ್ವರೂಪವನ್ನು ನೋಡಿ ನಾನೂ ಹರಿಯೂ ಕೃತಾರ್ಥರಾದೆವು.

**ಏವಂ ದೃಷ್ಟ್ವಾ ಮಹೇಶಾನಂ ಶಬ್ದಬ್ರಹ್ಮತನುಂ ಶಿವಂ ।**
**ಪ್ರಣಮ್ಯ ಚ ಮಯಾ ವಿಷ್ಣುಃ ಪುನಶ್ಚಾಪಶ್ಯದೂರ್ಧ್ವತಃ　　　　॥ ೪೧ ॥**

**ಓಂಕಾರಪ್ರಭವಂ ಮಂತ್ರಂ ಕಲಾಪಂಚಕಸಂಯುತಂ ।**
**ಶುದ್ಧಸ್ಫಟಿಕಸಂಕಾಶಂ ಶುಭಾಷ್ಟತ್ರಿಂಶದಕ್ಷರಂ　　　　॥ ೪೨ ॥**

**ಮೇಧಾಕಾರಮಭೂದ್ಭೂಯಸ್ಸರ್ವಧರ್ಮಾರ್ಥಸಾಧಕಂ ।**
**ಗಾಯತ್ರೀಪ್ರಭವಂ ಮಂತ್ರಂ ಸಹಿತಂ ವಶ್ಯಕಾರಕಂ　　　　॥ ೪೩ ॥**

**ಚತುರ್ವಿಂಶತಿವರ್ಣಾಢ್ಯಂ ಚತುಷ್ಕಲಮನುತ್ತಮಂ ।**
**ಅಥ ಪಂಚಸಿತಂ ಮಂತ್ರಂ ಕಲಾಷ್ಟಕಸಮಾಯುತಂ　　　　॥ ೪೪ ॥**

---

೪೧. ಈ ರೀತಿಯಾಗಿ ನಾನೂ ವಿಷ್ಣುವೂ ಸಹ ಶಬ್ದಬ್ರಹ್ಮಸ್ವರೂಪನಾದ ಶಿವನನ್ನು ನೋಡಿ ತಿರುಗಿ ಮೇಲ್ಭಾಗದಲ್ಲಿ ಮುಂದೆ ಹೇಳುವ ಮಂತ್ರಸ್ವರೂಪಗಳನ್ನೂ ದರ್ಶನಮಾಡಿದೆವು.

೪೨. ಮೊದಲು ಓಂಕಾರದಿಂದ ಜನಿಸಿದಂತಹ, ಐದು ಕಲೆಗಳುಳ್ಳದುದೂ ಮೂವತ್ತೆಂಟು ಅಕ್ಷರಗಳುಳ್ಳದುದೂ, ಶುದ್ಧಸ್ಫಟಿಕದಂತೆ ಶುಭ್ರವಾದುದೂ ಆದ ಮಂತ್ರಸ್ವರೂಪವನ್ನು ನೋಡಿದೆವು.

೪೩. ಆಮೇಲೆ ಬುದ್ಧಿಸ್ವರೂಪವಾದುದೂ, ಸಕಲ ಧರ್ಮ ಮತ್ತು ಅರ್ಥಗಳನ್ನುಂಟುಮಾಡುವುದೂ, ಗಾಯತ್ರಿಯಿಂದ ಜನಿಸಿದುದೂ ಆದಂತಹ ಮಂತ್ರಸ್ವರೂಪವೊಂದನ್ನು ನೋಡಿದೆವು. ಆ ಮಂತ್ರವನ್ನು ಜಪಿಸಿದರೆ ಸಕಲವೂ ತನ್ನ ವಶವಾಗುವುದು. ಆ ಮಂತ್ರದಲ್ಲಿ ಇಪ್ಪತ್ತನಾಲ್ಕು ಅಕ್ಷರಗಳಿರುವುವು. ನಾಲ್ಕು ಕಲೆ (ಪಾದ) ಗಳಿರುವುವು. (ಅಥವಾ ಆ ಮಂತ್ರಕ್ಕೆ ಚತುಷ್ಕಾಲ ಮಂತ್ರವೆಂದು ಹೆಸರು.)

೪೪. ಮತ್ತೂ ಎಂಟುಕಲೆ (ಪಾದ) ಗಳುಳ್ಳದುದೂ, ಮೂವತ್ತು ಅಕ್ಷರಗಳುಳ್ಳದುದೂ ಆದಂತಹ ಪಂಚಸಿತವೆಂಬ ಮಂತ್ರಸ್ವರೂಪವೊಂದನ್ನು ನೋಡಿದೆವು. ಆ ಮಂತ್ರವು ಸಾಮಾನ್ಯವಾಗಿ ಶತ್ರುಹಿಂಸೆ ಮುಂತಾದ ಅಭಿಚಾರ (ಹಿಂಸಾಕರ್ಮ) ಗಳಿಗೆ ಉಪಯೋಗವಾದುದು.

ಆಭಿಚಾರಿಕಮತ್ಯರ್ಥಂ ಪ್ರಾಯಸ್ತ್ರಿಂಶಚ್ಛುಭಾಕ್ಷರಂ ।
ಯಜುರ್ವೇದಸಮಾಯುಕ್ತಂ ಪಂಚವಿಂಶಚ್ಛುಭಾಕ್ಷರಂ ॥ ೪೫ ॥

ಕಲಾಷ್ಟಕಸಮಾಯುಕ್ತಂ ಸುಶ್ವೇತಂ ಶಾಂತಿಕಂ ತಥಾ ।
ತ್ರಯೋದಶಕಲಾಯುಕ್ತಂ ಬಾಲಾದ್ಯೈಸ್ಸಹ ಲೋಹಿತಂ ॥ ೪೬ ॥

ಬಭೂವುರಸ್ಯ ಚೋತ್ಪತ್ತಿವೃದ್ಧಿಸಂಹಾರಕಾರಣಂ ।
ವರ್ಣಾ ಏಕಾಧಿಕಾಃ ಷಷ್ಟಿರಸ್ಯ ಮಂತ್ರವರಸ್ಯ ತು ॥ ೪೭ ॥

ಪುನರ್ಮೃತ್ಯುಂಜಯಂ ಮಂತ್ರಂ ಪಂಚಾಕ್ಷರಮತಃ ಪರಂ ।
ಚಿಂತಾಮಣಿಂ ತಥಾ ಮಂತ್ರಂ ದಕ್ಷಿಣಾಮೂರ್ತಿಸಂಜ್ಞಕಂ ॥ ೪೮ ॥

ತತಸ್ತತ್ತ್ವಮಸೀತ್ಯುಕ್ತಂ ಮಹಾವಾಕ್ಯಂ ಹರಸ್ಯ ಚ ।
ಪಂಚಮಂತ್ರಾಂಸ್ತಥಾ ಲಬ್ಧ್ವಾ ಜಜಾಪ ಭಗವಾನ್ಹರಿಃ ॥ ೪೯ ॥

---

೪೫. ಯಜುರ್ವೇದದಲ್ಲಿ ಪ್ರಸಿದ್ಧವಾದುದೂ, ಇಪ್ಪತ್ತೈದು ಅಕ್ಷರಗಳುಳ್ಳದುದೂ, ಎಂಟುಕಲೆಗಳುಳ್ಳದುದೂ, ಆದಂತಹ ಇನ್ನೊಂದು ಶುದ್ಧಮಂತ್ರ ಸ್ವರೂಪವನ್ನು ನಾನೂ ಹರಿಯೂ ನೋಡಿದೆವು. ಆ ಮಂತ್ರವು ಶಾಂತಿಕರ್ಮದಲ್ಲಿ ತುಂಬಾ ಉಪಯುಕ್ತವಾದುದು.

೪೬-೪೭. ಮತ್ತು ಬಾಲಾಮುಂತಾದ ಉಪಮಂತ್ರಗಳಿಂದ ಕೂಡಿದುದೂ ಹದಿಮೂರು ಕಲೆಗಳುಳ್ಳದುದೂ ಆದಂತಹ ಮತ್ತೊಂದು ಮಂತ್ರಸ್ವರೂಪವನ್ನು ನೋಡಿದೆವು. ಆ ಮಂತ್ರವು ಉತ್ಪತ್ತಿ, ವೃದ್ಧಿ, ನಾಶ ಇವುಗಳನ್ನುಂಟುಮಾಡುವಂತಹುದು. ಆ ಮಂತ್ರರಾಜಕ್ಕೆ ಅರವತ್ತೊಂದು ಅಕ್ಷರಗಳು.

೪೮-೪೯. ಆಮೇಲೆ ಮೃತ್ಯುಂಜಯಮಂತ್ರ, ಶಿವಪಂಚಾಕ್ಷರೀಮಂತ್ರ, ಚಿಂತಾಮಣಿಮಂತ್ರ, ದಕ್ಷಿಣಾಮೂರ್ತಿಮಂತ್ರ, "ತತ್ವಮಸಿ" ಎಂಬ ಶಿವನ ಅದ್ವೈತ ಮಹಾವಾಕ್ಯ, ಇವುಗಳ ಸ್ವರೂಪವೂ ನಮಗೆ ಲಭಿಸಿತು. ಆ ಬಳಿಕ, ಭಗವಾನ್ ಹರಿಯು ಆ ಐದು ಮಂತ್ರಗಳನ್ನು ಪಡೆದು ಜಪಿಸಿದನು.

**ಅಥ ದೃಷ್ಟ್ವಾ ಕಲಾವರ್ಣಮೃಗ್ಯಜುಸ್ಸಾಮರೂಪಿಣಂ ।**
**ಈಶಾನಮೀಶಮುಕುಟಂ ಪುರುಷಾಖ್ಯಂ ಪುರಾತನಂ ॥ ೫೦ ॥**

**ಅಘೋರಹೃದಯಂ ಹೃದ್ಯಂ ಸರ್ವಗುಹ್ಯಂ ಸದಾಶಿವಂ ।**
**ವಾಮಪಾದಂ ಮಹಾಪಾದಂ ಮಹಾಭೋಗೀಂದ್ರಭೂಷಣಂ ॥ ೫೧ ॥**

**ವಿಶ್ವತಃ ಪಾದವಂತಂ ತಂ ವಿಶ್ವತೋಽಕ್ಷಿಕರಂ ಶಿವಂ ।**
**ಬ್ರಹ್ಮಣೋಽಧಿಪತಿಂ ಸರ್ಗಸ್ಥಿತಿಸಂಹಾರಕಾರಣಂ ॥ ೫೨ ॥**

**ತುಷ್ಟಾವ ವಾಗ್ಭಿರಿಷ್ಟಾಭಿಸ್ಸಾಂಬಂ ವರದಮೀಶ್ವರಂ ।**
**ಮಯಾ ಚ ಸಹಿತೋ ವಿಷ್ಣುರ್ಭಗವಾಂಸ್ತುಷ್ಟಚೇತಸಾ ॥ ೫೩ ।**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಶಬ್ದಬ್ರಹ್ಮತನುವರ್ಣನೋ ನಾಮಾಷ್ಟಮೋಽಧ್ಯಾಯಃ**

---

೫೦-೫೩. ಅನಂತರ ನಾನೂ ವಿಷ್ಣುವೂ ಸಹ ಆ ಋಗ್ವೇದ, ಯಜುರ್ವೇದ ಸಾಮವೇದ ಇವುಗಳ ಸ್ವರೂಪಿಯಾದ ಶಿವನ ಶಬ್ದಬ್ರಹ್ಮಸ್ವರೂಪವನ್ನು ನೋಡಿ ಸರ್ವೇಶ್ವರನೂ, ಪುರುಷನೆಂದು ಹೆಸರುಳ್ಳವನೂ, ಎಂದರೆ ಮಾಯಾಮಯವಾ ಜೀವಸ್ವರೂಪವುಳ್ಳವನೂ, (ಇಲ್ಲವೇ ವಿರಾಟ್ಪುರುಷನೂ,) ಉತ್ಪತ್ತಿಯಿಲ್ಲದವನೂ ಶಾಂತಸ್ವರೂಪನೂ, ಮನೋಹರನೂ, ಪರಮರಹಸ್ಯನೂ, ಎಂದರೆ ಅಜ್ಞಾನಿಗೆ ತಿಳಿಯ ಲಶಕ್ಯನೂ, ಸದಾ ಮಂಗಳರೂಪನೂ, ದೇವದೇವನೂ, ದುಷ್ಟರನ್ನು ಶಿಕ್ಷಿಸುವವನೂ ಸರ್ಪರಾಜವೇ ಅಲಂಕಾರವಾಗುಳ್ಳವನೂ, ದಿಕ್ಕು ದಿಕ್ಕುಗಳನ್ನು ವ್ಯಾಪಿಸಿದ ಕಣ್ಣು ಕೈಗಳು ಕಾಲುಗಳುಳ್ಳ ವಿರಾಟ್ಸ್ವರೂಪನೂ, ಸೃಷ್ಟಿಕರ್ತನಾದವನಿಗೂ ಒಡೆಯನೂ ಸೃಷ್ಟಿಸ್ಥಿತಿಲಯಗಳಿಗೆ ಕಾರಣನೂ, ಎಲ್ಲಾ ಇಷ್ಟಾರ್ಥಗಳನ್ನು ಭಕ್ತರಿಗೆ ಅನುಗ್ರಹಿಸ ವವನೂ ಆದಂತಹ, ಪಾರ್ವತಿಯೊಡನಿರುವ ಶಿವನನ್ನು ಪ್ರಿಯವಾದ ವಾಕ್ಯಗಳಿಂ ಸಂತೋಷವಾಗಿ ಸ್ತುತಿಸಿದೆವು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲ ನೆಯ ಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ವಿಷ್ಣುವಿನ ಉತ್ಪತ್ತಿ ವರ್ಣನವೆಂಬ ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸೃಷ್ಟಿಖಂಡೇ

## ನವಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

**ಅಥಾಕರ್ಣ್ಯ ನುತಿಂ ವಿಷ್ಣುಲಕೃತಾಂ ಸ್ವಸ್ಯ ಮಹೇಶ್ವರಃ ।**
**ಪ್ರಾದುರ್ಬಭೂವ ಸುಪ್ರೀತಸ್ಸ ವಾಮಂ ಕರುಣಾನಿಧಿಃ ॥ ೧ ॥**

**ಪಂಚವಕ್ತ್ರಸ್ತ್ರಿನಯನೋ ಭಾಲಚಂದ್ರೋ ಜಟಾಧರಃ ।**
**ಗೌರವರ್ಣೋ ವಿಶಾಲಕ್ಷೋ ಭಸ್ಮೋದ್ಧೂಲಿತವಿಗ್ರಹಃ ॥ ೨ ॥**

---

### ಒಂಭತ್ತನೆಯ ಅಧ್ಯಾಯವು

೧ ಬ್ರಹ್ಮನು ಹೇಳತೊಡಗಿದನು:—ಆಮೇಲೆ ಕರುಣಾಶಾಲಿಯಾದ ಆ ಮಹೇಶ್ವರನು ವಿಷ್ಣುವು ಮಾಡಿದ ತನ್ನ ಸ್ತೋತ್ರವನ್ನು ಕೇಳಿ ಸುಪ್ರಸನ್ನನಾಗಿ, ತನ್ನೆಡಭಾಗದೊಡನೆ (ಉಮೆಯೊಡನೆ) ಪ್ರತ್ಯಕ್ಷನಾದನು.

೨-೩. ಆ ಪರಶಿವನ ವೈಭವವನ್ನೇನೆಂದು ಹೇಳಲಿ? ಆತನಿಗೆ ಐದು ಮುಖಗಳು. ಮೂರು ಕಣ್ಣುಗಳು. ಹಣೆಯ ಅಂಚಿನಲ್ಲಿ ಬಾಲಚಂದ್ರನು ಮೆರೆಯುತ್ತಿದ್ದನು. ಶುಭ್ರವಾದ ಮೈಬಣ್ಣ. ದೊಡ್ಡ ದೊಡ್ಡ ಕಣ್ಣುಗಳು. ಮೈಯೆಲ್ಲಾ ಭಸ್ಮದಿಂದ ಉದ್ಧೂಲಿತವಾಗಿತ್ತು. ಹತ್ತು ಕೈಗಳು, ಕಪ್ಪಾದ ಕೊರಳು. ನಾನಾವಿಧ

ದಶಬಾಹುರ್ನೀಲಗಲಃ ಸರ್ವಾಭರಣಭೂಷಿತಃ ।
ಸರ್ವಾಂಗಸುಂದರೋ ಭಸ್ಮತ್ರಿಪುಂಡ್ರಾಂಕಿತಮಸ್ತಕಃ ॥ ೩ ॥

ತಂ ದೃಷ್ಟ್ವಾ ತಾದೃಶಂ ದೇವಂ ಸವಾಮಂ ಪರಮೇಶ್ವರಂ ।
ತುಷ್ಟಾವ ಪುನರಿಷ್ಟಾಭಿರ್ವಾಗ್ಭಿರ್ವಿಷ್ಣುರ್ಮಯಾ ಸಹ ॥ ೪ ॥

ನಿಗಮಂ ಶ್ವಾಸರೂಪೇಣ ದದೌ ತಸ್ಮೈ ತತೋ ಹರಃ ।
ವಿಷ್ಣವೇ ಚ ಪ್ರಸನ್ನಾತ್ಮಾ ಮಹೇಶಃ ಕರುಣಾಕರಃ ॥ ೫ ॥

ತತೋ ಜ್ಞಾನಮುದಾತ್ತಸ್ಮೈ ರಹಸ್ಯಂ ಪರಮಾತ್ಮನೇ ।
ಪರಮಾತ್ಮಾ ಪುನರ್ಮಹ್ಯಂ ದತ್ತವಾನ್ಕೃಪಯಾ ಮುನೇ ॥ ೬ ॥

ಸಂಪ್ರಾಪ್ಯ ನಿಗಮಂ ವಿಷ್ಣುಃ ಪಪ್ರಚ್ಛ ಪುನರೇವ ತಂ ।
ಕೃತಾರ್ಥಸ್ಸಾಂಜಲಿರ್ನತ್ವಾ ಮಯಾ ಸಹ ಮಹೇಶ್ವರಂ ॥ ೭ ॥

---

ವಾದ ಒಡವೆಗಳು ಆತನನ್ನು ಅಲಂಕರಿಸಿದ್ದುವು. ಆತನ ಸರ್ವಾಂಗಗಳೂ ಸೌಂದರ್ಯದಿಂದ ಉಜ್ಜ್ವಲವಾಗಿದ್ದುವು. ಆತನ ಪ್ರಶಸ್ತವಾದ ಲಲಾಟವು, ಅಡ್ಡಡ್ಡವಾಗಿರುವ ಮೂರು ಭಸ್ಮರೇಖೆಗಳಿಂದ ಸುಶೋಭಿತವಾಗಿತ್ತು.

೪. ಆಗ ತನ್ನ ಅರ್ಧಾಂಗಿಯೊಡನೆ, ಅದ್ಭುತರೂಪದಿಂದ ಆವಿರ್ಭವಿಸಿದ ಆ ದೇವದೇವನಾದ ಶಿವನನ್ನು ಕಂಡು ಮತ್ತೆ ವಿಷ್ಣುವು ನನ್ನೊಡನೆ, ಪ್ರಿಯವಾದ ವಾಕ್ಯಗಳಿಂದ ಆತನನ್ನು ಸ್ತೋತ್ರಮಾಡಿದನು.

೫. ಬಳಿಕ ಕರುಣಾನಿಧಿಯಾದ ಆ ಮಹೇಶ್ವರನು ಪ್ರಸನ್ನವಾದ ಮನಸ್ಸುಳ್ಳವನಾಗಿ, ವಿಷ್ಣುವಿಗೆ ತನ್ನ ನಿಶ್ವಾಸರೂಪದಿಂದ ವೇದಗಳನ್ನು ಉಪದೇಶಿಸಿದನು.

೬. ಓ ಮುನೀಂದ್ರ, ಬಳಿಕ ಪರಮಾತ್ಮನಾದ ವಿಷ್ಣುವಿಗೆ ರಹಸ್ಯವಾದ ತತ್ತ್ವಜ್ಞಾನವನ್ನುಪದೇಶಿಸಿದನು. ಆ ಪರಮಾತ್ಮನೂ ಕೃಪೆಯಿಂದ ಅದನ್ನು ನನಗೆ ಇತ್ತನು.

೭. ಬಳಿಕ ವಿಷ್ಣುವು, ವೇದಗಳನ್ನೆಲ್ಲಾ ಪಡೆದು, ಕೃತಕೃತ್ಯನಾಗಿ, ಮುಕುಲಿತಹಸ್ತನಾಗಿ ನನ್ನೊಡನೆ ಆ ಮಹೇಶ್ವರನನ್ನು ನಮಸ್ಕರಿಸಿ ಮರಳಿ ಇಂತು ಕೇಳಿದನು.

॥ ವಿಷ್ಣುರುವಾಚ ॥

ಕಥಂ ಚ ತುಷ್ಯಸೇ ದೇವ ಮಯಾ ಪೂಜ್ಯಃ ಕಥಂ ಪ್ರಭೋ ।
ಕಥಂ ಧ್ಯಾನಂ ಪ್ರಕರ್ತವ್ಯಂ ಕಥಂ ವ್ರಜಸಿ ವಶ್ಯತಾಂ ॥ ೮ ॥

ಕಿಂ ಕರ್ತವ್ಯಂ ಮಹಾದೇವ ಹ್ಯಾವಾಭ್ಯಾಂ ತವ ಶಾಸನಾತ್ ।
ಸದಾ ಸದಾಜ್ಞಾಪಯ ನೌ ಪ್ರೀತ್ಯರ್ಥಂ ಕುರು ಶಂಕರ ॥ ೯ ॥

ಏತತ್ಸರ್ವಂ ಮಹಾರಾಜ ಕೃಪಾಂ ಕೃತ್ವಾವಯೋಃ ಪ್ರಭೋ ।
ಕಥನೀಯಂ ತಥಾನ್ಯಚ್ಚ ವಿಜ್ಞಾಯ ಸ್ವಾನುಗೌ ಶಿವ ॥ ೧೦ ॥

॥ ಬ್ರಹ್ಮೋವಾಚ ॥

ಇತ್ಯೇತದ್ವಚನಂ ಶ್ರುತ್ವಾ ಪ್ರಸನ್ನೋ ಭಗವಾನ್ಹರಃ ।
ಉವಾಚ ವಚನಂ ಪ್ರೀತ್ಯಾ ಸುಪ್ರಸನ್ನಃ ಕೃಪಾನಿಧಿಃ ॥ ೧೧ ॥

---

೮. ಓ ಪ್ರಭುವೇ, ನೀನು ಸುಪ್ರೀತನಾಗುವ ಬಗೆ ಹೇಗೆ? ನಿನ್ನನ್ನು ನಾನು ಎಂತು ಪೂಜಿಸಬೇಕು? ನಿನ್ನನ್ನು ಯಾವ ರೀತಿ ಧ್ಯಾನಿಸಬೇಕು! ನೀನು ಒಲಿಯುವ ರೀತಿಯಾದರೂ ಹೇಗೆ?

೯. ಓ ಮಂಗಲಕರ, ಓ ಮಹಾದೇವ! ನಿನ್ನ ಅಪ್ಪಣೆಯಂತೆ, ನಿನ್ನ ಪ್ರೀತಿಯನ್ನು ಅನವರತವೂ ಸಂಪಾದಿಸಲು, ನಾವೀರ್ವರೂ ಸದಾ ಏನನ್ನು ಆಚರಿಸಬೇಕು? ಆಜ್ಞಾಪಿಸು.

೧೦. ಓ ಮಹಾರಾಜ, ಓ ಪ್ರಭೂ, ಓ ಶಿವ, ನಾವೀರ್ವರೂ ನಿನ್ನನ್ನೇ ಆಶ್ರಯಿಸಿರುವವರೆಂದು ತಿಳಿದು, ನಮ್ಮಲ್ಲಿ ಕೃಪೆಯಿಟ್ಟು, ಇವೆಲ್ಲವನ್ನೂ ತಿಳಿಸುವುದಲ್ಲದೆ, ಮತ್ತೇನಿದ್ದರೂ ತಿಳಿಸು.

೧೧. ಕರುಣಾಶಾಲಿಯೂ, ಸುಪ್ರಸನ್ನನೂ, ಆದ ಆ ಭಗವಂತನು ನಮ್ಮೀ ಮಾತನ್ನು ಕೇಳಿ, ಪ್ರಸನ್ನಚಿತ್ತನಾಗಿ, ಪ್ರೀತಿಯಿಂದ ಈ ಮಾತನ್ನು ನುಡಿದನು.

॥ ಶ್ರೀಶಿವ ಉವಾಚ ॥

ಭಕ್ತ್ಯಾ ಚ ಭವತೋರ್ನೂನಂ ಪ್ರೀತೋऽಹಂ ಸುರಸತ್ತಮೌ ।
ಪಶ್ಯಂತಂ ಮಾಂ ಮಹಾದೇವಂ ಭಯಂ ಸರ್ವಂ ವಿಮುಂಚತಾಂ ॥ ೧೨ ॥

ಮಮ ಲಿಂಗಂ ಸದಾ ಪೂಜ್ಯಂ ಧ್ಯೇಯಂ ಚೈತಾದೃಶಂ ಮಮ ।
ಇದಾನೀಂ ದೃಶ್ಯತೇ ಯದ್ವತ್ತಥಾ ಕಾರ್ಯಂ ಪ್ರಯತ್ನತಃ ॥ ೧೩ ॥

ಪೂಜಿತೋ ಲಿಂಗರೂಪೇಣ ಪ್ರಸನ್ನೋ ವಿವಿಧಂ ಫಲಂ ।
ದಾಸ್ಯಾಮಿ ಸರ್ವಲೋಕೇಭ್ಯೋ ಮನೋಭೀಷ್ಟಾನ್ಯನೇಕಶಃ ॥ ೧೪ ॥

ಯದಾ ದುಃಖಂ ಭವೇತ್ತತ್ರ ಯುವಯೋಸ್ಸುರಸತ್ತಮೌ ।
ಪೂಜಿತೇ ಮಮ ಲಿಂಗೇ ಚ ತದಾ ಸ್ಯಾದ್ದುಃಖನಾಶನಂ ॥ ೧೫ ॥

ಯುವಾಂ ಪ್ರಸೂತೌ ಪ್ರಕೃತೇರ್ಮದೀಯಾಯಾ ಮಹಾಬಲೌ ।
ಗಾತ್ರಾಭ್ಯಾಂ ಸವ್ಯಸವ್ಯಾಭ್ಯಾಂ ಮಮ ಸರ್ವೇಶ್ವರಸ್ಯ ಹಿ ॥ ೧೬ ॥

---

೧೨. ಓ ದೇವಶ್ರೇಷ್ಠರೇ, ನಿಮ್ಮೀರ್ವರ ಭಕ್ತಿಗೆ ನಾನು ಮೆಚ್ಚಿದೆನು. ನಿಜವಾಗಿಯೂ ನಾನು ಸುಪ್ರೀತನಾದೆನು. ಮಹಾದೇವನಾದ ನನ್ನನ್ನು ನೋಡಿ. ನಿಮ್ಮ ಭಯವೆಲ್ಲವನ್ನೂ ಬಿಟ್ಟುಬಿಡಿರಿ,

೧೩. ಯಾವಾಗಲೂ ಈ ನನ್ನ ಲಿಂಗವನ್ನು ಪೂಜಿಸಬೇಕು. ಈಗ ಯಾವ ರೀತಿ ಈ ಲಿಂಗವು ಕಂಡುಬರುತ್ತಿದೆಯೋ ಅದರಂತೆಯೇ ಅದನ್ನು ಧ್ಯಾನಿಸಬೇಕು. ಹಾಗೆಯೇ ಅದನ್ನು ನಿರ್ಮಿಸಬೇಕು.

೧೪. ಈ ಲಿಂಗಸ್ವರೂಪದಿಂದ ನನ್ನನ್ನು ಅರ್ಚಿಸಿದರೇನೇ ನಾನು ಒಲಿದು ನಾನಾವಿಧವಾದ ಫಲಗಳನ್ನೂ, ಪ್ರಜೆಗಳೆಲ್ಲರ ಇಷ್ಟಾರ್ಥಗಳನ್ನೂ ಬಹು ವಿಧವಾಗಿ ನೀಡುವೆನು.

೧೫. ಎಲೈ ಸುರಶ್ರೇಷ್ಠರೇ, ನಿಮ್ಮೀರ್ವರಿಗೆ ಒಂದು ವೇಳೆ ದುಃಖವೊದಗಿದ ಪಕ್ಷದಲ್ಲಿ, ಆಗ ನನ್ನ ಲಿಂಗವನ್ನು ಪೂಜಿಸಿದರೆ ನಿಮ್ಮ ದುಃಖವೆಲ್ಲವೂ ಪರಿಹಾರವಾಗುವುದು.

೧೬. ಓ ಮಹಾಬಲರೇ, ನೀವೀರ್ವರೂ ನನ್ನ ಮಾಯೆಯ ಬದೆಸೆಯಿಂದಲೇ ಸರ್ವೇಶ್ವರನಾದ ನನ್ನ ಎಡಬಲ ಭಾಗಗಳಿಂದ ಹುಟ್ಟಿರುವಿರಿ.

ಅಯಂ ಮೇ ದಕ್ಷಿಣಾತ್ಪಾರ್ಶ್ವಾದ್ಬ್ರಹ್ಮಾ ಲೋಕಪಿತಾಮಹಃ ।
ವಾಮಪಾರ್ಶ್ವಾಚ್ಚ ವಿಷ್ಣುಸ್ತ್ವಂ ಸಮುತ್ಪನ್ನಃ ಪರಾತ್ಮನಃ ॥ ೧೭ ॥

ಪ್ರೀತೋಽಹಂ ಯುವಯೋಸ್ಸಮ್ಯಗ್ವರಂ ದದ್ಯಾಂ ಯಥೇಪ್ಸಿತಂ ।
ಮಯಿ ಭಕ್ತಿರ್ದೃಢಾ ಭೂಯಾದ್ಯುವಯೋರಭ್ಯನುಜ್ಞಯಾ ॥ ೧೮ ॥

ಪಾರ್ಥಿವೀಂ ಚೈವ ಮನ್ಮೂರ್ತಿಂ ವಿಧಾಯ ಕುರುತಾಂ ಯುವಾಂ ।
ಸೇವಾಂ ಚ ವಿವಿಧಾಂ ಪ್ರಾಜ್ಞೌ ಕೃತ್ವಾ ಸುಖಮವಾಪ್ಸ್ಯಥಃ ॥ ೧೯ ॥

ಬ್ರಹ್ಮನ್ಸೃಷ್ಟಿಂ ಕುರು ತ್ವಂ ಹಿ ಮದಾಜ್ಞಾಪರಿಪಾಲಕಃ ।
ವತ್ಸ ವತ್ಸ ಹರೇ ತ್ವಂ ಚ ಪಾಲಯೈವಂ ಚರಾಚರಂ ॥ ೨೦ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ನೌ ಪ್ರಭುಸ್ತಾಭ್ಯಾಂ ಪೂಜಾವಿಧಿಮದಾಚ್ಛುಭಾಂ ।
ಯೇನೈವ ಪೂಜಿತಶ್ಶಂಭುಃ ಫಲಂ ಯಚ್ಛತ್ಯನೇಕಶಃ ॥ ೨೧ ॥

---

೧೭. ಪರಮಪುರುಷವಾದ ನನ್ನ ಬಲಪಾರ್ಶ್ವದಿಂದ ಮೂರು ಲೋಕಗಳಿಗೂ ಪಿತಾಮಹನೆನಿಸಿದ ಈ ಬ್ರಹ್ಮನೂ, ಎಡಗಡೆಯ ಪಾರ್ಶ್ವದಿಂದ ವಿಷ್ಣುವಾದ ನೀನೂ, ಹುಟ್ಟಿದಿರಿ.

೧೮. ನಿಮ್ಮ ವಿಷಯದಲ್ಲಿ ನಾನು ಬಹಳ ಸುಪ್ರೀತನಾಗಿದೇನೆ. ನಿಮಗೆ ಇಷ್ಟವಾದ ವರಗಳನ್ನು ನೀಡುವೆನು. ನನ್ನ ಒಪ್ಪಿಗೆಯಂತೆ ನಿಮ್ಮೀರ್ವರಿಗೂ ನನ್ನಲ್ಲಿ ದೃಢವಾದ ಭಕ್ತಿಯು ನೆಲಸಲಿ.

೧೯. ಎಲೈ ಪ್ರಾಜ್ಞರೇ, ಮಣ್ಣಿನಿಂದಲೇ ನನ್ನ ಮೂರ್ತಿಯನ್ನು ಮಾಡಿ, ಅದಕ್ಕೆ ನಾನಾವಿಧವಾದ ಸೇವೆಯನ್ನು ಸಲ್ಲಿಸಿರಿ. ನೀವು ಸುಖವನ್ನು ಹೊಂದುವಿರಿ.

೨೦. ಎಲೈ ಬ್ರಹ್ಮನೇ, ನೀನು ನನ್ನ ಅಪ್ಪಣೆಯನ್ನು ಪರಿಪಾಲಿಸುತ್ತಾ ಜಗತ್ತನ್ನು ಸೃಷ್ಟಿಸು. ಓ ವತ್ಸ ಹರಿ, ಹೀಗೆಯೇ, ನೀನೂ, ಚರಾಚರಾತ್ಮಕವಾದ ಈ ಜಗತ್ತನ್ನು ನನ್ನ ಅಪ್ಪಣೆಯಂತೆ ಪಾಲಿಸುತ್ತಿರು.

೨೧. ಹೀಗೆಂಬುದಾಗಿ ಆ ಪ್ರಭುವು ನಮ್ಮನ್ನು ಕುರಿತು ನುಡಿದು, ಯಾವ ವಿಧಿಯನ್ನು ಅನುಸರಿಸಿ ಪೂಜಿಸಲು, ಆ ಶಂಭುವು ನಾನಾ ಮುಖವಾಗಿ ಫಲಗಳನ್ನು ಕೊಡುವನೋ ಅಂಥ ಶುಭಕರವಾದ ಪೂಜಾವಿಧಿಯನ್ನು ನಮಗಿತ್ತನು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಶ್ಶಂಭೋರ್ವರ್ಯಾ ಚ ಸಹಿತೋ ಹರಿಃ ।
ಪ್ರತ್ಯುವಾಚ ಮಹೇಶಾನಂ ಪ್ರಣಿಪತ್ಯ ಕೃತಾಂಜಲಿಃ ॥ ೨೨ ॥

॥ ವಿಷ್ಣುರುವಾಚ ॥

ಯದಿ ಪ್ರೀತಿಃ ಸಮುತ್ಪನ್ನಾ ಯದಿ ದೇಯೋ ವರಶ್ಚ ನೌ ।
ಭಕ್ತಿರ್ಭವತು ನೌ ನಿತ್ಯಂ ತ್ವಯಿ ಚಾವ್ಯಭಿಚಾರಿಣೀ ॥ ೨೩ ॥

ತ್ವಮಪ್ಯವತರಸ್ವಾದ್ಯ ಲೀಲಯಾ ನಿರ್ಗುಣೋಽಪಿ ಹಿ ।
ಸಹಾಯಂ ಕುರು ನೌ ತಾತ ತ್ವಂ ಪರಃ ಪರಮೇಶ್ವರಃ ॥ ೨೪ ॥

ಆವಯೋರ್ದೇವದೇವೇಶ ವಿವಾದಮಪಿ ಶೋಭನಂ ।
ಇಹಾಗತೋ ಭವಾನ್ಯಸ್ಮಾದ್ವಿವಾದಶಮನಾಯ ನೌ ॥ ೨೫ ॥

॥ ಬ್ರಹ್ಮೋವಾಚ ॥

ತಸ್ಯ ತದ್ವಚನಂ ಶ್ರುತ್ವಾ ಪುನಃ ಪ್ರಾಹ ಹರೋ ಹರಿಂ ।
ಪ್ರಣಿಪತ್ಯ ಸ್ಥಿತಂ ಮೂರ್ಧ್ನಾ ಕೃತಾಂಜಲಿಪುಟಃ ಸ್ವಯಂ ॥ ೨೬ ॥

---

೨೨. ಹೀಗೆ ಶಿವನಾಡಿದ ಮಾತನ್ನು ಕೇಳಿ ವಿಷ್ಣುವು ಆ ಮಹೇಶ್ವರನನ್ನು ನನ್ನೊಡನೆ ನಮಸ್ಕರಿಸಿ, ಕೈಮುಗಿದುಕೊಂಡು, ಇಂತೆಂದನು.

೨೩. ನಿನಗೆ ನಮ್ಮಲ್ಲಿ ಪ್ರೀತಿಯುಂಟಾಗಿ ವರವನ್ನು ಕೊಡಬಯಸಿದಲ್ಲಿ ನಮ್ಮಿಬ್ಬರಿಗೂ ನಿನ್ನೊಬ್ಬನಲ್ಲಿಯೇ, ಶಾಶ್ವತವಾಗಿ ಭಕ್ತಿಯು ನೆಲಸುವಂತೆ ಅನುಗ್ರಹಿಸು.

೨೪. ಓ ದೇವ, ನೀನು ನಿರ್ಗುಣನಾಗಿದ್ದರೂ, ನೀನೂ ಸಹ ಲೀಲೆಯಿಂದ ಈಗ ಅವತರಿಸಿ. ನಮ್ಮಿಬ್ಬರಿಗೂ ಸಹಾಯವನ್ನು ಮಾಡು. ನೀನು ಸಾಕ್ಷಾತ್ಪರಮೇಶ್ವರನು.

೨೫ ಓ ದೇವಾಧಿದೇವ, ನಾವೀರ್ವರೂ ಜಗಳವಾಡಿದುದು ಒಳ್ಳೆಯದೇ ಆಯಿತು. ಅದನ್ನು ನಿವಾರಿಸಲೆಂದೇ ಅಲ್ಲವೇ ನೀನು ಇಲ್ಲಿ ಅವತರಿಸಿದುದು ?

೨೬. ಇಂತೆಂದು ನುಡಿದ ಹರಿಯ ಮಾತನ್ನು ಕೇಳಿ, ತನಗೆ ತಲೆಬಾಗಿ ನಮಸ್ಕರಿಸಿ, ಬದ್ಧಾಂಜಲಿಪುಟನಾಗಿ ನಿಂತಿರುವ ಆತನನ್ನು ನೋಡಿ, ಮರಳಿ ಶಿವನಿಂತೆಂದನು.

॥ ಶ್ರೀಮಹೇಶ ಉವಾಚ ॥

**ಪ್ರಲಯಸ್ಥಿತಿಸರ್ಗಾಣಾಂ ಕರ್ತಾಹಂ ಸಗುಣೋಽಗುಣಃ ।**
**ಪರಬ್ರಹ್ಮ ನಿರ್ವಿಕಾರೀ ಸಚ್ಚಿದಾನಂದಲಕ್ಷಣಃ ॥ ೨೭ ॥**

**ತ್ರಿಧಾ ಭಿನ್ನೋ ಹ್ಯಹಂ ವಿಷ್ಣೋ ಬ್ರಹ್ಮವಿಷ್ಣುಹರಾಖ್ಯಯಾ ।**
**ಸರ್ಗರಕ್ಷಾಲಯಗುಣೈರ್ನಿಷ್ಕಲೋಽಹಂ ಸದಾ ಹರೇ । ॥ ೨೮ ॥**

**ಸ್ತುತೋಽಹಂ ಯತ್ತ್ವಯಾ ವಿಷ್ಣೋ ಬ್ರಹ್ಮಣಾ ಮೇಽವತಾರಣೇ ।**
**ಪ್ರಾರ್ಥನಾಂ ತಾಂ ಕರಿಷ್ಯಾಮಿ ಸತ್ಯಾಂ ಯದ್ಭಕ್ತವತ್ಸಲಃ ॥ ೨೯ ॥**

**ಮದ್ರೂಪಂ ಪರಮಂ ಬ್ರಹ್ಮನ್ನೀದೃಶಂ ಭವದಂಗತಃ ।**
**ಪ್ರಕಟೀಭವಿತಾ ಲೋಕೇ ನಾಮ್ನಾ ರುದ್ರಃ ಪ್ರಕೀರ್ತಿತಃ ॥ ೩೦ ॥**

---

೨೭. ನಿರ್ಗುಣನೂ, ನಿರ್ವಿಕಾರನೂ, ಸಚ್ಚಿದಾನಂದ ಸ್ವರೂಪನೂ, ಪರಬ್ರಹ್ಮನೂ ಎನಿಸಿದ ನಾನು, ಸಗುಣಸ್ವರೂಪದಿಂದ ಸೃಷ್ಟಿ, ಸ್ಥಿತಿ, ಲಯಗಳನ್ನು ನೆರವೇರಿಸುವೆನು.

೨೮ ಓ ಹರಿ, ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾದ ಸತ್ವ, ರಜಸ್ತಮೋಗುಣಗಳ ವಶದಿಂದ, ನಿತ್ಯವೂ ನಿಷ್ಕಲನಾದ ನಾನು, ಬ್ರಹ್ಮ, ವಿಷ್ಣು, ಹರರೆಂಬ, ಹೆಸರಿನಿಂದ ಮೂರಾಗಿ ವಿಭಾಗವಾಗಿರುವೆನು.

೨೯. ಎಲೈ ವಿಷ್ಣುವೇ, ನೀನೂ, ಬ್ರಹ್ಮನೂ, ನನ್ನನ್ನು ಅವತರಿಸುವಂತೆ ಸ್ತೋತ್ರಮಾಡಿರುವಿರಿ ನಿಮ್ಮ ಆ ಪ್ರಾರ್ಥನೆಯನ್ನು ಭಕ್ತವತ್ಸಲನಾದ ನಾನು ನಡೆಸಿಕೊಡುವೆನು.

೩೦. ಎಲೈ ಬ್ರಹ್ಮನೇ, ಶ್ರೇಷ್ಠವಾದ ನನ್ನೀರೂಪದಂತೆಯೇ ನಿನ್ನ ಅವಯವದಿಂದ ಮುಂದೆ ನನ್ನ ಸ್ವರೂಪವು ಪ್ರಕಟವಾಗುವುದು. ಆ ಮೂರ್ತಿಗೆ ಲೋಕದಲ್ಲಿ ರುದ್ರನೆಂದು ಹೆಸರಾಗುವುದು.

ಮದಂಶಾತ್ತಸ್ಯ ಸಾಮರ್ಥ್ಯಂ ನ್ಯೂನಂ ನೈವ ಭವಿಷ್ಯತಿ ।
ಯೋऽಹಂ ಸೋऽಹಂ ನ ಭೇದೋऽಸ್ತಿ ಪೂಜಾವಿಧಿವಿಧಾನತಃ ॥ ೩೧ ॥

ಯಥಾ ಚ ಜ್ಯೋತಿಷಸ್ಸಂಗಾಜ್ಜಲಾದೇಃ ಸ್ಪರ್ಶತಾ ನ ವೈ ।
ತಥಾ ಮಮಾಗುಣಸ್ಯಾಪಿ ಸಂಯೋಗಾದ್ಬಂಧನಂ ನ ಹಿ ॥ ೩೨ ॥

ಶಿವರೂಪಂ ಮಮೈತಚ್ಚ ರುದ್ರೋऽಪಿ ಶಿವವತ್ತದಾ ।
ನ ತತ್ರ ಪರಭೇದೋ ವೈ ಕರ್ತವ್ಯಶ್ಚ ಮಹಾಮುನೇ ॥ ೩೩ ॥

ವಸ್ತುತೋ ಹ್ಯೇಕರೂಪಂ ಹಿ ದ್ವಿಧಾ ಭಿನ್ನಂ ಜಗತ್ಯುತ ।
ಅತೋ ನ ಭೇದೋ ವಿಜ್ಞೇಯಃ ಶಿವೇ ರುದ್ರೇ ಕದಾಚನ ॥ ೩೪ ॥

ಸುವರ್ಣಸ್ಯ ತಥೈಕಸ್ಯ ವಸ್ತುತ್ವಂ ನೈವ ಗಚ್ಛತಿ ।
ಅಲಂಕೃತಿಕೃತೇ ದೇವ ನಾಮಭೇದೋ ನ ವಸ್ತುತಃ ॥ ೩೫ ॥

---

೩೧. ನನಗಿಂತಲೂ ಯಾವ ಅಂಶದಲ್ಲಿಯೂ ಸಾಮರ್ಥ್ಯವು ಆತನಿಗೆ ಕಡಿಮೆಯಾಗಿರುವುದಿಲ್ಲ. ಆತನೇ ರುದ್ರನು. ರುದ್ರನೇ ನಾನು. ಪೂಜೆಯಲ್ಲೂ, ವಿಧಿಯಲ್ಲೂ, ಕ್ರಮದಲ್ಲೂ, ನಮ್ಮೀರ್ವರಿಗೂ ಯಾವ ಭೇದವೂ ಇಲ್ಲ.

೩೨. ಯಾವರೀತಿ ತಣ್ಣಗಿರುವ ನೀರು, ಬೆಂಕಿಯ ಸಂಬಂಧದಿಂದ ಬಿಸಿಯೇರಿ ಯಾರೂ ಮುಟ್ಟದಂತಾಗುವುದೋ ಅದರಂತೆ ನಿರ್ಗುಣನಾದ ನನ್ನ ಸಂಬಂಧದಿಂದ ಆತನಿಗೆ ಬಂಧನವಿಲ್ಲವು.

೩೩ ಈಗ ತೋರುತ್ತಿರುವುದೇ, ನನ್ನ ಶಿವಸ್ವರೂಪ. ರುದ್ರನ ಸ್ವರೂಪವೂ ಶಿವನಂತೆಯೇ. ನಮ್ಮೀರ್ವರಿಗೂ ಭೇಧವನ್ನೆಂದಿಗೂ ಕಲ್ಪಿಸಬಾರದು.

೩೪. ವಸ್ತುತಃ ಏಕರೂಪವಾಗಿ ಇರುವುದೇ ಈ ಜಗತ್ತಿನಲ್ಲಿ ಎರಡಾಗಿ ತೋರುತ್ತದೆ. ಆದ್ದರಿಂದ ಶಿವನಲ್ಲಿಯೂ ರುದ್ರನಲ್ಲಿಯೂ ಭೇದವನ್ನೆಣಿಸಬಾರದು.

೩೫. ಚಿನ್ನದಿಂದ ಮಾಡಲ್ಪಟ್ಟ ಒಡವೆಗಳು ನಾನಾ ತೆರನಾಗಿದ್ದರೂ ಯಾವ ರೀತಿ ಚಿನ್ನವು ಮಾತ್ರ ಬದಲಾಯಿಸದೆ, ಒಂದೇ ರೂಪವಾಗಿರುವುದೋ, ಅದೇ ರೀತಿ ಹೆಸರಿನಲ್ಲಿ ಮಾತ್ರ ವ್ಯತ್ಯಾಸವೇ ಹೊರತು, ವಸ್ತುತಃ ಭೇದವಿಲ್ಲ.

ಯಥೈಕಸ್ಯಾ ಮೃದೋ ಭೇದೇ ನಾನಾಪಾತ್ರೇ ನ ವಸ್ತುತಃ ।
ಕಾರಣಸ್ಯೈವ ಕಾರ್ಯೇ ಚ ಸನ್ನಿಧಾನಂ ನಿದರ್ಶನಂ ॥ ೩೬ ॥

ಜ್ಞಾತವ್ಯಂ ಬುಧವರ್ಯೈಶ್ಚ ನಿರ್ಮಲಜ್ಞಾನಿಭಿಃ ಸುರೈಃ ।
ಏವಂ ಜ್ಞಾತ್ವಾ ಭವದ್ಭ್ಯಾಂ ತು ನ ದೃಶ್ಯಂ ಭೇದಕಾರಣಂ ॥ ೩೭ ॥

ವಸ್ತುವತ್ಸರ್ವದೃಶ್ಯಂ ಚ ಶಿವರೂಪಂ ಮತಂ ಮಮ ।
ಅಹಂ ಭವಾನಜಶ್ಚೈವ ರುದ್ರೋ ಯೋಽಯಂ ಭವಿಷ್ಯತಿ ॥ ೩೮ ॥

ಏಕರೂಪಾ ನ ಭೇದಸ್ತು ಭೇದೇ ವೈ ಬಂಧನಂ ಭವೇತ್ ।
ತಥಾಪಿ ಚ ಮದೀಯಂ ಹಿ ಶಿವರೂಪಂ ಸನಾತನಂ ॥ ೩೯ ॥

---

೩೬, ಮಣ್ಣಿನಿಂದ ಮಾಡಿದ ನಾನಾ ವಿಧವಾದ ಪಾತ್ರೆಗಳು ಬೇರೆ ಬೇರೆ ಹೆಸರು, ಆಕಾರಗಳನ್ನು ಪಡೆದರೂ, ಕಾರಣಭೂತವಾದ ಮಣ್ಣೇ ಅಲ್ಲದೆ ಹೇಗೆ ಬೇರೆ ಯಾಗಲಾರದೋ ಹಾಗೆ ನಮ್ಮೀರ್ವರಿಗೂ ಭೇಧವಿಲ್ಲ. ಕಾರ್ಯದಲ್ಲಿ ಕಾರಣವು ಅಡಗಿರುವುದೇ ಇದಕ್ಕೆ ಉದಾಹರಣೆ.

೩೭. ಎಲೈ ದೇವತೆಗಳಿರಾ, ನಿರ್ಮಲವಾದ ಜ್ಞಾನವುಳ್ಳ ವಿದ್ವಾಂಸರು ಈ ರೀತಿ ತಿಳಿಯಬೇಕು. ನೀವು ಈರೀತಿ ತಿಳಿದು ನನಗೂ ರುದ್ರನಿಗೂ ಭೇದವನ್ನು ಹುಡಕಬೇಡಿ. ಕಣ್ಣಿಗೆ ಕಾಣುವ ಎಲ್ಲ ವಸ್ತುವೂ ವಸ್ತುತಃ ನನ್ನ ಶಿವಸ್ವರೂಪ ವೆಂದೇ ತಿಳಿಯಿರಿ.

೩೮. ನಾನೂ, ನೀನೂ, ಬ್ರಹ್ಮನೂ, ಮುಂದೆ ಅವತರಿಸುವ ರುದ್ರನೂ ಎಲ್ಲರೂ ಒಂದೇ ರೂಪವೆಂದು ತಿಳಿಯಿರಿ. ಭೇದವಿಲ್ಲ, ನಮ್ಮಲ್ಲಿ ಭೇಧವನ್ನೆಣಿಸಿದರೆ, ಮಾಯಾಬಂಧನಕ್ಕೆ ಸಿಲುಕಿ ತೊಳಲಬೇಕಾದೀತು.

೩೯-೪೦. ಹಾಗಿದ್ದರೂ ಎಲ್ಲದಕ್ಕೂ ಮೂಲಭೂತವಾದ ಈ ನನ್ನ ಶಿವಸ್ವರೂ ಪವೇ, ಸತ್ಯಸ್ವರೂಪವೂ, ಜ್ಞಾನಸ್ವರೂಪವೂ, ಅನಂತವಾದುದೂ, ಸನಾತನವಾದುದೂ

ಮೂಲೀಭೂತಂ ಸದೋಕ್ತಂ ಚ ಸತ್ಯಜ್ಞಾನಮನಂತಕಂ ।
ಏವಂ ಜ್ಞಾತ್ವಾ ಸದಾ ಧ್ಯೇಯಂ ಮನಸಾ ಚೈವ ತತ್ತ್ವತಃ ॥ ೪೦ ॥

ಶ್ರೂಯತಾಂ ಚೈವ ಭೋ ಬ್ರಹ್ಮನ್ಯದ್ಗೋಪ್ಯಂ ಕಥ್ಯತೇ ಮಯಾ ।
ಭವಂತೌ ಪ್ರಕೃತೇರ್ಯಾತೌ ನಾಯಂ ವೈ ಪ್ರಕೃತೇಃ ಪುನಃ ॥ ೪೧ ॥

ಮದಾಜ್ಞಾ ಜಾಯತೇ ತತ್ರ ಬ್ರಹ್ಮಣೋ ಭ್ರುಕುಟೇರಹಂ ।
ಗುಣೇಷ್ವಪಿ ಯಥಾ ಪ್ರೋಕ್ತಸ್ತಾಮಸಃ ಪ್ರಕೃತೋ ಹರಃ ॥ ೪೨ ॥

ವೈಕಾರಿಕಶ್ಚ ವಿಜ್ಞೇಯೋ ಯೋऽಹಂಕಾರ ಉದಾಹೃತಃ ।
ನಾಮತೋ ವಸ್ತುತೋ ನೈವ ತಾಮಸಃ ಪರಿಚಕ್ಷ್ಯತೇ ॥ ೪೩ ॥

ಏತಸ್ಮಾತ್ಕಾರಣಾದ್ಬ್ರಹ್ಮನ್ಕರಣೀಯಮಿದಂ ತ್ವಯಾ ।
ಸೃಷ್ಟಿಕರ್ತಾ ಭವ ಬ್ರಹ್ಮನ್ಸೃಷ್ಟೇಶ್ಚ ಪಾಲಕೋ ಹರಿಃ ॥ ೪೪ ॥

---

ಎಂದು ಭಾವಿಸಲ್ಪಟ್ಟಿದೆ. ಹೀಗೆ ತಿಳಿದುಕೊಂಡು, ಯಾವಾಗಲೂ ಮನಸ್ಸಿನಲ್ಲಿ ತತ್ವಕ್ಕನುಸಾರವಾಗಿ ಧ್ಯಾನಿಸಬೇಕು.

೪೧. ಓ ಬ್ರಹ್ಮಜ್ಞ, ನಾನು ಹೇಳುವೀರಹಸ್ಯವನ್ನು ಕೇಳು, ನೀವಿಬ್ಬರೂ ಪ್ರಕೃತಿಯ ದೆಸೆಯಿಂದ ಹುಟ್ಟಿದಿರಿ. ಆದರೆ, ಈ ರುದ್ರನು ಪ್ರಕೃತಿಯಿಂದ ಹುಟ್ಟಿದವನಲ್ಲ. ಅಲ್ಲಿ ನನ್ನಾಜ್ಞೆಯು ಮಾತ್ರ, ಬ್ರಹ್ಮನ ಹುಬ್ಬಿನಿಂದ ನಾನೇ ಅವತರಿಸುವೆನು.

೪೨-೪೩. ಪ್ರಕೃತನಾದ ಈ ಹರನೂ, ಹಿಂದೆ ವೈಕಾಲಿಕವೆಂದು ಹೇಳಲ್ಪಟ್ಟ ಅಹಂಕಾರವೂ, ಗುಣವಶದಿಂದ 'ತಾಮಸ' ವೆನಿಸಲ್ಪಟ್ಟರೂ, ಹೆಸರು ಮಾತ್ರ ತಾಮಸವೇ ಹೊರತು, ವಸ್ತುತಃ ತಾಮಸವಲ್ಲ.

೪೪. ಎಲೈ ಬ್ರಹ್ಮನೇ, ಇದೇ ಕಾರಣದಿಂದಲೇ ನೀನು ಸೃಷ್ಟಿಕರ್ತನಾಗು. ನೀನು ಸೃಷ್ಟಿಸಿದುದನ್ನು ಈ ಹರಿಯು ಪಾಲಿಸುತ್ತ ಬರಲಿ. ನನ್ನಂಶಭೂತನಾದ ರುದ್ರನು ಅದರ ಲಯಕರ್ತನಾಗುವನು.

ಮದೀಯಶ್ಚ ತಥಾಂಽಶೋ ಯೋ ಲಯಕರ್ತಾ ಭವಿಷ್ಯತಿ ।
ಇಯಂ ಯಾ ಪ್ರಕೃತಿರ್ದೇವೀ ಹ್ಯುಮಾಖ್ಯಾ ಪರಮೇಶ್ವರೀ ॥ ೪೫ ॥

ತಸ್ಯಾಸ್ತು ಶಕ್ತಿರ್ವಾಗ್ದೇವೀ ಬ್ರಹ್ಮಾಣಂ ಸಾ ಭಜಿಷ್ಯತಿ ।
ಅನ್ಯಾ ಶಕ್ತಿಃ ಪುನಸ್ತತ್ರ ಪ್ರಕೃತೇಃ ಸಂಭವಿಷ್ಯತಿ ॥ ೪೬ ॥

ಸಮಾಶ್ರಯಿಷ್ಯತೇ ವಿಷ್ಣುಂ ಲಕ್ಷ್ಮೀರೂಪೇಣ ಸಾ ತದಾ ।
ಪುನಶ್ಚ ಕಾಲೀ ನಾಮ್ನಾ ಸಾ ಮದಂಶಂ ಪ್ರಾಪ್ಸ್ಯತಿ ಧ್ರುವಂ ॥ ೪೭ ॥

ಜ್ಯೋತೀರೂಪೇಣ ಸಾ ತತ್ರ ಕಾರ್ಯಾರ್ಥೇ ಸಂಭವಿಷ್ಯತಿ ।
ಏವಂ ದೇವ್ಯಾಸ್ತಥಾ ಪ್ರೋಕ್ತಾಶ್ಶಕ್ತಯಃ ಪರಮಾಶ್ಶುಭಾಃ ॥ ೪೮ ॥

ಸೃಷ್ಟಿಸ್ಥಿತಿಲಯಾನಾಂ ಹಿ ಕಾರ್ಯಂ ತಾಸಾಂ ಕ್ರಮಾದ್ಧ್ರುವಂ ।
ಏತಸ್ಯಾಃ ಪ್ರಕೃತೇರಂಶಾ ಮತ್ಪ್ರಿಯಾಯಾಸ್ಸುರೋತ್ತಮ ॥ ೪೯ ॥

---

೪೫. ಮೂಲಪ್ರಕೃತಿಯೆನಿಸಿ ಉಮಾ, ಎಂಬ ಹೆಸರಿನಿಂದ ಬೆಳಗುತ್ತಿರುವ, ಈ ಪರಮೇಶ್ವರಿಯು ಒಂದು ಶಕ್ತಿಯೇ ವಾಗ್ದೇವಿಯಾದ ಸರಸ್ವತಿಯೆನಿಸಿ ಬ್ರಹ್ಮನನ್ನು ಹೊಂದುವಳು.

೪೬. ಇದೇ ಪ್ರಕೃತಿಯಿಂದಲೇ ಮತ್ತೊಂದು ಶಕ್ತಿಯುದಿಸುವುದು. ಆ ಶಕ್ತಿಯು ಲಕ್ಷ್ಮಿಯ ರೂಪವನ್ನು ತಳೆದು ವಿಷ್ಣುವನ್ನು ಆಶ್ರಯಿಸುವಳು.

೪೭, ಮತ್ತೆ ಆ ಪ್ರಕೃತಿಯೇ ಕಾಲಿಯೆಂಬ ಹೆಸರಿನಿಂದ ನನ್ನಂಶವಾದ ಹರನನ್ನು ಹೊಂದುವಳು. ಆಕೆಯು ಜ್ಯೋತಿಸ್ಸ್ವರೂಪದಿಂದ ಕೆಲಸಕಾರ್ಯಗಳಲ್ಲಿ ನೆರವಾಗುವಳು.

೪೮-೪೯. ಹೀಗೆ ಪರಮಶುಭಕರಗಳಾದ ದೇವಿಯ ಶಕ್ತಿಗಳನ್ನು ಹೇಳಿದುದಾಯಿತು. ಇವರು ಮೂವರೂ, ಸೃಷ್ಟಿ, ಸ್ಥಿತಿ, ಸಂಹಾರ ಕಾರ್ಯಗಳನ್ನು ಕ್ರಮವಾಗಿ ನೆರವೇರಿಸುವರು. ಓ ಸುರಶ್ರೇಷ್ಠ, ನನ್ನ ಪ್ರಿಯೆಯಾದ ಈ ಪ್ರಕೃತಿಯ ಅಂಶಗಳೇ ಇವರೆಂದು ತಿಳಿ.

ತ್ವಂ ಚ ಲಕ್ಷ್ಮೀಮುಪಾಶ್ರಿತ್ಯ ಕಾರ್ಯಂ ಕರ್ತುಮಿಹಾರ್ಹಸಿ ।
ಬ್ರಹ್ಮಂಸ್ತ್ವಂ ಚ ಗಿರಾಂ ದೇವೀಂ ಪ್ರಕೃತ್ಯಂಶಾಮವಾಪ್ಯ ಚ ॥ ೫೦ ॥

ಸೃಷ್ಟಿಕಾರ್ಯಂ ಹೃದಾ ಕರ್ತುಂ ಮನ್ನಿರ್ದೇಶಾದಿಹಾರ್ಹಸಿ ।
ಅಹಂ ಕಾಳೀಂ ಸಮಾಶ್ರಿತ್ಯ ಮತ್ಪ್ರಿಯಾಂಶಾಂ ಪರಾತ್ಪರಾಂ ॥ ೫೧ ॥

ರುದ್ರರೂಪೇಣ ಪ್ರಲಯಂ ಕರಿಷ್ಯೇ ಕಾರ್ಯಮುತ್ತಮಂ ।
ಚತುರ್ವರ್ಣಮಯಂ ಲೋಕಂ ತತ್ಸರ್ವೈರಾಶ್ರಮೈರ್ಧ್ರುವಂ ॥ ೫೨ ॥

ತದನ್ಯೈರ್ವಿವಿಧೈಃ ಕಾರ್ಯೈಃ ಕೃತ್ವಾ ಸುಖಮವಾಪ್ಸ್ಯಥಃ ।
ಜ್ಞಾನವಿಜ್ಞಾನಸಂಯುಕ್ತೋ ಲೋಕಾನಾಂ ಹಿತಕಾರಕಃ ॥ ೫೩ ॥

ಮುಕ್ತಿದೋऽತ್ರ ಭವಾನದ್ಯ ಭವ ಲೋಕೇ ಮದಾಜ್ಞಯಾ ।
ಮದ್ದರ್ಶನೇ ಫಲಂ ಯದ್ವತ್ತದೇವ ತವ ದರ್ಶನೇ ॥ ೫೪ ॥

---

೫೦. ನೀನು ಪ್ರಕೃತಿಯ ಅಂಶಭೂತಳಾದ ಲಕ್ಷ್ಮಿಯನ್ನು ಆಶ್ರಯಿಸಿ ನಿನ್ನ ಕೆಲಸವನ್ನು ಮಾಡಲು ತೊಡಗು. ಎಲೈ ಬ್ರಹ್ಮನೇ, ನೀನೂ ಪ್ರಕೃತ್ಯಂಶಳಾದ ಸರಸ್ವತಿಯನ್ನು ಹೊಂದಿ ನಿನ್ನ ಸೃಷ್ಟಿಕಾರ್ಯವನ್ನು ನೆರವೇರಿಸು.

೫೧. ನಾನು ನನ್ನ ಪ್ರಿಯೆಯ ಅಂಶಭೂತಳೂ, ಪರಾತ್ಪರಳೂ ಆದ ಕಾಳಿಯ ಸಹಾಯದೊಡನೆ, ರುದ್ರರೂಪದಿಂದ ಉತ್ತಮವಾದ ಪ್ರಳಯಕಾರ್ಯವನ್ನೆಸಗುವೆನು.

೫೨. ಈ ಪ್ರಪಂಚವು ನಾಲ್ಕು ಬಗೆಯ ವರ್ಣಗಳಿಂದ (ಬ್ರಾಹ್ಮಣಾದಿ) ಕೂಡಿರುವುದು. ಅಲ್ಲದೆ, ಬ್ರಹ್ಮಚರ್ಯ, ಗೃಹಸ್ಥ ಮೊದಲಾದ ನಾಲ್ಕು ಆಶ್ರಮಗಳಿಂದಲೂ ಕೂಡಿದೆ. ಇದಲ್ಲದೆ ಇನ್ನೂ ವಿವಿಧವಾದ ಕೆಲಸಗಳಿಂದ ನೀವು ಸುಖವನ್ನು ಪಡೆಯುವಿರಿ.

೫೩. ನೀನು ನನ್ನ ಅಪ್ಪಣೆಯಂತೆ, ಜ್ಞಾನ ವಿಜ್ಞಾನಗಳನ್ನುಳ್ಳವನಾಗಿ ಪ್ರಪಂಚಕ್ಕೆ ಹಿತವನ್ನೆಸಗುತ್ತಾ ಎಲ್ಲರಿಗೂ ಮುಕ್ತಿಯನ್ನು ನೀಡುವವನಾಗು.

೫೪. ನನ್ನನ್ನು ದರ್ಶನಮಾಡಲು ಯಾವ ಫಲವು ಲಭಿಸುವುದೋ ನಿನ್ನನ್ನು ದರ್ಶಿಸಿದರೂ ಅದೇ ಫಲವೇ ಲಭಿಸಲಿ. ಹೀಗೆಂದು ನಿನಗೆ ವರವನ್ನು ಕೊಟ್ಟಿದೇನೆ. ಇದು ನಿಜ, ಸಂಶಯವಿಲ್ಲ. ಈ ಮಾತು ಸತ್ಯವಾದುದು.

ಇತಿ ದತ್ತೋ ವರಸ್ತೇऽದ್ಯ ಸತ್ಯಂ ಸತ್ಯಂ ನ ಸಂಶಯಃ ।
ಮಮೈವ ಹೃದಯೇ ವಿಷ್ಣುರ್ವಿಷ್ಣೋಶ್ಚ ಹೃದಯೇ ಹ್ಯಹಂ ॥ ೫೫ ॥

ಉಭಯೋರಂತರಂ ಯೋ ವೈ ನ ಜಾನಾತಿ ಮನೋ ಮಮ ।
ವಾಮಾಂಗಜೋ ಮಮ ಹರಿರ್ದಕ್ಷಿಣಾಂಗೋದ್ಭವೋ ವಿಧಿಃ ॥ ೫೬ ॥

ಮಹಾಪ್ರಲಯಕೃದ್ರುದ್ರೋ ವಿಶ್ವಾತ್ಮಾ ಹೃದಯೋದ್ಭವಃ ।
ತ್ರಿಧಾ ಭಿನ್ನೋ ಹ್ಯಹಂ ವಿಷ್ಣೋ ಬ್ರಹ್ಮವಿಷ್ಣುಭವಾಖ್ಯಯಾ ॥ ೫೭ ॥

ಸರ್ಗರಕ್ಷಾಲಯಕರಸ್ತ್ರಿಗುಣೈ ರಜಆದಿಭಿಃ ।
ಗುಣಾಭಿನ್ನಶ್ಶಿವಸ್ಸಾಕ್ಷಾತ್ಪ್ರಕೃತೇಃ ಪುರುಷಾತ್ಪರಃ ॥ ೫೮ ॥

---

೫೫. ನನ್ನ ಹೃದಯದಲ್ಲಿಯೇ ವಿಷ್ಣುವಿರುವನು. ವಿಷ್ಣುವಿನ ಹೃದಯದಲ್ಲಿ ನಾನಿರುವೆನು. ನಮ್ಮೀರ್ವರಲ್ಲಿ ಯಾವನು ಭೇದವೆಣಿಸುವನೋ ಅವನು ನನ್ನ ಹೃದಯವನ್ನು ಅರಿಯಲಾರನು.

೫೬. ಹರಿಯು ನನ್ನ ಎಡಭಾಗದಿಂದ ಹುಟ್ಟಿದನು. ಬ್ರಹ್ಮನು ಬಲಭಾಗದಿಂದ ಹುಟ್ಟಿದನು. ಮಹಾಪ್ರಲಯಕರ್ತನೂ, ವಿಶ್ವಾತ್ಮಕನೂ, ಆದ ರುದ್ರನು ನನ್ನ ಹೃದಯದಿಂದ ಹುಟ್ಟಿದವನು.

೫೭. ಎಲೈ ವಿಷ್ಣುವೇ, ಸತ್ವ, ರಜ, ಸ್ತಮಸ್ಸುಗಳೆಂಬ ಮೂರು ಗುಣಗಳನ್ನು ಅವಲಂಬಿಸಿ, ಸೃಷ್ಟಿ. ಸ್ಥಿತಿ, ಸಂಹಾರ, ಕೃತ್ಯಗಳನ್ನೆಸಗುತ್ತಾ, ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಹೆಸರಿನಿಂದ ನಾನೇ ಮೂವರಾಗಿ ತೋರುತ್ತೇನೆ.

೫೮. ಗುಣಗಳಿಗೆ ಸಿಲುಕದ ಸಾಕ್ಷಾತ್ ಶಿವನೇ, ಪ್ರಕೃತಿಗೂ, ಪುರುಷನಿಗೂ, ಮೇಲಾದವನು, ಆತನೇ ಪರಬ್ರಹ್ಮವು, ಅಭಿನ್ನನು, ಅನಂತನು, ಪೂರ್ಣನು, ನಿರ್ಲೇಪನು.

**ಪರಂ ಬ್ರಹ್ಮಾದ್ವಯೋ ನಿತ್ಯೋಽನಂತಃ ಪೂರ್ಣೋ ನಿರಂಜನಃ ।**
**ಅಂತಸ್ತಮೋ ಬಹಿಸ್ಸತ್ತ್ವಸ್ತ್ರಿಜಗತ್ಪಾಲಕೋ ಹರಿಃ ॥ ೫೯ ॥**

**ಅಂತಸ್ಸತ್ತ್ವಸ್ತಮೋಬಾಹ್ಯಸ್ತ್ರಿಜಗಲ್ಲಯಕೃದ್ಧರಃ ॥ ೬೦ ॥**

**ಅಂತರ್ಬಹೀರಜಾಶ್ಚೈವ ತ್ರಿಗತ್ಸೃಷ್ಟಿಕೃದ್ವಿಧಿಃ ।**
**ಏವಂ ಗುಣಾಸ್ತ್ರಿದೇವೇಷು ಗುಣಭಿನ್ನಃ ಶಿವಃ ಸ್ಮೃತಃ ॥ ೬೧ ॥**

**ವಿಷ್ಣೋ ಸೃಷ್ಟಿಕರಂ ಪ್ರೀತ್ಯಾ ಪಾಲಯೈನಂ ಪಿತಾಮಹಂ ।**
**ಸಂಪೂಜ್ಯ ಸ್ತ್ರಿಷು ಲೋಕೇಷು ಭವಿಷ್ಯಸಿ ಮದಾಜ್ಞಯಾ ॥ ೬೨ ॥**

**ತವ ಸೇವ್ಯೋ ವಿಧೇಶ್ಚಾಪಿ ರುದ್ರ ಏವ ಭವಿಷ್ಯತಿ ।**
**ಶಿವಪೂರ್ಣಾವತಾರೋ ಹಿ ತ್ರಿಜಗಲ್ಲಯಕಾರಕಃ ॥ ೬೩ ॥**

---

೫೯. ಮೂರು ಲೋಕಗಳಿಗೂ ಪಾಲಕನಾದ ಹರಿಯು, ಒಳಗೆ ತಮೋಗುಣವುಳ್ಳವನೂ, ಬಾಹ್ಯದಲ್ಲಿ ಸತ್ತ್ವಗುಣವುಳ್ಳವನೂ ಆಗಿರುವನು. ಲಯಕರ್ತೃವಾದ ಹರನು, ಅಂತ (ಒಳಗೆ) ಸ್ಸತ್ವಗುಣವುಳ್ಳವನೂ, ಹೊರಗೆ ತಮೋಗುಣವುಳ್ಳವನೂ, ಆಗಿರುವನು.

೬೦ ಮೂರು ಜಗತ್ತುಗಳನ್ನೂ ಸೃಷ್ಟಿಸುವ ಬ್ರಹ್ಮನು ಒಳಗೂ ಹೊರಗೂ, ರಜೋಗುಣವುಳ್ಳವನು. ಹೀಗೆ ತ್ರಿಮೂರ್ತಿಗಳಲ್ಲಿ ಗುಣಗಳಿರುವುವು. ಶಿವನೊಬ್ಬನೇ ಗುಣಗಳಿಗೆ ಅತೀತನಾದವನು.

೬೧. ಎಲೈ ವಿಷ್ಣುವೇ, ನೀನೀ ಸೃಷ್ಟಿಕರ್ತನಾದ ಪಿತಾಮಹನನ್ನು ಪ್ರೀತಿಯಿಂದ ಪರಿಪಾಲಿಸು. ನನ್ನ ಅಪ್ಪಣೆಯಂತೆ ಮೂರು ಲೋಕಗಳಲ್ಲಿಯೂ ನೀನು ಪೂಜಿಸಲ್ಪಡುತ್ತೀಯೆ.

೬೨. ನಿನಗೂ, ಮತ್ತು ಬ್ರಹ್ಮನಿಗೂ, ಈ ರುದ್ರನೇ ಪೂಜ್ಯನು. ಮೂರು ಲೋಕಗಳಿಗೂ ಲಯಕಾರಕನಾದ ಆತನು, ಶಿವನ ಪೂರ್ಣಾವತಾರವಲ್ಲವೇ ?

೬೩. ಈ ಪಿತಾಮಹನು ಪಾದ್ಮಕಲ್ಪದಲ್ಲಿ ನಿನಗೆ ಮಗನಾಗುವನು. ಆಗ ನೀನೂ, ಈ ಬ್ರಹ್ಮನೂ ನನ್ನನ್ನು ಕಾಣುವಿರಿ.

ಪಾದ್ಮೇ ಭವಿಷ್ಯತಿ ಸುತಃ ಕಲ್ಪೇ ತವ ಪಿತಾಮಹಃ ।
ತದಾ ದ್ರಕ್ಷ್ಯಸಿ ಮಾಂ ಚೈವ ಸೋಽಪಿ ದ್ರಕ್ಷ್ಯತಿ ಪದ್ಮಜಃ ॥ ೬೪ ॥

ಏವಮುಕ್ತ್ವಾ ಮಹೇಶಾನಃ ಕೃಪಾಂ ಕೃತ್ವಾತುಲಾಂ ಹರಃ ।
ಪುನಃ ಪ್ರೋವಾಚ ಸುಪ್ರೀತ್ಯಾ ವಿಷ್ಣುಂ ಸರ್ವೇಶ್ವರಃ ಪ್ರಭುಃ ॥ ೬೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಶಿವತತ್ತ್ವವರ್ಣನೋ
ನಾಮ ನವಮೋಽಧ್ಯಾಯಃ



೬೪-೬೫. ಮಹೇಶ್ವರನಾದ ಆ ಶಿವನು ಅಸದಳವಾದ ಕೃಪೆಯನ್ನಿಟ್ಟು ಹೀಗೆ, ನುಡಿದು ಮತ್ತೆ ವಿಷ್ಣುವನ್ನು ಕುರಿತು ಪ್ರೀತಿಯಿಂದ ಇಂತೆಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲ
ನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಶಿವತತ್ತ್ವವರ್ಣನವೆಂಬ
ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸೃಷ್ಟಿಖಂಡೇ

## ದಶಮೋಽಧ್ಯಾಯಃ

---

॥ ಪರಮೇಶ್ವರ ಉವಾಚ ॥

ಅನ್ಯಚ್ಛೃಣು ಹರೇ ವಿಷ್ಣೋ ಶಾಸನಂ ಮಮ ಸುವ್ರತ ।
ಸದಾ ಸರ್ವೇಷು ಲೋಕೇಷು ಮಾನ್ಯಃ ಪೂಜ್ಯೋ ಭವಿಷ್ಯಸಿ ॥ ೧ ॥

ಬ್ರಹ್ಮಣಾ ನಿರ್ಮಿತೇ ಲೋಕೇ ಯದಾ ದುಃಖಂ ಪ್ರಜಾಯತೇ ।
ತದಾ ತ್ವಂ ಸರ್ವದುಃಖಾನಾಂ ನಾಶಾಯ ತತ್ಪರೋ ಭವ ॥ ೨ ॥

ಸಹಾಯಂ ತೇ ಕರಿಷ್ಯಾಮಿ ಸರ್ವಕಾರ್ಯೇ ಚ ದುಸ್ಸಹೇ ।
ತವ ಶತ್ರೂನ್ಹನಿಷ್ಯಾಮಿ ದುಸ್ಸಾಧ್ಯಾನ್ಪರಮೋತ್ಕಟಾನ್ ॥ ೩ ॥

---

## ಹತ್ತನೆಯ ಅಧ್ಯಾಯವು

೧. ಶಿವನು ನುಡಿದನು:—ಗುಣಶಾಲಿಯಾದ ಎಲೈ ವಿಷ್ಣುವೇ, ನನ್ನ ಮತ್ತೊಂದು ಆಜ್ಞೆಯನ್ನೂ ಕೇಳು. ನೀನು ಸರ್ವಲೋಕಗಳಲ್ಲಿಯೂ, ಸದಾ ಕಾಲದಲ್ಲಿಯೂ, ಮಾನನೀಯನೂ, ಪೂಜ್ಯನೂ, ಆಗುವೆ.

೨. ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಲೋಕದಲ್ಲಿ ಯಾವಾಗ ದುಃಖವುಂಟಾಗುವುದೋ ಆಗ ನೀನು, ಆ ದುಃಖಗಳೆಲ್ಲವನ್ನೂ ಪರಿಹರಿಸಲು ಬದ್ಧಕಂಕಣನಾಗು.

೩. ದುಸ್ಸಾಧ್ಯವಾದ ಕೆಲಸಗಳೆಲ್ಲದರಲ್ಲೂ ನಾನು ನಿನಗೆ ಸಹಾಯವನ್ನೆಸಗುವೆನಲ್ಲದೆ, ನಿನಗೆ ಸಗ್ಗದ ಮಹಾದುಷ್ಟರಾದ ನಿನ್ನ ವೈರಿಗಳನ್ನೂ ಸದೆಬಡಿಯುವೆನು.

ವಿವಿಧಾನವತಾರಾಂಶ್ಚ ಗೃಹೀತ್ವಾ ಕೀರ್ತಿಮುತ್ತಮಾಂ ।
ವಿಸ್ತಾರಯ ಹರೇ ಲೋಕೇ ತಾರಣಾಯ ಪರೋ ಭವ ॥
ಗುಣರೂಪೋ ಹ್ಯಹಂ ರುದ್ರೋ ಹ್ಯನೇನ ವಪುಷಾ ಸದಾ ॥ ೪ ॥

ಕಾರ್ಯಂ ಕರಿಷ್ಯೇ ಲೋಕಾನಾಂ ತವಾಶಕ್ಯಂ ನ ಸಂಶಯಃ ॥ ೫ ॥

ರುದ್ರಧ್ಯೇಯೋ ಭವಾಂಶ್ಚೈವ ಭವದ್ಧ್ಯೇಯೋ ಹರಸ್ತಥಾ ।
ಯುವಯೋರಂತರಂ ನೈವ ತವ ರುದ್ರಸ್ಯ ಕಿಂಚನ ॥ ೬ ॥

ವಸ್ತುತಶ್ಚಾಪಿ ಚೈಕತ್ವಂ ವರತೋಽಪಿ ತಥೈವ ಚ ।
ಲೀಲಯಾಪಿ ಮಹಾವಿಷ್ಣೋ ಸತ್ಯಂ ಸತ್ಯಂ ನ ಸಂಶಯಃ ॥ ೭ ॥

ರುದ್ರಭಕ್ತೋ ನರೋ ಯಸ್ತು ತವ ನಿಂದಾಂ ಕರಿಷ್ಯತಿ ।
ತಸ್ಯ ಪುಣ್ಯಂ ಚ ನಿಖಿಲಂ ದ್ರುತಂ ಭಸ್ಮ ಭವಿಷ್ಯತಿ ॥ ೮ ॥

---

೪. ಬಹುತೆರನಾದ ಅವತಾರಗಳನ್ನೆತ್ತಿ ಪ್ರಪಂಚದಲ್ಲಿ ಉತ್ತಮವಾದ ಕೀರ್ತಿಯನ್ನು ಗಳಿಸು. ಓ ಹರಿ, ಜನರನ್ನು ದುಃಖದಿಂದ ಪಾರುಗಣಿಸಲು ಪ್ರಯತ್ನಶೀಲನಾಗು.

೫. ಸಗುಣನಾದ ನಾನು ರುದ್ರನೆನಿಸಿ ಇದೇ ಶರೀರದಿಂದಲೇ, ಲೋಕಹಿತಾರ್ಥವಾಗಿ ನಿನಗೆ ಅಸಾಧ್ಯವಾದ ಕೆಲಸಗಳನ್ನು ನಿಸ್ಸಂಶಯನಾಗಿ ಸರ್ವದಾ ನೆರವೇರಿಸುವೆನು.

೬. ನೀನು ರುದ್ರನಿಗೂ ಧ್ಯೇಯನಾಗಿರುವೆ. ಲಯಕರ್ತನಾದ ಆ ಹರನೂ ನಿನ್ನಿಂದ ಧ್ಯೇಯನಾದವನೇ. ನಿನಗೂ ಆ ರುದ್ರನಿಗೂ ಸ್ವಲ್ಪವೂ ಭೇದವಿಲ್ಲ.

೭. ವಾಸ್ತವಿಕವಾಗಿಯೂ ನೀವಿಬ್ಬರೂ ಒಂದೇ. ಎಲೈ ಮಹಾವಿಷ್ಣುವೇ, ನಿಮ್ಮಿಬ್ಬರಿಗೆ ಇತ್ತಿರುವ ವರಗಳಿಂದಲೂ, ನಿಮ್ಮಿಬ್ಬರ ಲೀಲೆಗಳಿಂದಲೂ ಸಹ ನೀವು ಒಂದೇ ಎನ್ನುವುದರಲ್ಲಿ ಸಂಶಯವಿಲ್ಲ. ಇದು ನಿಜ, ಸತ್ಯ.

೮. ಹರನಲ್ಲಿ ಭಕ್ತಿಯುಳ್ಳವನು, ಯಾವನಾದರೂ ನಿನ್ನನ್ನು ನಿಂದಿಸಿದ ಪಕ್ಷದಲ್ಲಿ ಅವನು ಗಳಿಸಿದ್ದ ಪುಣ್ಯವೆಲ್ಲವೂ ತಕ್ಷಣ ಬೂದಿಯಾಗಿ ಹೋಗುವುದು.

**ನರಕೇ ಪತನಂ ತಸ್ಯ ತ್ವದ್ದ್ವೇಷಾತ್ಪುರುಷೋತ್ತಮ ।**
**ಮದಾಜ್ಞಯಾ ಭವೇದ್ವಿಷ್ಣೋ ಸತ್ಯಂ ಸತ್ಯಂ ನ ಸಂಶಯಃ ॥ ೯ ॥**

**ಲೋಕೇಽಸ್ಮಿನ್ಮುಕ್ತಿದೋ ನೃಣಾಂ ಭುಕ್ತಿದಶ್ಚ ವಿಶೇಷತಃ ।**
**ಧ್ಯೇಯಃ ಪೂಜ್ಯಶ್ಚ ಭಕ್ತಾನಾಂ ನಿಗ್ರಹಾನುಗ್ರಹೌ ಕುರು ॥ ೧೦ ॥**

**ಇತ್ಯುಕ್ತ್ವಾ ಮಾಂ ಚ ಧಾತಾರಂ ಹಸ್ತೇ ಧೃತ್ವಾ ಸ್ವಯಂ ಹರಿಂ ।**
**ಕಥಯಾಮಾಸ ದುಃಖೇಷು ಸಹಾಯೋ ಭವ ಸರ್ವದಾ ॥ ೧೧ ॥**

**ಸರ್ವಾಧ್ಯಕ್ಷಶ್ಚ ಸರ್ವೇಷು ಭುಕ್ತಿಮುಕ್ತಿಪ್ರದಾಯಕಃ ।**
**ಭವ ತ್ವಂ ಸರ್ವದಾ ಶ್ರೇಷ್ಠಸ್ಸರ್ವಕಾಮಪ್ರಸಾಧಕಃ ॥ ೧೨ ॥**

---

೯. ಓ ಪುರುಷಶ್ರೇಷ್ಠ, ನಿನ್ನಲ್ಲಿ ದ್ವೇಷವನ್ನು ಬೆಳಸಿದವನು ನನ್ನ ಅಪ್ಪಣೆಯಂತೆ ಎಂದೆಂದಿಗೂ ನರಕದಲ್ಲಿ ಬಿದ್ದು ಕೊಳೆಯುವನು. ಇದು ಖಂಡಿತವಾದುದು. ಸತ್ಯವಾದುದು.

೧೦. ಈ ಲೋಕದಲ್ಲಿ ಮನುಷ್ಯರಿಗೆ ಮುಕ್ತಿಯನ್ನೂ, ವಿಶೇಷವಾಗಿ ಭೋಗಭಾಗ್ಯಗಳನ್ನೂ ನೀಡುತ್ತಿರು. ಭಕ್ತರು ನಿನ್ನನ್ನು ಸದಾ ಸ್ತುತಿಸಲಿ. ಅವರಿಂದ ಪೂಜೆಯನ್ನು ಕೈಗೊಳ್ಳುವವನಾಗು. ಅಲ್ಲದೆ ದುಷ್ಟರನ್ನು ಶಿಕ್ಷಿಸುತ್ತಲೂ, ಶಿಷ್ಟರನ್ನು ರಕ್ಷಿಸುತ್ತಲೂ ಇರು.

೧೧. ಹೀಗೆಂದು ಹೇಳಿ ಧಾತೃವಾದ ನನ್ನ ಮತ್ತು ಹರಿಯ ಕೈಗಳನ್ನು ಹಿಡಿದುಕೊಂಡು ಯಾವಾಗಲೂ ಈತನಿಗೆ ಸಂಕಟಸಮಯಗಳಲ್ಲಿ ನೆರವನ್ನು ನೀಡುತ್ತಿರು ಎಂದನು.

೧೨. ನೀನು ಎಲ್ಲರಿಗೂ ಸಾಕ್ಷಿಭೂತನಾಗಿಯೂ, ಭುಕ್ತಿ ಮುಕ್ತಿಗಳನ್ನು ಕೊಡುವವನಾಗಿಯೂ, ಇರುವುದಲ್ಲದೆ ಸದಾ ಸಕಲರ ಇಷ್ಟಾರ್ಥಗಳನ್ನೂ ನೆರವೇರಿಸುತ್ತಾ ಎಲ್ಲರಿಗೂ ಮಾನ್ಯನಾಗಿರು.

ಸರ್ವೇಷಾಂ ಪ್ರಾಣರೂಪಶ್ಚ ಭವ ತ್ವಂ ಚ ಮಮಾಜ್ಞಯಾ ।
ಸಂಕಟೇ ಭಜನೀಯೋ ಹಿ ಸ ರುದ್ರೋ ಮತ್ತನುರ್ಹರೇ ॥ ೧೩ ॥

ತ್ವಾಂ ಯಸ್ಸಮಾಶ್ರಿತೋ ನೂನಂ ಮಾಮೇವ ಸ ಸಮಾಶ್ರಿತಃ ।
ಅಂತರಂ ಯಶ್ಚ ಜಾನಾತಿ ನಿರಯೇ ಪತತಿ ಧ್ರುವಂ ॥ ೧೪ ॥

ಆಯುರ್ಬಲಂ ಶೃಣಿಷ್ವಾದ್ಯ ತ್ರಿದಶಾನಾಂ ವಿಶೇಷತಃ ।
ಸಂದೇಹೋಽತ್ರ ನ ಕರ್ತವ್ಯೋ ಬ್ರಹ್ಮವಿಷ್ಣುಹರಾತ್ಮನಾಂ ॥ ೧೫ ॥

ಚತುರ್ಯುಗಸಹಸ್ರಾಣಿ ಬ್ರಹ್ಮಣೋ ದಿನಮುಚ್ಯತೇ ।
ರಾತ್ರಿಶ್ಚ ತಾವತೀ ತಸ್ಯ ಮಾನಮೇತತ್ಕ್ರಮೇಣ ಹ ॥ ೧೬ ॥

ತೇಷಾಂ ತ್ರಿಂಶದ್ದಿನೈರ್ಮಾಸೋ ದ್ವಾದಶೈಸ್ತೈಶ್ಚ ವತ್ಸರಃ ।
ಶತವರ್ಷಪ್ರಮಾಣೇನ ಬ್ರಹ್ಮಾಯುಃ ಪರಿಕೀರ್ತಿತಂ ॥ ೧೭ ॥

೧೩. ಓ ಹರಿ, ನೀನು ನನ್ನ ಅಪ್ಪಣೆಯಂತೆ ಎಲ್ಲರಿಗೂ ಪ್ರಾಣಸ್ವರೂಪನಾಗಿರು. ನಿನಗೆ ತೊಂದರೆಗಳೊದಗಿದಾಗ ನನ್ನ ಶರೀರಭೂತನಾದ ಆ ಹರನನ್ನು ಸೇವಿಸು.

೧೪. ನಿನ್ನನ್ನು ಯಾವನು ಅನನ್ಯ ಭಕ್ತಿಯಿಂದ ಆರಾಧಿಸುವನೋ ಅವನು ನನ್ನನ್ನೇ ಆರಾಧಿಸಿದನೆಂದು ತಿಳಿ. ನಮ್ಮೀರ್ವರಿಗೂ ಭೇದವನ್ನೆಣಿಸುವವನು ಖಂಡಿತವಾಗಿಯೂ ನರಕದಲ್ಲಿ ಬೀಳುವನು.

೧೫. ಈಗ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಈ ತ್ರಿಮೂರ್ತಿಗಳ ಆಯುಃ ಪರಿಮಾಣವನ್ನು ವಿಶೇಷವಾಗಿ ಬಣ್ಣಿಸುವೆನು, ಕೇಳು. ಈ ಅಂಶದಲ್ಲಿ ಸಂಶಯ ಪಡಬೇಡ.

೧೬. ನಾಲ್ಕುಸಹಸ್ರ ಯುಗಗಳು ಬ್ರಹ್ಮನಿಗೆ ಒಂದು ಹಗಲೆನಿಸುವುದು. ಅಷ್ಟೇ ಕಾಲವು ಆತನ ಒಂದು ರಾತ್ರಿಗೂ ಹಿಡಿಸುವುದು. ಇದೇರೀತಿ ಮುಂದೆಯೂ ಸಹ ಕ್ರಮವಾಗಿ ಪ್ರಮಾಣವನ್ನರಿಯಬೇಕು.

೧೭. ಹೀಗೆ ರಾತ್ರಿ ಹಗಲು ಸೇರಿದ ಮೂವತ್ತು ದಿನಗಳು ಒಂದು ತಿಂಗಳೆಂತಲೂ, ಆ ಹನ್ನೆರಡು ತಿಂಗಳು ಒಂದು ವರ್ಷವೆಂತಲೂ ಎನಿಸಲ್ಪಡುವುದು. ಹೀಗೆ ನೂರು ವರ್ಷಗಳು ಬ್ರಹ್ಮನಿಗೆ ಆಯುರ್ದಾಯವು.

**ಬ್ರಹ್ಮಣೋ ವರ್ಷಮಾತ್ರೇಣ ದಿನಂ ವೈಷ್ಣವಮುಚ್ಯತೇ ।**
**ಸೋಽಪಿ ವರ್ಷಶತಂ ಯಾವದಾತ್ಮಮಾನೇನ ಜೀವತಿ ॥ ೧೮ ॥**

**ವೈಷ್ಣವೇನ ತು ವರ್ಷೇಣ ದಿನಂ ರೌದ್ರಂ ಭವೇದ್ಧ್ರುವಂ ।**
**ಹರೋ ವರ್ಷಶತೇ ಯಾತೇ ನರರೂಪೇಣ ಸಂಸ್ಥಿತಃ ॥ ೧೯ ॥**

**ಯಾವದುಚ್ಛ್ವಸಿತಂ ವಕ್ತ್ರೇ ಸದಾಶಿವಸಮುದ್ಭವಂ ।**
**ಪಶ್ಚಾಚ್ಛಕ್ತಿಂ ಸಮಭ್ಯೇತಿ ಯಾವನ್ನಿಃಶ್ವಸಿತಂ ಭವೇತ್ ॥ ೨೦ ॥**

**ನಿಃಶ್ವಾಸೋಚ್ಛ್ವಸಿತಾನಾಂ ಚ ಸರ್ವೇಷಾಮೇವ ದೇಹಿನಾಂ ।**
**ಬ್ರಹ್ಮವಿಷ್ಣುಹರಾಣಾಂ ಚ ಗಂಧರ್ವೋರಗರಕ್ಷಸಾಂ ॥ ೨೧ ॥**

---

೧೮. ಬ್ರಹ್ಮನ ಒಂದು ವರ್ಷವು ವಿಷ್ಣುವಿಗೆ ಒಂದು ಹಗಲೆನಿಸುವುದು. ಈ ಅಳತೆಯಂತೆ ವಿಷ್ಣುವೂ ಸಹ ನೂರು ವರ್ಷಗಳ ಕಾಲ ಆಯುಸ್ಸನ್ನು ಪಡೆಯುವನು. ಹೀಗೆಯೇ, ಬ್ರಹ್ಮನ ಮತ್ತೊಂದು ವರ್ಷವು ವಿಷ್ಣುವಿಗೆ ಒಂದು ರಾತ್ರಿಯೆನಿಸುವುದು. ಈ ರೀತಿ ಹಗಲುರಾತ್ರಿಗಳು ಸೇರಿದ ದಿವಸಗಳು ಮುನ್ನೂರರವತ್ತು ಆದರ ವರ್ಷವೆನಿಸುವುದು. ಆ ವೈಷ್ಣವ ವರ್ಷಗಳು ನೂರಾಗಲು ವಿಷ್ಣುವಿನ ಆಯುಃಪರಿಮಾಣವಾಗುವುದು.

೧೯. ವಿಷ್ಣುವಿನ ಒಂದು ವರ್ಷವು ರುದ್ರನಿಗೆ ಹಗಲೂ, ಅದೇ ವಿಷ್ಣುವಿನ ಒಂದು ವರ್ಷವು ರಾತ್ರಿಯೂ ಎನಿಸುವುದು. ಈರೀತಿ ಹಗಲು ರಾತ್ರಿಗಳು ಸೇರಿದ ಮುನ್ನೂರರವತ್ತು ದಿವಸಗಳು ರುದ್ರನಿಗೆ ಒಂದು ವರ್ಷವೆನಿಸುವುದು. ಹೀಗೆ ನೂರು ವರ್ಷಗಳು ಕಳೆಯಲು,

೨೦. ಸದಾಶಿವನ ಮುಖದಿಂದ ಹೊರಟ ಉಚ್ಛ್ವಾಸವಿರುವವರೆಗೆ ಪುರುಷ ರೂಪದಿಂದ ಹರನು ಇರುವನು. ಬಳಿಕ ಆತನ ನಿಶ್ವಾಸವಿರುವವರೆಗೂ ಆ ಹರನು ಶಕ್ತಿಯಲ್ಲಿ ಅಡಕವಾಗುವನು.

೨೧-೨೨. ಓ ಸುರಶ್ರೇಷ್ಠರಿರಾ, ಎಲ್ಲ ಪ್ರಾಣಿಗಳಿಗೂ ಬ್ರಹ್ಮ, ವಿಷ್ಣು, ಮಹೇಶ್ವರರು, ಗಂಧರ್ವರು, ನಾಗರು, ರಾಕ್ಷಸರು, ಇವರೆಲ್ಲರಿಗೂ ತಮ್ಮ ನಿಶ್ವಾವ

ಏಕವಿಂಶಸಹಸ್ರಾಣಿ ಶತೈಃ ಷಡ್ಭಿಶ್ಶತಾನಿ ಚ ।
ಅಹೋರಾತ್ರಾಣಿ ಚೋಕ್ತಾನಿ ಪ್ರಮಾಣಂ ಸುರಸತ್ತಮೌ ॥ ೨೨ ॥

ಷಡ್ಭಿರುಚ್ಛ್ವಾಸನಿಶ್ವಾಸೈಃ ಪಲಮೇಕಂ ಪ್ರವರ್ತಿತಂ ।
ಘಟೀ ಷಷ್ಟಿಪಲಾ ಪ್ರೋಕ್ತಾ ಸಾ ಷಷ್ಟ್ಯಾ ಚ ದಿನಂ ನಿಶಾ ॥ ೨೩ ॥

ನಿಶ್ವಾಸೋಚ್ಛ್ವಸಿತಾನಾಂ ಚ ಪರಿಸಂಖ್ಯಾ ನ ವಿದ್ಯತೇ ।
ಸದಾಶಿವಸಮುತ್ಥಾನಮೇತಸ್ಮಾತ್ಸೋಽಕ್ಷಯಃ ಸ್ಮೃತಃ ॥ ೨೪ ॥

ಇತ್ಥಂ ರೂಪಂ ತ್ವಯಾ ತಾವದ್ರಕ್ಷಣೀಯಂ ಮಮಾಜ್ಞಯಾ ।
ತಾವತ್ಸೃಷ್ಟೇಶ್ಚ ಕಾರ್ಯಾಣಂ ವೈ ಕರ್ತವ್ಯಂ ವಿವಿಧೈರ್ಗುಣೈಃ ॥ ೨೫ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಶ್ಶಂಭೋರ್ಮಯಾ ಚ ಭಗವಾನ್ಹರಿಃ ।
ಪ್ರಣಿಪತ್ಯ ಚ ವಿಶ್ವೇಶಂ ಪ್ರಾಹ ಮಂದತರಂ ವಶೀ ॥ ೨೬ ॥

---

ಸೋಚ್ಛ್ವಾಸಗಳು, ಇಪ್ಪತ್ತೊಂದುಸಾವಿರದಆರುನೂರು (೨೧೬೦೦) ನಡೆದರೆ ಅವರ ಒಂದು ಅಹೋರಾತ್ರವೆನಿಸುವುದು. ಇದೇ ರೀತಿಯಾಗಿ ಅವರ ಆಯುಸ್ಸನ್ನು ಅಳೆಯಬೇಕು.

೨೩. ಆರು ಸಲ ಉಚ್ಛ್ವಾಸ ನಿಶ್ವಾಸಗಳು ನಡೆಯುವಷ್ಟು ಕಾಲವು ಒಂದು ಪಲವೆನಿಸುವುದು. ಆ ಪಲಗಳು ಅರವತ್ತಾಗಲು ಒಂದು ಗಳಿಗೆಯಾಗುವುದು. ಆ ಗಳಿಗೆಗಳು ಅರುವತ್ತಾಗಲು, ಹಗಲು ರಾತ್ರಿ ಸೇರಿದ ಒಂದು ದಿವಸವೆನಿಸುವುದು.

೨೪. ಸದಾಶಿವನ ಮುಖದಿಂದ ಹೊರಡುವ ನಿಶ್ವಾಸೋಚ್ಛ್ವಾಸಗಳಿಗೆ ತುದಿಮೊದಲೇ ಇಲ್ಲ. ಅದನ್ನು ಎಣಿಸಲು ಅಸಾಧ್ಯ. ಆದುದರಿಂದಲೇ ಆತನು ಅಕ್ಷಯ ನಾಶರಹಿತನೆನಿಸಿರುವನು.

೨೫. ಈರೀತಿಯಾಗಿ ನನ್ನ ಅಪ್ಪಣೆಯಂತೆ ನಿನ್ನ ಸ್ವರೂಪವನ್ನು ಸಂರಕ್ಷಿಸಿಕೊಳ್ಳುತ್ತಾ ನಾನಾವಿಧವಾದ ಗುಣಗಳ ಸಹಕಾರದಿಂದ ಸೃಷ್ಟಿಕಾರ್ಯವನ್ನು ನೆರವೇರಿಸಬೇಕು.

೨೬. ಹೀಗೆ ನನ್ನೊಡನೆ ಮಹಾತ್ಮನಾದ ಆ ವಿಷ್ಣುವು ಶಿವನ ನುಡಿಯನ್ನಾಲಿಸಿ, ಆ ವಿಶ್ವೇಶ್ವರನನ್ನು ನಮಸ್ಕರಿಸಿ ಮೆಲ್ಲಮೆಲ್ಲನೆ ಹೇಳತೊಡಗಿದನು.

॥ ವಿಷ್ಣುರುವಾಚ ॥

ಶಂಕರ ಶ್ರೂಯತಾಮೇತತ್ಕೃಪಾಸಿಂಧೋ ಜಗತ್ಪತೇ ।
ಸರ್ವಮೇತತ್ಕರಿಷ್ಯಾಮಿ ಭವದಾಜ್ಞಾವಶಾನುಗಃ ॥ ೨೭ ॥

ಮಮ ಧ್ಯೇಯಸ್ಸದಾ ತ್ವಂ ಚ ಭವಿಷ್ಯಸಿ ನ ಚಾನ್ಯಥಾ ।
ಭವತಸ್ಸರ್ವಸಾಮರ್ಥ್ಯಂ ಲಬ್ಧಂ ಚೈವ ಪುರಾ ಮಯಾ ॥ ೨೮ ॥

ಕ್ಷಣಮಾತ್ರಮಪಿ ಸ್ವಾಮಿಂಸ್ತವ ಧ್ಯಾನಂ ಪರಂ ಮಮ ।
ಚೇತಸೋ ದೂರತೋ ನೈವ ಸಂಗಚ್ಛತು ಕದಾಚನ ॥ ೨೯ ॥

ಮಮ ಭಕ್ತಶ್ಚ ಯಃ ಸ್ವಾಮಿಂಸ್ತವ ನಿಂದಾಂ ಕರಿಷ್ಯತಿ ।
ತಸ್ಯ ವೈ ನಿರಯೇ ವಾಸಂ ಪ್ರಯಚ್ಛ ನಿಯತಂ ಧ್ರುವಂ ॥ ೩೦ ॥

ತ್ವದ್ಭಕ್ತೋ ಯೋ ಭವೇತ್ಸ್ವಾಮಿನ್ಮಮ ಪ್ರಿಯತರೋ ಹಿ ಸಃ ।
ಏವಂ ವೈ ಯೋ ವಿಜಾನಾತಿ ತಸ್ಯ ಮುಕ್ತಿರ್ನ ದುರ್ಲಭಾ ॥ ೩೧ ॥

---

೨೭. ಓ ಕರುಣಾನಿಧಿ, ಜಗನ್ನಾಥ, ಶಂಕರ, ನಿನ್ನ ಅಪ್ಪಣೆಯನ್ನು ಎಳ್ಳಷ್ಟೂ ಮೀರದೆ ನೀನು ಹೇಳಿದುದೆಲ್ಲವನ್ನೂ ಮಾಡುತ್ತೇನೆ. ಇದನ್ನು ಕೇಳು.

೨೮. ನಾನು ಯಾವಾಗಲೂ ನಿನ್ನನ್ನು ಧ್ಯಾನಿಸುತ್ತಿರುವಂತೆಯೇ ಆಗಬೇಕೇ ಹೊರತು ಮತ್ತೆ ಬೇರೆಯಲ್ಲ. ನಿನ್ನ ಅನುಗ್ರಹದಿಂದ ನಿನ್ನ ಸಾಮರ್ಥ್ಯವೆಲ್ಲವನ್ನೂ ಮೊದಲೇ ಪಡೆದಿರುವೆನು.

೨೯. ಎಲೈ ಸ್ವಾಮಿಯೇ, ನಿನ್ನ ಶ್ರೇಷ್ಠವಾದ ಧ್ಯಾನವು ಎಂದೆಂದಿಗೂ ನನ್ನ ಮನಸ್ಸಿನಿಂದ ಕ್ಷಣಮಾತ್ರವೂ ದೂರವಾಗದಿರಲಿ.

೩೦. ಓ ಪ್ರಭು, ನನ್ನ ಭಕ್ತನಾದವನು ಯಾವನು ನಿನ್ನ ನಿಂದನೆಯನ್ನು ಮಾಡುವನೋ, ಅವನಿಗೆ ನರಕವಾಸವನ್ನು ಖಂಡಿತವಾಗಿಯೂ ವಿಧಾಯಕವನ್ನಾಗಿ ಮಾಡು.

೩೧. ಓ ನಾಥ, ಯಾವನು ನಿನ್ನ ಭಕ್ತನೋ, ಆತನು ನನಗೆ ಅತ್ಯಂತ ಪ್ರೀತಿಪಾತ್ರನು. ಹೀಗೆ ಯಾವನು ತಿಳಿಯುವನೋ ಅವನಿಗೆ ಮುಕ್ತಿಯು ದುರ್ಲಭವಾದುದಲ್ಲ.

ಮಹಿಮಾ ಚ ಮದೀಯೋಽದ್ಯ ವರ್ಧಿತೋ ಭವತಾ ಧ್ರುವಂ ।
ಕದಾಚಿದಗುಣಶ್ಚೈವ ಜಾಯತೇ ಕ್ಷಮ್ಯತಾಮಿತಿ ॥ ೩೨ ॥

॥ ಬ್ರಹ್ಮೋವಾಚ ॥

ತದಾ ಶಂಭುಸ್ತದೀಯಂ ಹಿ ಶ್ರುತ್ವಾ ವಚನಮುತ್ತಮಂ ।
ಉವಾಚ ವಿಷ್ಣುಂ ಸುಪ್ರೀತಾತ್ಮಾ ಕ್ಷಮ್ಯಾ ತೇಽಗುಣತಾ ಮಯಾ ॥ ೩೩ ॥

ಏವಮುಕ್ತ್ವಾ ಹರಿಂ ನೌ ಸ ಕರಾಭ್ಯಾಂ ಪರಮೇಶ್ವರಃ ।
ಪಸ್ಪರ್ಶ ಸಕಲಾಂಗೇಷು ಕೃಪಯಾ ತು ಕೃಪಾನಿಧಿಃ ॥ ೩೪ ॥

ಆದಿಶ್ಯ ವಿವಿಧಾನ್ಧರ್ಮಾನ್ಸರ್ವದುಃಖಹರೋ ಹರಃ ।
ದದೌ ವರಾನನೇಕಾಂಶ್ಚಾವಯೋರ್ಹಿತಚಿಕೀರ್ಷಯಾ ॥ ೩೫ ॥

ತತಸ್ಸ ಭಗವಾಂಚ್ಛಂಭುಃ ಕೃಪಯಾ ಭಕ್ತವತ್ಸಲಃ ।
ದೃಷ್ಟ್ವಾ ಸಂಪಶ್ಯತೋಃ ಶೀಘ್ರಂ ತತ್ರೈವಾಂತರಧೀಯತ ॥ ೩೬ ॥

---

೩೨. ನಿಜವಾಗಿಯೂ ನಿನ್ನ ಕೃಪೆಯಿಂದ ಈಗ ನನ್ನ ಮಹಿಮೆಯು ಹೆಚ್ಚಿಸಲ್ಪಟ್ಟಿತು. ಒಂದುವೇಳೆ ಅಚಾತುರ್ಯವೇನಾದರೂ ನಡೆದರೆ ಕ್ಷಮಿಸಬೇಕು ಎಂದನು.

೩೩. ಬ್ರಹ್ಮನು ಹೇಳಿದನು :— ಆಗ ಶಿವನು, ಉತ್ತಮವಾದ ಆ ಮಾತನ್ನು ಕೇಳಿ ಸುಪ್ರೀತನಾಗಿ ವಿಷ್ಣುವನ್ನು ಕುರಿತು, ನಿನ್ನ ಅವಗುಣಗಳೇನಾದರೂ ಇರುವಲ್ಲಿ ನಾನವನ್ನು ಕ್ಷಮಿಸುವೆನೆಂದನು.

೩೪. ಹೀಗೆ ಆ ಪರಮೇಶ್ವರನು ವಿಷ್ಣುವಿಗೆ ಹೇಳಿ ನಮ್ಮಿಬ್ಬರ ಶರೀರವನ್ನು ಕೃಪೆಯಿಂದ ತನ್ನ ಎರಡು ಕೈಗಳಿಂದಲೂ ತಡವಿದನು.

೩೫. ಎಲ್ಲ ದುಃಖಗಳನ್ನೂ ಪರಿಹರಿಸುವ ಆ ಶಿವನು ನಾನಾ ವಿಧವಾದ ಧರ್ಮಗಳನ್ನುಪದೇಶಿಸಿ, ನಮ್ಮ ಹಿತವನ್ನು ಬಯಸಿ ನಮ್ಮಿಬ್ಬರಿಗೂ ಅನೇಕ ವರಗಳನ್ನಿತ್ತನು.

೩೬. ಆಮೇಲೆ ಭಕ್ತವತ್ಸಲನಾದ ಆ ಶಂಭುವು ನಮ್ಮಲ್ಲಿ ಕೃಪೆಯನ್ನು ತೋರುತ್ತಾ ನಾವಿಬ್ಬರೂ ನೋಡುತ್ತಿರುವಂತೆಯೇ ಬೇಗನೆ ಅಲ್ಲಿಂದ ಕಣ್ಮರೆಯಾದನು.

**ತದಾಪ್ರಭೃತಿ ಲೋಕೇऽಸ್ಮಿಂಲ್ಲಿಂಗಪೂಜಾವಿಧಿಃ ಸ್ಮೃತಃ ।**
**ಲಿಂಗೇ ಪ್ರತಿಷ್ಠಿತಶ್ಶಂಭುರ್ಭುಕ್ತಿಮುಕ್ತಿಪ್ರದಾಯಕಃ ॥ ೩೭ ॥**

**ಲಿಂಗವೇದಿರ್ಮಹಾದೇವೀ ಲಿಂಗಂ ಸಾಕ್ಷಾನ್ಮಹೇಶ್ವರಃ ।**
**ಲಯನಾಲ್ಲಿಂಗಮಿತ್ಯುಕ್ತಂ ತತ್ರೈವ ನಿಖಿಲಂ ಜಗತ್ ॥ ೩೮ ॥**

**ಯಸ್ತು ಲೈಂಗಂ ಪಠೇನ್ನಿತ್ಯಮಾಖ್ಯಾನಂ ಲಿಂಗಸನ್ನಿಧೌ ।**
**ಷಣ್ಮಾಸಾಚ್ಛಿವರೂಪೋ ವೈ ನಾತ್ರ ಕಾರ್ಯಾ ವಿಚಾರಣಾ ॥ ೩೯ ॥**

**ಯಸ್ತು ಲಿಂಗಸಮೀಪೇ ತು ಕಾರ್ಯಂ ಕಿಂಚಿತ್ಕರೋತಿ ಚ ।**
**ತಸ್ಯ ಪುಣ್ಯಫಲಂ ವಕ್ತುಂ ನ ಶಕ್ನೋಮಿ ಮಹಾಮುನೇ ॥ ೪೦ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಪರಮಶಿವತತ್ತ್ವವರ್ಣನೋ ನಾಮ ದಶಮೋऽಧ್ಯಾಯಃ**

---

೩೭. ಅದು ಮೊದಲುಗೊಂಡು ಈ ಲೋಕದಲ್ಲಿ ಲಿಂಗಪೂಜಾವಿಧಾನವು ಆಚರಣೆಗೆ ಬಂದಿತು. ಭೋಗಭಾಗ್ಯಗಳನ್ನೂ ಮೋಕ್ಷಫಲವನ್ನೂ ನೀಡುವ ಆ ಶಂಭುವು, ಲಿಂಗದಲ್ಲಿ ಸದಾ ಸನ್ನಿಹಿತವಾಗಿರುವನು.

೩೮. ಲಿಂಗದ ವೇದಿಕೆಯು (ಪೀಠವು) ಮಹಾದೇವಿಯಾದ ಪಾರ್ವತಿಯೆಂದು ತಿಳಿ. ಲಿಂಗವು ಸಾಕ್ಷಾನ್ಮಹೇಶ್ವರನೇ, ಎಲ್ಲವೂ ಇದರಲ್ಲಿ ಲೀನವಾಗಿ ಹೋಗುವುದರಿಂದಲೇ ಇದಕ್ಕೆ ಲಿಂಗವೆಂಬ ಹೆಸರುಂಟಾಯಿತು. ಸಮಸ್ತ ಪ್ರಪಂಚವೂ ಆ ಲಿಂಗದಲ್ಲೇ ಅಡಕವಾಗಿಬಿಟ್ಟಿದೆ.

೩೯. ಯಾವಾತನು ಲಿಂಗದ ಸನ್ನಿಧಿಯಲ್ಲಿ ಪ್ರತಿನಿತ್ಯವೂ ಈ ಲಿಂಗದ ಮಹಿಮಾಮಯವಾದ ಆಖ್ಯಾನವನ್ನು ಓದುವನೋ ಆತನು ಆರು ತಿಂಗಳೊಳಗಾಗಿ ಶಿವನಂತೆಯೇ ಆಗುವನು. ಈ ಅಂಶದಲ್ಲಿ ವಿಚಾರಮಾಡಬೇಕಾದ ಆವಶ್ಯಕತೆಯಿಲ್ಲ.

೪೦. ಯಾವ ಪುರುಷನು ಶಿವಲಿಂಗದ ಬಳಿಯಲ್ಲಿ ಯಾವುದಾದರೂ ಆಗಲಿ, ಕೆಲಸವನ್ನು ಮಾಡುವನೋ ಆತನ ಪುಣ್ಯಫಲವನ್ನು ಹೇಳಲು ನನಗೆ ಸಾಧ್ಯವಿಲ್ಲ, ಎಂದು ಬ್ರಹ್ಮನು ನುಡಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಪರಮಶಿವತತ್ತ್ವವರ್ಣನವೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸೃಷ್ಟಿಖಂಡೇ

## ಏಕಾದಶೋಽಧ್ಯಾಯಃ

॥ ಋಷಯ ಊಚುಃ ॥

ಸೂತ ಸೂತ ಮಹಾಭಾಗ ವ್ಯಾಸಶಿಷ್ಯ ನಮೋಽಸ್ತು ತೇ ।
ಶ್ರಾವಿತಾಽದ್ಯಾದ್ಭುತಾ ಶೈವಕಥಾ ಪರಮಪಾವನೀ ॥ ೧ ॥

ತತ್ರಾದ್ಭುತಾ ಮಹಾದಿವ್ಯಾ ಲಿಂಗೋತ್ಪತ್ತಿಃ ಶ್ರುತಾ ಶುಭಾ ।
ಶ್ರುತ್ವಾ ಯಸ್ಯಾಃ ಪ್ರಭಾವಂ ಚ ದುಃಖನಾಶೋ ಭವೇದಿಹ ॥ ೨ ॥

---

## ಹನ್ನೊಂದನೆಯ ಅಧ್ಯಾಯವು

೧. ಬಳಿಕ ಶೌನಕಾದಿ ಮುನಿಗಳು ಸೂತಪುರಾಣಿಕನನ್ನು ಕುರಿತು ಇಂತೆಂದರು. ಓ ಸೂತ, ನೀನು ಮಹಾನುಭಾವನು ಮತ್ತು ವ್ಯಾಸಶಿಷ್ಯನು ನಿನಗೆ ನಮಸ್ಕಾರವು. ಈಗ ಅದ್ಭುತವೂ ಪರಮಪಾವನವೂ ಆದ ಶಿವಕಥೆಯನ್ನು ನಿನ್ನಿಂದ ನಾವು ಕೇಳಿದೆವು.

೨. ಯಾವುದರ ಪ್ರಭಾವವನ್ನು ಕೇಳಿದಮಾತ್ರದಿಂದ ಇಲ್ಲಿಯ ದುಃಖಗಳೆಲ್ಲವೂ ಪರಿಹಾರವಾಗುವುವೋ, ಅಂತಹ ಪರಮಾದ್ಭುತವೂ, ದಿವ್ಯವೂ, ಶುಭಕರವೂ ಆದ ಲಿಂಗದ ಉತ್ಪತ್ತಿಯನ್ನೂ ಕೇಳಿದುದಾಯಿತು.

ಬ್ರಹ್ಮನಾರದಸಂವಾದಮನುಸ್ಮೃತ್ಯ ದಯಾನಿಧೇ ।
ಶಿವಾರ್ಚನವಿಧಿಂ ಬ್ರೂಹಿ ಯೇನ ತುಷ್ಟೋ ಭವೇಚ್ಛಿವಃ ॥ ೩ ॥

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈರ್ವಾ ಪೂಜ್ಯತೇ ಶಿವಃ ।
ಕಥಂ ಕಾರ್ಯಂ ಚ ತದ್ಬ್ರೂಹಿ ಯಥಾ ವ್ಯಾಸಮುಖಾಚ್ಛ್ರುತಂ ॥ ೪ ॥

ತಚ್ಛ್ರುತ್ವಾ ವಚನಂ ತೇಷಾಂ ಶರ್ಮದಂ ಶ್ರುತಿಸಂಮತಂ ।
ಉವಾಚ ಸಕಲಂ ಪ್ರೀತ್ಯಾ ಮುನಿಪ್ರಶ್ನಾನುಸಾರತಃ ॥ ೫ ॥

॥ ಸೂತ ಉವಾಚ ॥

ಸಾಧು ಪೃಷ್ಟಂ ಭವದ್ಭಿಶ್ಚ ತದ್ರಹಸ್ಯಂ ಮುನೀಶ್ವರಾಃ ।
ತದಹಂ ಕಥಯಾಮ್ಯದ್ಯ ಯಥಾಬುದ್ಧಿ ಯಥಾಶ್ರುತಂ ॥ ೬ ॥

ಭವದ್ಭಿಃ ಪೃಚ್ಛ್ಯತೇ ಯದ್ವತ್ತಥಾ ವ್ಯಾಸೇನ ವೈ ಪುರಾ ।
ಪೃಷ್ಟಂ ಸನತ್ಕುಮಾರಾಯ ತಚ್ಛ್ರುತಂ ಹ್ಯುಪಮನ್ಯುನಾ ॥ ೭ ॥

---

೩. ಎಲೈ ಕರುಣಾಶಾಲಿಯೇ, ಯಾವರೀತಿ ಪೂಜಿಸಲು ಶಿವನು ಸುಪ್ರೀತನಾಗುವನೋ, ಅಂತಹ ಶಿವಪೂಜಾವಿಧಾನವನ್ನ ಬ್ರಹ್ಮನಾರದಸಂವಾದಕ್ಕೆ ಅನುಸಾರವಾಗಿ ನಮಗೆ ತಿಳಿಸು.

೪. ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ಶಿವನನ್ನು ಪೂಜಿಸುವರಷ್ಟೆ? ಅವರಲ್ಲಿ ಯಾರಾರು ಎಂತೆಂತು ಪೂಜಿಸಬೇಕು? ಎಂಬುದನ್ನು ನೀನು ವ್ಯಾಸನ ಮುಖದಿಂದ ಕೇಳಿದಂತೆ ನಮಗೆ ವಿವರಿಸು.

೫. ಸುಖದಾಯಕವೂ ಶ್ರುತಿಸಮ್ಮತವೂ ಆದ ಆ ಮುನಿಗಳ ಮಾತನ್ನು ಕೇಳಿ ಸೂತಪುರಾಣಿಕನು ಆ ಶೌನಕಾದಿಗಳ ಪ್ರಶ್ನಾನುಸಾರವಾಗಿ ಅದೆಲ್ಲವನ್ನೂ ವಿವರಿಸತೊಡಗಿದನು.

೬. ಎಲೈ ಋಷಿಶ್ರೇಷ್ಠರಿರಾ, ನೀವು ಬಹು ಚೆನ್ನಾಗಿ ಆ ರಹಸ್ಯವನ್ನೇ ಕೇಳಿದಿರಿ ನಾನು ಈಗ, ನನ್ನ ಬುದ್ಧಿ ಇದ್ದಷ್ಟುಮಟ್ಟಿಗೆ ನಾನು ಕೇಳಿದಂತೆ ನಿಮಗೆ ಹೇಳುತ್ತೇನೆ.

೭. ನೀವು ನನ್ನನ್ನು ಈಗ ಕೇಳಿದಂತೆ, ಹಿಂದೆ ವ್ಯಾಸಮಹರ್ಷಿಯು ಸನತ್ಕುಮಾರನನ್ನು ಕೇಳಿದನು. ಅದನ್ನು ಉಪಮನ್ಯುಮಹರ್ಷಿಯು ಕೇಳಿದನು.

ತತೋ ವ್ಯಾಸೇನ ವೈ ಶ್ರುತ್ವಾ ಶಿವಪೂಜಾದಿಕಂ ಚ ಯತ್ ।
ಮಹ್ಯಂ ಚ ಪಾಠಿತಂ ತೇನ ಲೋಕಾನಾಂ ಹಿತಕಾಮ್ಯಯಾ ॥ ೮ ॥

ತಚ್ಛ್ರುತಂ ಚೈವ ಕೃಷ್ಣೇನ ಹ್ಯುಪಮನ್ಯೋರ್ಮಹಾತ್ಮನಃ ।
ತದಹಂ ಕಥಯಿಷ್ಯಾಮಿ ಯಥಾ ಬ್ರಹ್ಮಾವದತ್ಪುರಾ ॥ ೯ ॥

॥ ಬ್ರಹ್ಮೋವಾಚ ॥

ಶೃಣು ನಾರದ ವಕ್ಷ್ಯಾಮಿ ಸಂಕ್ಷೇಪಾಲ್ಲಿಂಗಪೂಜನಂ ।
ವಕ್ತುಂ ವರ್ಷಶತೇನಾಪಿ ನ ಶಕ್ಯಂ ವಿಸ್ತರಾನ್ಮುನೇ ॥ ೧೦ ॥

ಏವಂ ತು ಶಾಂಕರಂ ರೂಪಂ ಸುಖಂ ಸ್ವಚ್ಛಂ ಸನಾತನಂ ।
ಪೂಜಯೇತ್ಪರಯಾ ಭಕ್ತ್ಯಾ ಸರ್ವಕಾಮಫಲಾಪ್ತಯೇ ॥ ೧೧ ॥

ದಾರಿದ್ರ್ಯಂ ರೋಗದುಃಖಂ ಚ ಪೀಡನಂ ಶತ್ರುಸಂಭವಂ ।
ಪಾಪಂ ಚತುರ್ವಿಧಂ ತಾವದ್ಯಾವನ್ನಾರ್ಚಯತೇ ಶಿವಂ ॥ ೧೨ ॥

---

೮. ಬಳಿಕ ವ್ಯಾಸಮಹರ್ಷಿಯು ಸನತ್ಕುಮಾರನಿಂದ ಶಿವಪೂಜಾವಿಧಿಗಳನ್ನು ಕೇಳಿ ಪ್ರಪಂಚಕ್ಕೆ ಹಿತವಾಗಲೆಂದು ಬಯಸಿ ಅದೆಲ್ಲವನ್ನೂ ನನಗೆ ಉಪದೇಶಿಸಿದನು.

೯. ಮಹಾತ್ಮನಾದ ಉಪಮನ್ಯುಮಹರ್ಷಿಯಿಂದ ಅದೇ ಶಿವಪೂಜಾ ವಿಧಾನವನ್ನು ಶ್ರೀಕೃಷ್ಣನು ಕೇಳಿ ತಿಳಿದನು. ಅದನ್ನೇ ನಾನೀಗ ಹಿಂದೆ ಬ್ರಹ್ಮನು ಹೇಳಿದಂತೆ ನಿಮಗೆ ತಿಳಿಸುವೆನು.

೧೦. ಎಲೈ ನಾರದಮಹರ್ಷಿಯೇ, ಕೇಳು, ಲಿಂಗಪೂಜಾಕ್ರಮವನ್ನು ಸಂಕ್ಷೇಪವಾಗಿ ನಿನಗೆ ಹೇಳುವೆನು. ವಿಸ್ತಾರವಾಗಿ ಹೇಳಲು ಹೊರಟರೆ, ನೂರು ವರ್ಷಗಳೂ ಸಾಲಲಾರವು, ಎಂದು ಬ್ರಹ್ಮನು ಹೇಳತೊಡಗಿದರು.

೧೧. ಎಲ್ಲ ಮನೋರಥಗಳನ್ನೂ ಪಡೆಯಬೇಕೆಂಬ ಅಭಿಲಾಷೆಯುಳ್ಳವನು ಸುಖಕರವೂ, ಸ್ವಚ್ಛವೂ, ಸನಾತನವೂ ಆದ ಶಿವನ ಈ ರೀತಿಯಾದ ಸ್ವರೂಪವನ್ನು ಅತಿಶಯವಾದ ಭಕ್ತಿಯಿಂದ ಅರ್ಚಿಸಬೇಕು.

೧೨. ಎಲ್ಲಿಯವರೆಗೆ ಶಿವನನ್ನು ಪೂಜಿಸುವುದಿಲ್ಲವೋ ಅಲ್ಲಿಯವರೆಗೆ ದಾರಿದ್ರ್ಯ, ರೋಗರುಜನಗಳು, ಸಂಕಟಗಳು, ಶತ್ರುಪೀಡೆ ಎಂಬ ನಾಲ್ಕು ವಿಧವಾದ ಪಾಪಗಳೂ ಪೀಡಿಸುವುವು.

**ಸಂಪೂಜಿತೇ ಶಿವೇ ದೇವೇ ಸರ್ವದುಃಖಂ ವಿಲೀಯತೇ ।**
**ಸಂಪದ್ಯತೇ ಸುಖಂ ಸರ್ವಂ ಪಶ್ಚಾನ್ಮುಕ್ತಿರವಾಪ್ಯತೇ ॥ ೧೩ ॥**

**ಯೋ ವೈ ಮಾನುಷ್ಯಮಾಶ್ರಿತ್ಯ ಮುಖ್ಯಂ ಸತಾನತಸ್ಸುಖಂ ।**
**ತೇನ ಪೂಜ್ಯೋ ಮಹಾದೇವಃ ಸರ್ವಕಾರ್ಯಾರ್ಥಸಾಧಕಃ ॥ ೧೪ ॥**

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಶ್ಶೂದ್ರಾಶ್ಚ ವಿಧಿವತ್ಕ್ರಮಾತ್ ।**
**ಶಂಕರಾರ್ಚಾಂ ಪ್ರಕುರ್ವಂತು ಸರ್ವಕಾಮಾರ್ಥಸಿದ್ಧಯೇ ॥ ೧೫ ॥**

**ಪ್ರಾತಃಕಾಲೇ ಸಮುತ್ಥಾಯ ಮುಹೂರ್ತೇ ಬ್ರಹ್ಮಸಂಜ್ಞಕೇ ।**
**ಗುರೋಶ್ಚ ಸ್ಮರಣಂ ಕೃತ್ವಾ ಶಂಭೋಶ್ಚೈವ ತಥಾ ಪುನಃ ॥ ೧೬ ॥**

**ತೀರ್ಥಾನಾಂ ಸ್ಮರಣಂ ಕೃತ್ವಾ ಧ್ಯಾನಂ ಚೈವ ಹರೇರಪಿ ।**
**ಮಮಾಪಿ ನಿರ್ಜರಾಣಾಂ ವೈ ಮುನ್ಯಾದೀನಾಂ ತಥಾ ಮುನೇ ॥ ೧೭ ॥**

---

೧೩. ದೇವದೇವನಾದ ಶಿವನನ್ನು ಪೂಜಿಸಿದ ಬಳಿಕ ಎಲ್ಲ ದುಃಖಗಳೂ ಅಡಗಿ ಹೋಗುವುವು, ಎಲ್ಲವೂ ಸುಖವಾಗಿ ಪರಿಣಮಿಸುವುದು. ಬಳಿಕ ಮುಕ್ತಿಯೂ ದೊರಕುವುದು.

೧೪. ಯಾವಾತನು ಮನುಷ್ಯಜನ್ಮವನ್ನು ಪಡೆದು, ಅವಿಚ್ಛಿನ್ನವಾಗಿ ಸುಖವನ್ನು ಪಡೆಯಬೇಕೆಂದು ಬಯಸುವನೋ ಆತನು, ಎಲ್ಲ ಕೆಲಸಗಳೂ ಸಫಲವಾಗಲು ಕಾರಣನಾದ ಶಿವನನ್ನು ಅರ್ಚಿಸಬೇಕು.

೧೫. ಎಲ್ಲ ಇಷ್ಟಾರ್ಥಗಳನ್ನೂ ಪಡೆಯಲೋಸುಗ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ಕ್ರಮವಾಗಿ ವಿಧಿಯನ್ನನುಸರಿಸಿ ಶಿವನ ಪೂಜೆಯನ್ನು ಮಾಡಬೇಕು.

೧೬-೧೮. ಬೆಳಿಗ್ಗೆ ಬ್ರಾಹ್ಮಮುಹೂರ್ತದಲ್ಲಿಯೇ (ಉದಯಕ್ಕೆ ಎರಡು ಗಂಟೆ ಮೊದಲು) ಎದ್ದು, ತನ್ನ ಗುರುವನ್ನು ಸ್ಮರಿಸಿ ಶಿವನನ್ನೂ, ಪುಣ್ಯತೀರ್ಥಗಳನ್ನೂ, ವಿಷ್ಣುವನ್ನೂ, ನನ್ನನ್ನೂ, ದೇವತೆಗಳನ್ನೂ, ಮಹರ್ಷಿಗಳನ್ನೂ ಸ್ಮರಿಸಬೇಕು.

ತತಃ ಸ್ತೋತ್ರಂ ಶಂಭುನಾಮ ಗೃಹ್ಣೀಯಾದ್ವಿಧಿಪೂರ್ವಕಂ ।
ತಥೋತ್ಥಾಯ ಮಲೋತ್ಸರ್ಗಂ ದಕ್ಷಿಣಸ್ಯಾಂ ಚರೇದ್ದಿಶಿ ॥ ೧೮ ॥

ಏಕಾಂತೇ ತು ವಿಧಿಂ ಕುರ್ಯಾನ್ಮಲೋತ್ಸರ್ಗಸ್ಯ ಯಚ್ಛ್ರುತಂ ।
ತದೇವ ಕಥಯಾಮ್ಯದ್ಯ ಶೃಣ್ವಾಧಾಯ ಮನೋ ಮುನೇ ॥ ೧೯ ॥

ಶುದ್ಧಾಂ ಮೃದಂ ದ್ವಿಜೋ ಲಿಪ್ಯಾತ್ಪಂಚವಾರಂ ವಿಶುದ್ಧಯೇ ।
ಕ್ಷತ್ರಿಯಶ್ಚ ಚತುರ್ವಾರಂ ವೈಶ್ಯೋ ವಾರತ್ರಯಂ ತಥಾ ॥ ೨೦ ॥

ಶೂದ್ರೋ ದ್ವಿವಾರಂ ಚ ಮೃದಂ ಗೃಹ್ಣೀಯಾದ್ವಿಧಿಶುದ್ಧಯೇ ।
ಗುದೇ ವಾಥ ಸಕೃಲ್ಲಿಂಗೇ ವಾರಮೇಕಂ ಪ್ರಯತ್ನತಃ ॥ ೨೧ ॥

ದಶವಾರಂ ವಾಮಹಸ್ತೇ ಸಪ್ತವಾರಂ ದ್ವಯೋಸ್ತಥಾ ।
ಪ್ರತ್ಯೇಕಂ ಪಾದಯೋಸ್ತಾತ ತ್ರಿವಾರಂ ಕರಯೋಃ ಪುನಃ ॥ ೨೨ ॥

---

ಬಳಿಕ ಸ್ತೋತ್ರಗಳನ್ನೂ ಶಿವನ ನಾಮಗಳನ್ನೂ ವಿಧಿಪೂರ್ವಕವಾಗಿ ಕೀರ್ತನೆ ಮಾಡಬೇಕು. ಹಾಗೆಯೇ ಎದ್ದು ದಕ್ಷಿಣದಿಕ್ಕಿನ ಕಡೆಗೆ ಹೋಗಿ ಮಲವಿಸರ್ಜನೆಯನ್ನು ಮಾಡಬೇಕು.

೧೯. ಮಲವಿಸರ್ಜನೆಯನ್ನು ರಹಸ್ಯವಾದ ಸ್ಥಳದಲ್ಲಿ ಮಾಡಬೇಕೆಂದು ಕೇಳಿರುವಿರಷ್ಟೆ? ಅದನ್ನೇ ನಿಮಗೆ ವಿವರಿಸುವೆನು. ಮನಸ್ಸಿಟ್ಟು ಕೇಳಿ.

೨೦-೨೧. ಮಲವಿಸರ್ಜನೆಯಾದನಂತರ ಶುದ್ಧಿಯಾಗಲು, ಶುದ್ಧವಾದ ಮಣ್ಣನ್ನು, ಬ್ರಾಹ್ಮಣನು ಐದು ಬಾರಿಯೂ, ಕ್ಷತ್ರಿಯನು ನಾಲ್ಕು ಸಲವೂ, ವೈಶ್ಯನು ಮೂರು ಸಾರಿಯೂ, ಶೂದ್ರನು ಎರಡು ಸರ್ತಿಯೂ ತೆಗೆದುಕೊಂಡು, ಗುದಭಾಗದಲ್ಲಿ ಉಜ್ಜಿ ತೊಳೆದುಕೊಳ್ಳುವುದಲ್ಲದೆ, ಒಂದುಸಲ ಲಿಂಗದ ಮುಂಭಾಗವನ್ನೂ ಮಣ್ಣು ನೀರಿನಿಂದ ಚೆನ್ನಾಗಿ ತೊಳೆದುಕೊಳ್ಳಬೇಕು.

೨೨. ಎಡಗೈಯನ್ನು ಹತ್ತು ಸಲವೂ, ಪ್ರತ್ಯೇಕವಾಗಿ ಎರಡು ಕಾಲುಗಳನ್ನೂ ಏಳು ಸಲವೂ, ಮಣ್ಣು ಹಾಕಿ ಉಜ್ಜಿ ತೊಳೆದಮೇಲೆ ಮತ್ತೊಮ್ಮೆ ಎರಡು ಕೈಗಳನ್ನೂ ಮೂರು ಸಲ ಮಣ್ಣಿನಿಂದ ತೊಳೆಯಬೇಕು.

ಸ್ತ್ರೀಭಿಶ್ಚ ಶೂದ್ರವತ್ಕಾರ್ಯಂ ಮೃದಾಗ್ರಹಣಮುತ್ತಮಂ ।
ಹಸ್ತೌ ಪಾದೌ ಚ ಪ್ರಕ್ಷಾಲ್ಯ ಪೂರ್ವವನ್ಮೃದಮಾಹರೇತ್ ॥ ೨೩ ॥

ದಂತಕಾಷ್ಠಂ ತತಃ ಕುರ್ಯಾತ್ಸ್ವವರ್ಣಕ್ರಮತೋ ನರ ॥ ೨೪ ॥

ವಿಪ್ರಃ ಕುರ್ಯಾದ್ದಂತಕಾಷ್ಠಂ ದ್ವಾದಶಾಂಗುಲಮಾನತಃ ।
ಏಕಾದಶಾಂಗುಲಂ ರಾಜಾ ವೈಶ್ಯಃ ಕುರ್ಯಾದ್ದಶಾಂಗುಲಂ ॥ ೨೫ ॥

ಶೂದ್ರೋ ನವಾಂಗುಲಂ ಕುರ್ಯಾದಿತಿ ಮಾನಮಿದಂ ಸ್ಮೃತಂ ।
ಕಾಲದೋಷಂ ವಿಚಾರ್ಯೈವ ಮನುದೃಷ್ಟಂ ವಿವರ್ಜಯೇತ್ ॥ ೨೬ ॥

ಷಷ್ಠ್ಯಾದ್ಯಾಮಶ್ಚ ನವಮೀ ವ್ರತಮಸ್ತಂ ರವೇರ್ದಿನಂ ।
ತಥಾ ಶ್ರಾದ್ಧದಿನಂ ತಾತ ನಿಷಿದ್ಧಂ ರದಧಾವನೇ ॥ ೨೭ ॥

---

೨೩. ಹೆಂಗಸರು ಸಹ ಮೇಲೆ ಶೂದ್ರರಿಗೆ ಹೇಳಿದಂತೆ, ಮಣ್ಣನ್ನು ತೆಗೆದುಕೊಳ್ಳಬೇಕು. ಕೈಕಾಲುಗಳನ್ನು ತೊಳೆದುಕೊಂಡಮೇಲೆ ಮತ್ತೊಮ್ಮೆ ಮಣ್ಣಿನಿಂದ ತೊಳೆಯಬೇಕು.

೨೪-೨೫. ಆಮೇಲೆ ಮಾನವನು ತನ್ನ ಜಾತಿಗನುಗುಣವಾಗಿ ಹಲ್ಲುಜ್ಜುವ ಕಡ್ಡಿಯನ್ನು ಮಾಡಿಕೊಳ್ಳಬೇಕು. ಬ್ರಾಹ್ಮಣನಿಗೆ ಹನ್ನೆರಡು ಅಂಗುಲವೂ, ಕ್ಷತ್ರಿಯನಿಗೆ ಹನ್ನೊಂದಂಗುಲವೂ, ವೈಶ್ಯನಿಗೆ ಹತ್ತಂಗುಲವೂ, ಶೂದ್ರನಿಗೆ ಒಂಭತ್ತು ಅಂಗುಲವೂ ದಂತಕಾಷ್ಠವು ಉದ್ದವಾಗಿರಬೇಕು. ಇದು ಹಲ್ಲು ಉಜ್ಜುವ ಕಡ್ಡಿಯ ಶಾಸ್ತ್ರೀಯವಾದ ಅಳತೆ.

೨೬-೨೭. ಸ್ಮೃತಿಕಾರನಾದ ಮನುವು ಅಭಿಪ್ರಾಯಪಟ್ಟಂತೆ ಕಾಲದೋಷಗಳನ್ನು ವಿಚಾರಿಸಿ, ಆಯಾ ದಿನಗಳನ್ನು ಬಿಟ್ಟುಬಿಡಬೇಕು. ಇಂತಹವು ಯಾವುವೆಂದರೆ, ಷಷ್ಠೀ ಅಮಾವಾಸ್ಯೆ, ನವಮೀ, ವ್ರತದಿವಸ, ಅಸ್ತದಿನ, ಭಾನುವಾರ, ತಂದೆ ತಾಯಿ ಮೊದಲಾದವರ ಶ್ರಾದ್ಧದಿನಗಳು. ಈ ದಿನಗಳಲ್ಲಿ ಹಲ್ಲು ಉಜ್ಜಬಾರದು.

೨೮. ದಂತಧಾವನಾದಿಗಳಾದ ಮೇಲೆ ಕ್ರಮವಾಗಿ ಜಲಾಶಯಗಳಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಬೇಕು. ಸ್ಥಲವಿಶೇಷಕ್ಕೂ ಕಾಲವಿಶೇಷಕ್ಕೂ ಅನು

**ಸ್ನಾನಂ ತು ವಿಧಿವತ್ಕಾರ್ಯಂ ತೀರ್ಥಾದಿಷು ಕ್ರಮೇಣ ತು ।**
**ದೇಶಕಾಲವಿಶೇಷೇಣ ಸ್ನಾನಂ ಕಾರ್ಯಂ ಸಮಂತ್ರಕಂ ॥ ೨೮ ॥**

**ಆಚಮ್ಯ ಪ್ರಥಮಂ ತತ್ರ ಧೌತವಸ್ತ್ರೇಣ ಚಾಧರೇತ್ ।**
**ಏಕಾಂತೇ ಸುಸ್ಥಲೇ ಸ್ಥಿತ್ವಾ ಸಂಧ್ಯಾವಿಧಿಮಥಾಚರೇತ್ ॥ ೨೯ ॥**

**ಯಥಾಯೋಗ್ಯಂ ವಿಧಿಂ ಕೃತ್ವಾ ಪೂಜಾವಿಧಿಮಥಾರಭೇತ್ ।**
**ಮನಸ್ತು ಸುಸ್ಥಿರಂ ಕೃತ್ವಾ ಪೂಜಾಗಾರಂ ಪ್ರವಿಶ್ಯ ಚ ॥ ೩೦ ॥**

**ಪೂಜಾವಿಧಿಂ ಸಮಾದಾಯ ಸ್ವಾಸನೇ ಹ್ಯುಪವಿಶ್ಯ ವೈ ।**
**ನ್ಯಾಸಾದಿಕಂ ವಿಧಾಯಾದೌ ಪೂಜಯೇತ್ಕ್ರಮಶೋ ಹರಂ ॥ ೩೧ ॥**

**ಪ್ರಥಮಂ ಚ ಗಣಾಧೀಶಂ ದ್ವಾರಪಾಲಾಂಸ್ತಥೈವ ಚ ।**
**ದಿಕ್ಪಾಲಾಂಶ್ಚ ಸುಸಂಪೂಜ್ಯ ಪಶ್ಚಾತ್ಪೀಠಂ ಪ್ರಕಲ್ಪಯೇತ್ ॥ ೩೨ ॥**

---

ಗುಣವಾಗಿ, ಮಂತ್ರಪೂರ್ವಕವಾಗಿ, ಸ್ನಾನವನ್ನಾಚರಿಸಬೇಕು. ಸ್ನಾನಾನಂತರ ಆಚಮನವನ್ನು ಮೊದಲುಮಾಡಿ, ಬಳಿಕ ಒಗೆದ ಮಡಿ ಬಟ್ಟೆಯನ್ನುಟ್ಟುಕೊಳ್ಳಬೇಕು.

೨೯. ಬಳಿಕ ನಿರ್ಜನವಾದ ಸ್ಥಳದಲ್ಲಿ ಒಳ್ಳೆಯ ಕಡೆ ಕುಳಿತು ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನಾಚರಿಸಬೇಕು. ನಿತ್ಯಕರ್ಮವನ್ನು ವಿಧಿಪೂರ್ವಕವಾಗಿ ನೆರವೇರಿಸಿದ ಮೇಲೆ, ಪೂಜಾವಿಧಿಯನ್ನು ಆರಂಭಿಸಬೇಕು.

೩೦-೩೧. ಮನಸ್ಸಿನಲ್ಲಿ ಚಂಚಲತೆಯನ್ನು ಬಿಟ್ಟು, ಏಕಾಗ್ರತೆಯಿಂದ, ಪೂಜಾಗೃಹಕ್ಕೆ ಹೋಗಿ ಪೂಜೆಗೆ ಬೇಕಾದ ಉಪಕರಣಗಳನ್ನೆಲ್ಲಾ ಸಜ್ಜುಗೊಳಿಸಿಕೊಂಡು ತನ್ನ ಪೀಠದಲ್ಲಿ ಕುಳಿತು, ಮೊದಲು ನ್ಯಾಸಾದಿಗಳನ್ನು ಮಾಡಿಕೊಂಡು ಕ್ರಮವಾಗಿ ಶಿವನನ್ನು ಪೂಜಿಸಬೇಕು.

೩೨. ಮೊದಲು ಗಣಪತಿಯನ್ನೂ ಆಮೇಲೆ ದ್ವಾರಪಾಲಕರನ್ನೂ ಇಂದ್ರಾದಿ ದಿಕ್ಪಾಲಕರನ್ನೂ ಚೆನ್ನಾಗಿ ಪೂಜಿಸಿ, ಬಳಿಕ ಪೀಠವನ್ನು ಸಿದ್ಧಪಡಿಸಿಕೊಳ್ಳಬೇಕು.

೩೩-೩೫. ಇಲ್ಲದಿದ್ದರೆ, ಅಷ್ಟದಲವನ್ನು ಮಾಡಿ, ಪೂಜಾದ್ರವ್ಯಗಳನ್ನು ಅಣಿಮಾಡಿಕೊಂಡು, ಅದರ ಬಳಿ ಕುಳಿತು ಆ ಅಷ್ಟದಲದಲ್ಲಿ ಪ್ರಭುವಾದ ಶಿವನನ್ನು ಸ್ಥಾಪಿಸಿ ತಾನು ಮೂರಾವೃತ್ತಿ ಆಚಮನವನ್ನು ಮಾಡಿ, ಮತ್ತೆ ಕೈಗಳನ್ನು ತೊಳೆದು

**ಅಥ ವ್ಯಾಘ್ರದಲಂ ಕೃತ್ವಾ ಪೂಜಾದ್ರವ್ಯಂ ಸಮೀಪತಃ ।**
**ಉಪವಿಶ್ಯ ತತಸ್ತತ್ರ ಚೋಪವೇಶ್ಯ ಶಿವಂ ಪ್ರಭುಂ ॥ ೩೩ ॥**

**ತ್ರಯಮಾಚಮನಂ ಕೃತ್ವಾ ಪ್ರಕ್ಷಾಲ್ಯ ಚ ಪುನಃ ಕರೌ ।**
**ಪ್ರಾಣಾಯಾಮತ್ರಯಂ ಕೃತ್ವಾ ಮಧ್ಯೇ ಧ್ಯಾಯೇಚ್ಚ ತ್ರ್ಯಂಬಕಂ ॥ ೩೪ ॥**

**ಪಂಚವಕ್ತ್ರಂ ದಶಭುಜಂ ಶುದ್ಧಸ್ಫಟಿಕಸನ್ನಿಭಂ ।**
**ಸರ್ವಾಭರಣಸಂಯುಕ್ತಂ ವ್ಯಾಘ್ರಚರ್ಮೋತ್ತರೀಯಕಂ ॥ ೩೫ ॥**

**ತಸ್ಯ ಸಾರೂಪ್ಯತಾಂ ಸ್ಮೃತ್ವಾ ದಹೇತ್ಪಾಪಂ ನರಸ್ಸದಾ ।**
**ಶಿವಂ ತತಃ ಸಮುತ್ಥಾಪ್ಯ ಪೂಜಯೇತ್ಪರಮೇಶ್ವರಂ ॥ ೩೬ ॥**

**ದೇಹಶುದ್ಧಿಂ ತತಃ ಕೃತ್ವಾ ಮೂಲಮಂತ್ರಂ ನ್ಯಸೇತ್ಕ್ರಮಾತ್ ।**
**ಸರ್ವತ್ರ ಪ್ರಣವೇನೈವ ಷಡಂಗನ್ಯಾಸಮಾಚರೇತ್ ॥ ೩೭ ॥**

**ಕೃತ್ವಾ ಹೃದಿ ಪ್ರಯೋಗಂ ಚ ತತಃ ಪೂಜಾಂ ಸಮಾಚರೇತ್ ।**
**ಪಾದ್ಯಾರ್ಘ್ಯಾಚಮನಾರ್ಥಂ ಚ ಪಾತ್ರಾಣಿ ಚ ಪ್ರಕಲ್ಪಯೇತ್ ॥ ೩೮ ॥**

---

ಕೊಂಡು, ಮೂರುಸಲ ಪ್ರಾಣಾಯಾಮವನ್ನು ಮಾಡಿದನಂತರ, ಮೂರು ಕಣ್ಣುಗಳೂ, ಐದು ಮುಖಗಳೂ, ಹತ್ತು ತೋಳುಗಳೂ ಇರುವಂಥಾ, ಸ್ಫಟಿಕದಂತೆ ಶುಭ್ರವಾದ ದೇಹವನ್ನು ಧರಿಸಿರುವ, ವಿವಿಧವಾದ ಒಡವೆಗಳಿಂದ ಅಲಂಕೃತನಾದ, ಹುಲಿಯ ಚರ್ಮವನ್ನು ಹೊದ್ದ, ಶಿವನನ್ನು ಧ್ಯಾನಮಾಡಬೇಕು. ಆ ಶಿವನಂತೆಯೇ ತಾನೂ ಇರುವೆನೆಂದು ತಿಳಿದರೆ ಮನುಷ್ಯನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಳ್ಳುವನು.

೩೬. ಬಳಿಕ ಶಿವನನ್ನು ಎಬ್ಬಿಸಿ ಆ ಪರಮೇಶ್ವರನನ್ನು ಪೂಜಿಸಬೇಕು. ಆಮೇಲೆ ಶರೀರಶುದ್ಧಿಯನ್ನು ಮಾಡಿಕೊಂಡು ಕ್ರಮವಾಗಿ ಮೂಲಮಂತ್ರವನ್ನು ಆಯಾ ಸ್ಥಳಗಳಲ್ಲಿಡಬೇಕು.

೩೭. ಎಲ್ಲ ಕಡೆಯೂ ಪ್ರಣವದಿಂದಲೇ ಷಡಂಗನ್ಯಾಸವನ್ನು ಮಾಡಬೇಕು, ಹಾಗೆಯೇ ಹೃದಯಾದಿನ್ಯಾಸವನ್ನೂ ಮಾಡಿದ ಬಳಿಕ ಪೂಜೆಯನ್ನು ಪ್ರಾರಂಭ ಮಾಡಬೇಕು.

೩೮. ಪಾದ್ಯಕ್ಕೂ, ಅರ್ಘ್ಯಕ್ಕೂ, ಆಚಮನೀಯಕ್ಕೂ ಬೇರೆ ಬೇರೆಯಾಗಿ ಮೂರು ಪಾತ್ರೆಗಳನ್ನಿಡಬೇಕು. ಹೀಗೆ ವಿಧಿಗನುಸಾರವಾಗಿ, ಒಂಭತ್ತು ಕುಂಭಗಳನ್ನು ಪ್ರಾಜ್ಞನಾದವನು ಮುಂದೆ ಸ್ಥಾಪಿಸಬೇಕು.

ಸ್ಥಾಪಯೇದ್ವಿಧಿನಾಕುಂಭಾನ್ನವ ಧೀಮಾನ್ಯಥಾವಿಧಿ ।
ದರ್ಭೈರಾಚ್ಛಾದ್ಯ ತೈರೇವ ಸಂಸ್ಥಾಪ್ಯಾಭ್ಯುಕ್ಷ್ಯ ವಾರಿಣಾ ॥ ೩೯ ॥

ತೇಷು ತೇಷು ಚ ಸರ್ವೇಷು ಕ್ಷಿಪೇತ್ತೋಯಂ ಸುಶೀತಲಂ ।
ಪ್ರಣವೇನ ಕ್ಷಿಪೇತ್ತೇಷು ದ್ರವ್ಯಾಣ್ಯಾಲೋಕ್ಯ ಬುದ್ಧಿಮಾನ್ ॥ ೪೦ ॥

ಉಶೀರಂ ಚಂದನಂ ಚೈವ ಪಾದ್ಯೇ ತು ಪರಿಕಲ್ಪಯೇತ್ ।
ಜಾತೀಕಂಕೋಲಕರ್ಪೂರವಟಮೂಲತಮಾಲಕಂ ॥ ೪೧ ॥

ಚೂರ್ಣಯಿತ್ವಾ ಯಥಾನ್ಯಾಯಂ ಕ್ಷಿಪೇದಾಚಮನೀಯಕೇ ।
ಏತತ್ಸರ್ವೇಷು ಪಾತ್ರೇಷು ದಾಪಯೇಚ್ಚಂದನಾನ್ವಿತಂ ॥ ೪೨ ॥

ಪಾರ್ಶ್ವಯೋರ್ದೇವದೇವಸ್ಯ ನಂದೀಶಂ ತು ಸಮರ್ಚಯೇತ್ ।
ಗಂಧೈರ್ಧೂಪೈಸ್ತಥಾ ದೀಪೈರ್ವಿವಿಧೈಃ ಪೂಜಯೇಚ್ಛಿವಂ ॥ ೪೩ ॥

---

೩೯. ಆ ಒಂಭತ್ತು ಕುಂಭಗಳನ್ನೂ ದರ್ಭೆಗಳ ಮೇಲಿರಿಸಿ, ಅವುಗಳ ಮೇಲೆ ದರ್ಭೆಗಳನ್ನು ಮುಚ್ಚಬೇಕು. ಬಳಿಕ ನೀರಿನಿಂದ ಪ್ರೋಕ್ಷಿಸಿ ಆ ಎಲ್ಲ ಕುಂಭಗಳಲ್ಲೂ ತಂಪಾಗಿರುವ ಹಿತಕರವಾದ ನೀರನ್ನು ಹಾಕಬೇಕು.

೪೦. ಬುದ್ಧಿವಂತನಾದ ಸಾಧಕನು ಉತ್ತಮ ದ್ರವ್ಯಗಳನ್ನು ನೋಡಿ, ಆ ಕುಂಭಗಳಲ್ಲಿ ಹಾಕಬೇಕು. ಪಾದ್ಯದ ಬಟ್ಟಲಿನಲ್ಲಿ ಲಾವಂಚವನ್ನೂ ಶ್ರೀಗಂಧ ವನ್ನೂ ಹಾಕಬೇಕು.

೪೧. ಜಾಜೀಕಾಯಿ, ಕಂಕೋಲ, ಪಚ್ಚಕರ್ಪೂರ, ಆಲದಬೇರು, ಹೊಂಗೆಯ ಚಿಗುರು ಇವೆಲ್ಲವನ್ನೂ ಅರೆದು ಪುಡಿಮಾಡಿ ಆ ಪುಡಿಯನ್ನು ಹದವರಿತು ಆಚಮ ನೀಯ ಪಾತ್ರೆಯಲ್ಲಿ ಬೆರೆಸಬೇಕು. ಉಳಿದ ಎಲ್ಲ ಪಾತ್ರೆಗಳಲ್ಲೂ ಇದನ್ನೇ ಶ್ರೀಗಂಧ ದೊಡನೆ ಬೆರೆಸಿ ಸೇರಿಸಬೇಕು.

೪೨. ದೇವದೇವನಾದ ಶಿವನ ಪಕ್ಕಗಳಲ್ಲಿ ನಂದೀಶ್ವರನನ್ನು ಪೂಜಿಸಬೇಕು. ಬಳಿಕ ಶಿವನನ್ನು ಗಂಧ, ಧೂಪ, ದೀಪ ಮೊದಲಾದುವುಗಳಿಂದ ಅರ್ಚಿಸಬೇಕು.

೪೩. ಬಳಿಕ ಲಿಂಗಶುದ್ಧಿಯನ್ನು ಮಾಡಿ ನರನು ಹರ್ಷಚಿತ್ತನಾಗಿ, ಓಂಕಾ ರವೇ ಮೊದಲಲ್ಲಿಯೂ, ' ನಮಃ ' ಎಂಬುದು ಕಡೆಯಲ್ಲಿಯೂ ಉಳ್ಳ ( ಓಂ ಶಿವಾಯ ನಮಃ :—ಇತ್ಯಾದಿ) ನಾನಾಮಂತ್ರಗಳಿಂದ ವಿಧ್ಯುಕ್ತವಾಗಿ ಪೂಜಿಸಬೇಕು.

**ಲಿಂಗಶುದ್ಧಿಂ ತತಃ ಕೃತ್ವಾ ಮುದಾಯುಕ್ತೋ ನರಸ್ತದಾ ।**
**ಯಥೋಚಿತಂ ತು ಮಂತ್ರೌಘೈಃ ಪ್ರಣವಾದಿನಮೋಂತಕೈಃ ॥ ೪೪ ॥**

**ಕಲ್ಪದಾಯೇದಾಸನಂ ಸ್ವಸ್ತಿಪದ್ಮಾದಿ ಪ್ರಣವೇನ ತು ।**
**ತಸ್ಮಾತ್ಪೂರ್ವದಿಶಂ ಸಾಕ್ಷಾದಣಿಮಾಮಯಮಕ್ಷರಂ ॥ ೪೫ ॥**

**ಲಘಿಮಾ ದಕ್ಷಿಣಂ ಚೈವ ಮಹಿಮಾ ಪಶ್ಚಿಮಂ ತಥಾ ।**
**ಪ್ರಾಪ್ತಿಶ್ಚೈವೋತ್ತರಂ ಪತ್ರಂ ಪ್ರಾಕಾಮ್ಯಂ ಪಾವಕಸ್ಯ ಚ ॥ ೪೬ ॥**

**ಈಶಿತ್ವಂ ನೈಋರ್ತಂ ಪತ್ರಂ ವಶಿತ್ವಂ ವಾಯುಗೋಚರೇ ।**
**ಸರ್ವಜ್ಞತ್ವಂ ತಥೈಶಾನ್ಯಂ ಕರ್ಣಿಕಾ ಸೋಮ ಉಚ್ಯತೇ ॥ ೪೭ ॥**

**ಸೋಮಸ್ಯಾಧಸ್ತಥಾ ಸೂರ್ಯಸ್ತಸ್ಯಾಧಃ ಪಾವಕಸ್ತ್ವಯಂ ।**
**ಧರ್ಮಾದೀನಪಿ ತಸ್ಯಾಧೋ ಭವತಃ ಕಲ್ಪಯೇತ್ಕ್ರಮಾತ್ ॥ ೪೮ ॥**

**ಅವ್ಯಕ್ತಾದಿ ಚತುರ್ದಿಕ್ಷು ಸೋಮಸ್ಯಾಂತೇ ಗುಣತ್ರಯಂ ।**
**ಸದ್ಯೋಜಾತಂ ಪ್ರವಕ್ಷ್ಯಾಮೀತ್ಯಾವಾಹ್ಯ ಪರಮೇಶ್ವರಂ ॥ ೪೯ ॥**

---

೪೪. ಓಂಕಾರೋಚ್ಚಾರಣಪೂರ್ವಕವಾಗಿ ಸ್ವಸ್ತಿಕ, ಪದ್ಮ ಮೊದಲಾದುವನ್ನು ಆಸನವನ್ನಾಗಿ ಕಲ್ಪಿಸಬೇಕು.

೪೫-೪೮. ಆ ಪೀಠದ ಪೂರ್ವದಳದಲ್ಲಿ ಅಣಿಮಾಮಯವಾದ ಅಕ್ಷರವನ್ನೂ, ದಕ್ಷಿಣದಿಕ್ಕಿನ ದಳದಲ್ಲಿ ಲಘಿಮೆಯನ್ನೂ ಪಶ್ಚಿಮದಳದಲ್ಲಿ ಮಹಿಮೆಯನ್ನೂ, ಉತ್ತರ ದಳದಲ್ಲಿ ಪ್ರಾಪ್ತಿಯನ್ನೂ, ಆಗ್ನೇಯಭಾಗದ ದಳದಲ್ಲಿ ಪ್ರಾಕಾಮ್ಯವನ್ನೂ, ನೈರುತ್ಯ ದಿಕ್ಕಿನ ದಳದಲ್ಲಿ ಈಶಿತ್ವವನ್ನೂ, ವಾಯುವ್ಯದಳದಲ್ಲಿ ವಶಿತ್ವವನ್ನೂ, ಈಶಾನ್ಯ ದಿಕ್ಕಿನಲ್ಲಿ ಸರ್ವಜ್ಞತ್ವವನ್ನೂ, ಕರ್ಣಿಕೆಯಲ್ಲಿ ಸೋಮಮಂಡಲವನ್ನೂ, ಅದರ ಕೆಳಗೆ ಸೂರ್ಯಮಂಡಲವನ್ನೂ, ಅದರ ಕೆಳಗೆ ಅಗ್ನಿಮಂಡಲವನ್ನೂ, ಅದರ ಕೆಳಗೆ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಾದಿಗಳನ್ನೂ ಭಾವಿಸುವುದಲ್ಲದೆ ಆ ಶಿವನಿಗೆ ಪೂರ್ವ ಮೊದಲಾದ ನಾಲ್ಕು ದಿಕ್ಕುಗಳಲ್ಲಿಯೂ, ಅವ್ಯಕ್ತ, ಮಹತ್ತು, ಅಹಂಕಾರ, ಬುದ್ಧಿಗಳನ್ನೂ, ಕರ್ಣಿಕೆಯ ಮೇಲಿರುವ ಸೋಮಮಂಡಲದ ಮೇಲೆ ಸತ್ವರಜಸ್ತಮೋಗುಣಗಳನ್ನೂ ಭಾವಿಸಬೇಕು.

೪೯-೫೦. ಸದ್ಯೋಜಾತಂಪ್ರಪದ್ಯಾಮಿ ಎಂಬ ಮಂತ್ರದಿಂದ ಆ ಪರಶಿವನನ್ನು ಆವಾಹಿಸಬೇಕು. 'ವಾಮದೇವಾಯನಮಃ' ಎಂಬ ಮಂತ್ರದಿಂದ ಆತನನ್ನು ಆಸ

ವಾಮದೇವೇನ ಮಂತ್ರೇಣ ತಿಷ್ಠೇಚ್ಚೈವಾಸನೋಪರಿ ।
ಸಾನ್ನಿಧ್ಯಂ ರುದ್ರಗಾಯತ್ರ್ಯಾ ಅಘೋರೇಣ ನಿರೋಧಯೇತ್ ॥ ೫೦ ॥

ಈಶಾನಂ ಸರ್ವವಿದ್ಯಾನಾಮಿತಿ ಮಂತ್ರೇಣ ಪೂಜಯೇತ್ ।
ಪಾದ್ಯಮಾಚಮನೀಯಂ ಚ ವಿಧಾಯಾರ್ಘ್ಯಂ ಪ್ರದಾಪಯೇತ್ ॥ ೫೧ ॥

ಸ್ನಾಪಯೇದ್ವಿಧಿನಾ ರುದ್ರಂ ಗಂಧಚಂದನವಾರಿಣಾ ।
ಪಂಚಗವ್ಯವಿಧಾನೇನ ಗೃಹ್ಯ ಪಾತ್ರೇಽಭಿಮಂತ್ರ್ಯ ಚ ॥ ೫೨ ॥

ಪ್ರಣವೇನೈವ ಗವ್ಯೇನ ಸ್ನಾಪಯೇತ್ಪಯಸಾ ಚ ತಂ ।
ದಧ್ನಾ ಚ ಮಧುನಾ ಚೈವ ತಥಾ ಚೇಕ್ಷುರಸೇನ ತು ॥ ೫೩ ॥

ಘೃತೇನ ತು ತಥಾ ಪೂಜ್ಯ ಸರ್ವಕಾಮಹಿತಾವಹಂ ।
ಪುಣ್ಯೈರ್ದ್ರವ್ಯೈರ್ಮಹಾದೇವಂ ಪ್ರಣವೇನಾಭಿಷೇಚಯೇತ್ ॥ ೫೪ ॥

ಪವಿತ್ರಜಲಭಾಂಡೇಷು ಮಂತ್ರೈಸ್ತೋಯಂ ಕ್ಷಿಪೇತ್ತತಃ ।
ಶುದ್ಧೀಕೃತ್ಯ ಯಥಾನ್ಯಾಯಂ ಸಿತವಸ್ತ್ರೇಣ ಸಾಧಕಃ ॥ ೫೫ ॥

---

ನವ ಮೇಲೆ ಕುಳ್ಳಿರಿಸಬೇಕು. 'ತತ್ಪುರುಷಾಯವಿದ್ಮಹೇ' ಎಂಬ ರುದ್ರಗಾಯತ್ರಿಯಿಂದ ಆ ಶಿವನ ಸಾನ್ನಿಧ್ಯವನ್ನು ಬಯಸಬೇಕು. 'ಅಘೋರೇಭ್ಯಃ' ಎಂಬ ಮಂತ್ರದಿಂದ ಆತನನ್ನು ಅಲ್ಲಿಯೇ ಧ್ಯಾನಿಸಬೇಕು. 'ಈಶಾನಃ ಸರ್ವವಿದ್ಯಾನಾಂ' ಎಂಬ ಮಂತ್ರದಿಂದ ಪೂಜಿಸಬೇಕು. ಪಾದ್ಯವನ್ನೂ, ಆಚಮನೀಯವನ್ನೂ ಇತ್ತು, ಅರ್ಘ್ಯವನ್ನು ಅರ್ಪಿಸಿ, ವಿಧಿವತ್ತಾಗಿ ಶಿವನನ್ನು ಸ್ಥಾಪಿಸಬೇಕು.

೫೧-೫೪- ಬಳಿಕ ವಿಧಿವತ್ತಾಗಿ, ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ ಎಂಬ ಪಂಚಗವ್ಯಗಳನ್ನು ಪಾತ್ರೆಯಲ್ಲಿ ಇಟ್ಟು, ಪ್ರಣವದಿಂದ ಅಭಿಮಂತ್ರಣವನ್ನು ಮಾಡಿ, ಹಸುವಿನ ಹಾಲು, ಮೊಸರುಗಳಿಂದಲೂ, ತುಪ್ಪ, ಜೇನು, ಸಕ್ಕರೆಗಳಿಂದಲೂ ಸುವಾಸಿತವಾದ ಗಂಧೋದಕದಿಂದಲೂ, ಮನೋರಥಗಳೆಲ್ಲವನ್ನೂ ನೀಡುವ ಕರುಣಾಳುವಾದ ಆ ಮಹಾದೇವನನ್ನು ಪುಣ್ಯಕರವಾದ ದ್ರವ್ಯಗಳೊಡನೆ ಅಭಿಷೇಕದಿಂದ ಆರಾಧಿಸಬೇಕು. ಬಳಿಕ, ಶುದ್ಧವಾದ ಪಾತ್ರೆಗಳಲ್ಲಿ ತುಂಬಿರಿಸಿರುವ ಶುದ್ಧವಾದ ಜಲವನ್ನು ತೆಗೆದುಕೊಂಡು ಪ್ರಣವವನ್ನುಚ್ಚರಿಸುತ್ತಾ ಅಭಿಷೇಕಮಾಡಬೇಕು.

೫೫. ಸಾಧಕನಾದವನು, ಬಿಳಿಯದಾದ ಬಟ್ಟೆಯಿಂದ ಚೆನ್ನಾಗಿ ಒರೆಸಬೇಕು. ಸ್ನಾನಾನಂತರ ಗಂಧವನ್ನು ಅರ್ಪಿಸುವವರೆಗೆ ನಿಧಾನವನ್ನು ಮಾಡಬಾರದು.

**ತಾವದ್ಭೂರಂ ನ ಕರ್ತವ್ಯಂ ನ ಯಾವಚ್ಚಂದನಂ ಕ್ಷಿಪೇತ್ ।**
**ತಂದುಲೈಸ್ಸುಂದರೈಸ್ತತ್ರ ಪೂಜಯೇಚ್ಛಂಕರಂ ಮುದಾ ॥ ೫೬ ॥**

**ಕುಶಾಪಾಮಾರ್ಗಕರ್ಪೂರಜಾತಿಚಂಪಕಪಾಟಲೈಃ ॥**
**ಕರವೀರೈಸ್ಸಿತೈಶ್ಚೈವ ಮಲ್ಲಿಕಾಕಮಲೋತ್ಪಲೈಃ ॥ ೫೭ ॥**

**ಅಪೂರ್ವಪುಷ್ಪೈರ್ವಿವಿಧೈಶ್ಚಂದನಾದ್ಯೈಸ್ತಥೈವ ಚ ।**
**ಜಲೇನ ಜಲಧಾರಾಂ ಚ ಕಲ್ಪಯೇತ್ಪರಮೇಶ್ವರೇ ॥ ೫೮ ॥**

**ಪಾತ್ರೈಶ್ಚ ವಿವಿಧೈರ್ದೇವಂ ಸ್ನಾಪಯೇಚ್ಚ ಮಹೇಶ್ವರಂ ।**
**ಮಂತ್ರಪೂರ್ವಂ ಪ್ರಕರ್ತವ್ಯಾ ಪೂಜಾ ಸರ್ವಫಲಪ್ರದಾ ॥ ೫೯ ॥**

**ಮಂತ್ರಾಂಶ್ಚ ತುಭ್ಯಂ ತಾಂಸ್ತಾತ ಸರ್ವಕಾಮಾರ್ಥಸಿದ್ಧಯೇ ।**
**ಪ್ರವಕ್ಷ್ಯಾಮಿ ಸಮಾಸೇನ ಸಾವಧಾನತಯಾ ಶೃಣು ॥ ೬೦ ॥**

---

೫೬-೫೭. ಅಂದವಾಗಿರುವ, ಮೊನೆಮುರಿಯದಿರುವ ಅಕ್ಕಿಯ ಕಾಳುಗಳಿಂದ ಶಂಕರನನ್ನು ಸಂತೋಷವಾಗಿ ಪೂಜಿಸಬೇಕಲ್ಲದೆ, ದರ್ಭೆ, ಉತ್ತರಣಿ, ಕರ್ಪೂರ, ಜಾಜೀ, ಸಂಪಗೆ, ಪಾದರಿ, ದಾಸವಾಳ, ಮಲ್ಲಿಗೆ, ಕಮಲ ನೈದಿಲೆ ಮೊದಲಾದ ಅರಳಿದ ಹೂವುಗಳಿಂದಲೂ, ಇನ್ನೂ ಅಪರೂಪವಾದ ಪುಷ್ಪಗಳಿಂದಲೂ, ಗಂಧಾದಿಗಳಿಂದಲೂ ಪೂಜಿಸಬೇಕು.

೫೮. ಶಿವನನ್ನು ಪೂಜಿಸುವಾಗ ಸಂತತವಾಗಿ ಧಾರಾಕಾರವಾಗಿ ನೀರು ಬೀಳುವಂತೆ ಏರ್ಪಡಿಸಿ, ವಿಧವಿಧವಾದ ಪಾತ್ರೆಗಳಿಂದ ಆ ಮಹೇಶ್ವರನನ್ನು ಸ್ನಾನಮಾಡಿಸಬೇಕು.

೫೯. ಮಂತ್ರಪೂರ್ವಕವಾಗಿ ಮಾಡಿದರೇನೇ ಪೂಜೆಯು ಇಷ್ಟಾರ್ಥಗಳೆಲ್ಲವನ್ನೂ ನೆರವೇರಿಸುವುದು. ಓ ವತ್ಸ! ನಿನ್ನ ಕೋರಿಕೆಗಳು ಈಡೇರಲೆಂದು ಆ ಮಂತ್ರಗಳೆಲ್ಲವನ್ನೂ ನಿನಗೆ ಸಂಗ್ರಹವಾಗಿ ತಿಳಿಸುವೆನು. ಗಮನವಿಟ್ಟು ಕೇಳು.

೬೦-೬೪. ಆ ಮಂತ್ರಗಳು ಯಾವುವೆಂದರೆ :—ಪಾತ್ಯಮಾನ, ವಾಙ್ಮಯಕ, ರುದ್ರ, ನೀಲರುದ್ರ, ಸುಶುಕ್ಲ, ಶುಭ, ಹೋತಾರ, ಅಥರ್ವಶೀರ್ಷ, ಶಾಂತಿಗಳು,

**ಪಾತ್ಯಮಾನೇನ ಮಂತ್ರೇಣ ತಥಾ ವಾಜ್ಮಯಕೇನ ಚ ।**
**ರುದ್ರೇಣ ನೀಲರುದ್ರೇಣ ಸುಶುಕ್ಲೇನ ಶುಭೇನ ಚ ॥ ೬೧ ॥**

**ಹೋತಾರೇಣ ತಥಾ ಶೀರ್ಷ್ಣಾ ಶುಭೇನಾಥರ್ವಣೇನ ಚ ।**
**ಶಾಂತ್ಯಾ ವಾಥ ಪುನಶ್ಶಾಂತ್ಯಾ ವಾರುಣೇನಾರುಣೇನ ಚ ॥ ೬೨ ॥**

**ಅರ್ಥಾಭೀಷ್ಟೇನ ಸಾಮ್ನಾ ಚ ತಥಾ ದೇವವ್ರತೇನ ಚ ॥ ೬೩ ॥**

**ರಾಥಂತರೇಣ ಪುಷ್ಪೇಣ ಸೂಕ್ತೇನ ಯುಕ್ತೇನ ಚ ।**
**ಮೃತ್ಯುಂಜಯೇನ ಮಂತ್ರೇಣ ತಥಾ ಪಂಚಾಕ್ಷರೇಣ ಚ ॥ ೬೪ ॥**

**ಜಲಧಾರಾಃ ಸಹಸ್ರೇಣ ಶತೇನೈಕೋತ್ತರೇಣ ವಾ ।**
**ಕರ್ತವ್ಯಾ ವೇದಮಾರ್ಗೇಣ ನಾಮಭಿರ್ವಾಥ ವಾ ಪುನಃ ॥ ೬೫ ॥**

**ತತಶ್ಚಂದನಪುಷ್ಪಾದಿ ರೋಪಣೀಯಂ ಶಿವೋಪರಿ ।**
**ದಾಪಯೇತ್ಪ್ರಣವೇನೈವ ಮುಖವಾಸಾದಿಕಂ ತಥಾ ॥ ೬೬ ॥**

**ತತಃ ಸ್ಫಟಿಕಸಂಕಾಶಂ ದೇವಂ ನಿಷ್ಕಲಮಕ್ಷಯಂ ।**
**ಕಾರಣಂ ಸರ್ವಲೋಕಾನಂ ಸರ್ವಲೋಕಮಯಂ ಪರಂ ॥ ೬೭ ॥**

---

ವಾರುಣ, ಆರುಣ, ಮತ್ತು ಅರ್ಥಾಭೀಷ್ಟ, ದೇವವ್ರತ, ರಥಂತರ ಎಂಬ ಸಾಮಗಳು, ಪುಷ್ಪಸೂಕ್ತ, ಮೃತ್ಯುಂಜಯ, ಪಂಚಾಕ್ಷರ ಮಂತ್ರಗಳು. ಈರೀತಿ ವೇದಮಂತ್ರಗಳನ್ನಾಗಲೀ, ಸಹಸ್ರನಾಮಗಳನ್ನಾಗಲೀ, ನೂರೊಂದು ನಾಮಗಳನ್ನಾಗಲಿ, ಜಪಿಸುತ್ತಾ ಶಿವನ ತಲೆಯ ಮೇಲೆ ಧಾರಾಕಾರವಾಗಿ ನೀರು ಬೀಳುವಂತೆ ಮಾಡಬೇಕು.

೬೫-೬೬. ಆಮೇಲೆ ಗಂಧಪುಷ್ಪಾದಿಗಳನ್ನು ಶಿವನ ಮೇಲೆ ಧರಿಸಬೇಕು. ಪ್ರಣವದಿಂದಲೇ ಮುಖವು ಸುವಾಸನೆಯಿಂದ ಕೂಡಿರಲನುವಾಗುವಂತೆ ತಾಂಬೂಲಾದಿಗಳನ್ನು ಅರ್ಪಿಸಬೇಕು.

೬೭-೬೮. ಬಳಿಕ ಸ್ಫಟಿಕದಂತೆ ದೇಹಕಾಂತಿಯುಳ್ಳವನೂ, ನಿಷ್ಕಲನೂ, ನಾಶರಹಿತನೂ, ಎಲ್ಲ ಲೋಕಗಳಿಗೂ ಕಾರಣನಾದವನೂ, ಸರ್ವಜಗತ್ಸ್ವರೂಪನೂ, ಸರ್ವಶ್ರೇಷ್ಠನೂ, ಬ್ರಹ್ಮ ಇಂದ್ರ ವಿಷ್ಣು ಮೊದಲಾದ ದೇವತೆಗಳಿಗೂ ಅಗೋಚರನೂ,

ಬ್ರಹ್ಮೇಂದ್ರೋಪೇಂದ್ರವಿಷ್ಣ್ವಾದ್ಯೈರಪಿ ದೇವೈರಗೋಚರಂ ।
ವೇದವಿದ್ಭಿರ್ಹಿ ವೇದಾಂತೇ ತ್ವಗೋಚರಮಿತಿ ಸ್ಮೃತಂ ॥ ೬೮ ॥

ಆದಿಮಧ್ಯಾಂತರಹಿತಂ ಭೇಷಜಂ ಸರ್ವರೋಗಿಣಾಂ ।
ಶಿವತತ್ತ್ವಮಿತಿ ಖ್ಯಾತಂ ಶಿವಲಿಂಗಂ ವ್ಯವಸ್ಥಿತಂ ॥ ೬೯ ॥

ಪ್ರಣವೇನೈವ ಮಂತ್ರೇಣ ಪೂಜಯೇಲ್ಲಿಂಗಮೂರ್ಧನಿ ।
ಧೂಪೈರ್ದೀಪೈಶ್ಚ ನೈವೇದ್ಯೈಸ್ತಾಂಬೂಲೈಃ ಸುಂದರೈಸ್ತಥಾ ॥ ೭೦ ॥

ನೀರಾಜನೇನ ರಮ್ಯೇಣ ಯಥೋಕ್ತವಿಧಿನಾ ತತಃ ।
ನಮಸ್ಕಾರೈಃ ಸ್ತವೈಶ್ಚಾನ್ಯೈರ್ಮಂತ್ರೈರ್ನಾನಾವಿಧೈರಪಿ ॥ ೭೧ ॥

ಅರ್ಘ್ಯಂ ದತ್ವಾ ತು ಪುಷ್ಪಾಣಿ ಪಾದಯೋಸ್ಸುವಿಕೀರ್ಯ ಚ ।
ಪ್ರಣಿಪತ್ಯ ಚ ದೇವೇಶಮಾತ್ಮನಾರಾಧಯೇಚ್ಛಿವಂ ॥ ೭೨ ॥

ಹಸ್ತೇ ಗೃಹೀತ್ವಾ ಪುಷ್ಪಾಣಿ ಸಮುತ್ಥಾಯ ಕೃತಾಂಜಲಿಃ ।
ಪ್ರಾರ್ಥಯೇತ್ಪುನರೀಶಾನಂ ಮಂತ್ರೇಣಾನೇನ ಶಂಕರಂ ॥ ೭೩ ॥

---

ವೇದಾಂತವನ್ನು ಬಲ್ಲ ವೇದವಿದರಿಂದಲೂ ಸಹ ಅಗೋಚರನೆಂದು ಸ್ಮರಿಸಲ್ಪಡುವವನೂ, ಆದಿ ಮಧ್ಯ ಅಂತ್ಯಗಳೊಂದೂ ಇಲ್ಲದವನೂ, ಎಲ್ಲ ರೋಗಿಗಳಿಗೂ, ಔಷಧ ಸ್ವರೂಪನೂ, ಆದ ಶಿವನ ಶಿವತತ್ವವೆಂಬ ಶಿವಲಿಂಗವನ್ನು ಭಾವಿಸಬೇಕು.

೬೯-೭೧. ಬಳಿಕ ಪ್ರಣವಮಂತ್ರದಿಂದಲೇ, ಸುಂದರವಾದ ಧೂಪದೀಪಗಳಿಂದಲೂ, ನೈವೇದ್ಯ ತಾಂಬೂಲಗಳಿಂದಲೂ, ಮನೋಹರವಾದ ಮಂಗಳಾರತಿಯಿಂದಲೂ, ನಮಸ್ಕಾರಗಳಿಂದಲೂ, ವಿವಿಧವಾದ ಸ್ತೋತ್ರಗಳಿಂದಲೂ, ಮಂತ್ರಗಳಿಂದಲೂ, ವಿಧಿಗನುಸಾರವಾಗಿ, ಆ ಶಿವಲಿಂಗವನ್ನು ಪೂಜಿಸಬೇಕು.

೭೨. ಅರ್ಘ್ಯವನ್ನಿತ್ತು, ಪಾದಗಳಿಗೆ ಹೂಗಳನ್ನರ್ಪಿಸಿ, ನಮಸ್ಕರಿಸಿ, ಆ ದೇವದೇವನಾದ ಶಿವನನ್ನಾರಾಧಿಸಬೇಕು.

೭೩. ಓ ಶಂಕರ, ಜ್ಞಾನವಿಲ್ಲದೆಯೋ, ಜ್ಞಾನಪೂರ್ವಕವಾಗಿಯೋ ನಾನು ಮಾಡಿದ, ಜಪ, ಪೂಜಾದಿಗಳೆಲ್ಲವೂ ನಿನ್ನ ಕರುಣೆಯಿಂದ ಸಫಲವಾಗಲಿ.

**ಅಜ್ಞಾನಾದ್ಯದಿ ವಾ ಜ್ಞಾನಾಜ್ಜಪಪೂಜಾದಿಕಂ ಮಯಾ ।**
**ಕೃತಂ ತದಸ್ತು ಸಫಲಂ ಕೃಪಯಾ ತವ ಶಂಕರ ॥ ೭೪ ॥**

**ಪಠಿತ್ವೈವಂ ಚ ಪುಷ್ಪಾಣಿ ಶಿವೋಪರಿ ಮುದಾ ನ್ಯಸೇತ್ ।**
**ತತಃ ಸ್ವಸ್ತ್ಯಯನಂ ಕೃತ್ವಾ ಹ್ಯಾಶಿಷೋ ವಿವಿಧಾಸ್ತಥಾ ॥ ೭೫ ॥**

**ಮಾರ್ಜನಂ ತು ತತಃ ಕಾರ್ಯಂ ಶಿವಸ್ಯೋಪರಿ ವೈ ಪುನಃ ।**
**ನಮಸ್ಕಾರಂ ತತಃ ಕ್ಷಾಂತಿಂ ಪುನರಾಚಮನಾಯ ಚ ॥ ೭೬ ॥**

**ಅಘೋಚ್ಚಾರಣಮುಚ್ಚಾರ್ಯ ನಮಸ್ಕಾರಂ ಪ್ರಕಲ್ಪಯೇತ್ ।**
**ಪ್ರಾರ್ಥಯೇಚ್ಚ ಪುನಸ್ತತ್ರ ಸರ್ವಭಾವಸಮನ್ವಿತಃ ॥ ೭೭ ॥**

**ಶಿವೇ ಭಕ್ತಿಶ್ಶಿವೇ ಭಕ್ತಿಶ್ಶಿವೇ ಭಕ್ತಿರ್ಭವೇ ಭವೇ ।**
**ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ॥ ೭೮ ॥**

**ಇತಿ ಸಂಪ್ರಾರ್ಥ್ಯ ದೇವೇಶಂ ಸರ್ವಸಿದ್ಧಿಪ್ರದಾಯಕಂ ।**
**ಪೂಜಯೇತ್ಪರಯಾ ಭಕ್ತ್ಯಾ ಗಲನಾದೈರ್ವಿಶೇಷತಃ. ॥ ೭೯ ॥**

---

೭೪. ಈರೀತಿ ಹೇಳಿ ಸಂತೋಷದಿಂದ ಆ ಹೂಗಳನ್ನು ಶಿವನಮೇಲಿಡಬೇಕು. ಬಳಿಕ ಸ್ವಸ್ತಿಮಂತ್ರಗಳಿಂದಲೂ ಸ್ತೋತ್ರಗಳಿಂದಲೂ ಶಿವನನ್ನರ್ಚಿಸಿ,

೭೫-೭೭. ಬಳಿಕ ಶಿವನ ಮೇಲೆ, ಪುನಃ ಮಾರ್ಜನೆಯನ್ನು ಮಾಡಬೇಕು. ಆಮೇಲೆ, ನಮಸ್ಕಾರವನ್ನೂ, ಕ್ಷಮಾಪ್ರಾರ್ಥನೆಯನ್ನೂ, ಮಾಡಿ, ಮತ್ತೆ ಆಚಮನೀಯವನ್ನಿತ್ತು, ಪಾಪನಾಶಕವಾದ ಮಂತ್ರಗಳನ್ನುಚ್ಚರಿಸುತ್ತಾ ಪುನಃ ನಮಸ್ಕರಿಸಿ, ಸರ್ವಭಾವಗಳಿಂದಲೂ, ಮತ್ತೊಮ್ಮೆ ಆತನನ್ನು ಪ್ರಾರ್ಥಿಸಬೇಕು.

೭೮. ಜನ್ಮಜನ್ಮದಲ್ಲಿಯೂ ಶಿವನಲ್ಲಿ ಭಕ್ತಿಯುಂಟಾಗಲಿ, ಹರನಲ್ಲಿ ಭಕ್ತಿಯು ಶಾಶ್ವತವಾಗಿರಲಿ. ಎಲೈ ಹರನೇ, ನನಗೆ ನೀನೊಬ್ಬನೇ ದಿಕ್ಕು. ಬೇರಿನ್ನಾರೂ ದಿಕ್ಕಿಲ್ಲ. ನೀನೇ ಕಾಪಾಡಬೇಕು ಎಂದು,

೭೯-೮೦. ಹೂಗಳನ್ನು ಕೈಲಿ ಹಿಡಿದು, ಬದ್ಧಾಂಜಲಿಯಾಗಿ ಮತ್ತೆ ಸರ್ವಸಿದ್ಧಿಗಳನ್ನೂ ಕೊಡುವ ಕರುಣಾಳುವಾದ ಆ ದೇವನನ್ನು ಇಂತು ಪ್ರಾರ್ಥಿಸಿ, ಅತಿಶಯಿತ

**ನಮಸ್ಕಾರಂ ತತಃ ಕೃತ್ವಾ ಪರಿವಾರಗಣೈಸ್ಸಹ ।**
**ಪ್ರಹರ್ಷಮತುಲಂ ಲಬ್ಧ್ವಾ ಕಾರ್ಯಂ ಕುರ್ಯಾದ್ಯಥಾಸುಖಂ ॥ ೮೦ ॥**

**ಏವಂ ಯಃ ಪೂಜಯೇನ್ನಿತ್ಯಂ ಶಿವಭಕ್ತಿಪರಾಯಣಃ ।**
**ತಸ್ಯ ವೈ ಸಕಲಾ ಸಿದ್ಧಿರ್ಜಾಯತೇ ತು ಪದೇ ಪದೇ ॥ ೮೧ ॥**

**ವಾಗ್ಮೀ ಚ ಜಾಯತೇ ತಸ್ಯ ಮನೋಭೀಷ್ಟಫಲಂ ಧ್ರುವಂ ।**
**ರೋಗಂ ದುಃಖಂ ಚ ಶೋಕಂ ಚ ಹ್ಯುದ್ವೇಗಂ ಕೃತ್ರಿಮಂ ತಥಾ ॥ ೮೨ ॥**

**ಕೌಟಿಲ್ಯಂ ಚ ಗರಂ ಚೈವ ಯದ್ಯದ್ದುಃಖಮುಪಸ್ಥಿತಂ ।**
**ತದ್ದುಃಖಂ ನಾಶಯತ್ಯೇವ ಶಿವಃ ಶಿವಕರಃ ಪರಃ ॥ ೮೩ ॥**

**ಕಲ್ಯಾಣಂ ಜಾಯತೇ ತಸ್ಯ ಶುಕ್ಲಪಕ್ಷೇ ಯಥಾ ಶಶೀ ।**
**ವರ್ಧತೇ ಸದ್ಗುಣಸ್ತತ್ರ ಧ್ರುವಂ ಶಂಕರಪೂಜನಾತ್ ॥ ೮೪ ॥**

---

ವಾದ ಭಕ್ತಿಯಿಂದ, ಕಂಠದಿಂದ ಗದ್ಗದಧ್ವನಿಯುಂಟಾಗುವಂತೆ ಪೂಜಿಸಬೇಕು. ಪ್ರಮಥಾದಿ ಪರಿವಾರದೇವತೆಗಳೊಡಗೂಡಿದ ಶಿವನನ್ನು ನಮಸ್ಕರಿಸಿ ಬಳಿಕ ಅಮಿತಾನಂದದಿಂದ ಸುಖವಾಗಿ ತನ್ನ ಕೆಲಸದಲ್ಲಿ ತೊಡಗಬೇಕು.

೮೧. ಈರೀತಿಯಾಗಿ ಯಾವನು ನಿತ್ಯವೂ ಕೇವಲ ಶಿವಭಕ್ತಿಯುಳ್ಳವನಾಗಿ ಪೂಜಿಸುತ್ತ ಬರುವನೋ ಅವನಿಗೆ ಹೆಜ್ಜೆಹೆಜ್ಜೆಗೂ ಸಿದ್ಧಿಗಳೆಲ್ಲವೂ ಉಂಟಾಗುವುವು.

೮೨-೮೩. ಅವನು ವಾಕ್ಚತುರನಾಗುವನು. ಆತನು ಏನೇನು ಕೋರಿಕೆಗಳನ್ನು ಹೊಂದಿರುವನೋ ಆಯಾ ಇಷ್ಟಾರ್ಥಗಳನ್ನು ಪಡೆದೇ ಪಡೆಯುವನು. ಅಲ್ಲದೆ, ರೋಗರುಜಿನಗಳು, ಸಂಕಟ, ಪೀಡೆ, ವ್ಯಸನ, ಹೃದಯ ದೌರ್ಬಲ್ಯ, ಮರೆ, ಮೋಸ, ವಂಚನೆ, ವಿಷ, ಮೊದಲಾದ ಎಷ್ಟು ಕಷ್ಟಗಳು ಸಂಭವಿಸಿದರೂ, ಆ ಸಂಕಟಗಳೆಲ್ಲವನ್ನೂ, ಎಲ್ಲರಿಗೂ ಮಂಗಲವನ್ನು ಮಾಡುವ ಶಿವನು ನಾಶಮಾಡುವನು.

೮೪. ಅಂಥ ಮನುಷ್ಯನಿಗೆ ಸದಾ ಒಳ್ಳೆಯದೇ ಆಗುವುದು. ಶಂಕರನನ್ನು ಪೂಜಿಸುವುದರಿಂದ ಆತನು ಶುಕ್ಲಪಕ್ಷದ ಚಂದ್ರನಂತೆ ಗುಣಶಾಲಿಯಾಗಿ ದಿನೇ ದಿನೇ ಪ್ರವರ್ಧಮಾನನಾಗುವನು.

**ಇತಿ ಪೂಜಾವಿಧಿಶ್ಶಂಭೋಃ ಪ್ರೋಕ್ತಸ್ತು ಮುನಿಸತ್ತಮ ।**
**ಅತಃ ಪರಂ ಚ ಶುಶ್ರೂಷುಃ ಕಿಂ ಪ್ರಷ್ಟಾಸಿ ಚ ನಾರದ ॥ ೮೫ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಶಿವಪೂಜಾವಿಧಿವರ್ಣನೋ ನಾಮ ಏಕಾದಶೋಽಧ್ಯಾಯಃ**



೮೫. ಓ ಮುನೀಂದ್ರ, ಈರೀತಿ ಶಿವನ ಪೂಜಾವಿಧಾನವನ್ನು ನಿನಗೆ ವಿವರಿಸಿದುದಾಯಿತು. ಮತ್ತೇನನ್ನು ಕೇಳಬೇಕೆಂದಿರುವೆ? ಕೇಳು, ಹೇಳುವೆನು, ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಶಿವಪೂಜಾವಿಧಿವರ್ಣನವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಸೃಷ್ಟಿಖಂಡೇ
## ದ್ವಾದಶೋಽಧ್ಯಾಯಃ

---

॥ ನಾರದ ಉವಾಚ ॥

ಬ್ರಹ್ಮನ್ಪ್ರಜಾಪತೇ ತಾತ ಧನ್ಯಸ್ತ್ವಂ ಶಿವಸಕ್ತಧೀಃ ।
ಏತದೇವ ಪುನಸ್ಸಮ್ಯಗ್ಬ್ರೂಹಿ ಮೇ ವಿಸ್ತರಾದ್ವಿಧೇ ॥ ೧ ॥

॥ ಬ್ರಹ್ಮೋವಾಚ ॥

ಏಕಸ್ಮಿನ್ಸಮಯೇ ತಾತ ಋಷೀನಾಹೂಯ ಸರ್ವತಃ ।
ನಿರ್ಜರಾಂಶ್ಚಾವದಂ ಪ್ರೀತ್ಯಾ ಸುವಚಃ ಪದ್ಮಸಂಭವಃ ॥ ೨ ॥

---

## ಹನ್ನೆರಡನೆಯ ಅಧ್ಯಾಯವು

೧. ಬಳಿಕ ನಾರದನು ತನ್ನ ತಂದೆಯಾದ ಬ್ರಹ್ಮನನ್ನು ಕುರಿತು, ಓ ಪ್ರಜಾಧಿನಾಥನಾದ ಜನಕನೇ, ಸದಾ ಶಿವನಲ್ಲೇ ನೆಟ್ಟಮನಸ್ಸುಳ್ಳ ನೀನೇ ಧನ್ಯನು. ಇದನ್ನೇ ನನಗೆ ಮತ್ತೊಮ್ಮೆ ಚೆನ್ನಾಗಿ ವಿಸ್ತಾರವಾಗಿ ತಿಳಿಸು ಎಂದನು.

೨. ನಾರದನ ಮಾತನ್ನು ಕೇಳಿ ಬ್ರಹ್ಮನು ಇಂತು ಹೇಳತೊಡಗಿದನು. ಅಪ್ಪಾ, ಹಿಂದೊಮ್ಮೆ, ಕಮಲಸಂಭವನಾದ ನಾನು, ಎಲ್ಲ ಋಷಿಗಳನ್ನೂ ದೇವತೆಗಳನ್ನೂ ಕರೆದು, ಪ್ರೀತಿಯಿಂದ ಒಳ್ಳೆಯ ಮಾತನ್ನು ಹೇಳಿದೆನು

ಯದಿ ನಿತ್ಯಸುಖೇ ಶ್ರದ್ಧಾ ಯದಿ ಸಿದ್ಧೇಶ್ಚ ಕಾಮುಕಾಃ ।
ಆಗಂತವ್ಯಂ ಮಯಾ ಸಾರ್ಧಂ ತೀರಂ ಕ್ಷೀರಪಯೋನಿಧೇಃ ॥ ೩ ॥

ಇತ್ಯೇತದ್ವಚನಂ ಶ್ರುತ್ವಾ ಗತಾಸ್ತೇ ಹಿ ಮಯಾ ಸಹ ।
ಯತ್ರಾಸ್ತೇ ಭಗವಾನ್ವಿಷ್ಣುಸ್ಸರ್ವೇಷಾಂ ಹಿತಕಾರಕಃ ॥ ೪ ॥

ತತ್ರ ಗತ್ವಾ ಜಗನ್ನಾಥಂ ದೇವದೇವಂ ಜನಾರ್ದನಂ ।
ಉಪತಸ್ಥುಸ್ಸುರಾ ನತ್ವಾ ಸುಕೃತಾಂಜಲಯೋ ಮುನೇ ॥ ೫ ॥

ತಾನ್ದೃಷ್ಟ್ವಾ ಚ ತದಾ ವಿಷ್ಣುರ್ಬ್ರಹ್ಮಾದ್ಯಾನಮರಾನ್ಸ್ಥಿತಾನ್ ।
ಸ್ಮರಂಛಿವಪದಾಂಭೋಜಮಬ್ರವೀತ್ಪರಮಂ ವಚಃ ॥ ೬ ॥

॥ ವಿಷ್ಣುರುವಾಚ ॥

ಕಿಮರ್ಥಮಾಗತಾ ಯೂಯಂ ಬ್ರಹ್ಮಾದ್ಯಾಶ್ಚ ಸುರರ್ಷಯಃ ।
ಸರ್ವಂ ವದತ ತತ್ಪ್ರೀತ್ಯಾ ಕಿಂ ಕಾರ್ಯಂ ವಿದ್ಯತೇಽಧುನಾ ॥ ೭ ॥

---

೩. ಯಾರು ನಿತ್ಯಸುಖವನ್ನು ಪಡೆಯಲು ಶ್ರದ್ಧಾಳುಗಳಾಗಿರುವರೋ, ಯಾರು ಸಿದ್ಧಿಯನ್ನು ಪಡೆಯಲು ಕುತೂಹಲಿಗಳೋ, ಅವರೆಲ್ಲರೂ ನನ್ನೊಡನೆ ಕ್ಷೀರಸಮುದ್ರದ ತೀರಕ್ಕೆ ಬನ್ನಿರಿ ಎಂದೆನು.

೪. ಹೀಗೆ ನಾನು ನುಡಿದ ಮಾತನ್ನು ಕೇಳಿ, ಅವರೆಲ್ಲರೂ ಎಲ್ಲರಿಗೂ ಹಿತವನ್ನುಂಟುಮಾಡುವ ವಿಷ್ಣುವಿನ ನಿವಾಸವಾದ ಕ್ಷೀರಸಮುದ್ರಕ್ಕೆ ನನ್ನೊಡನೆ ಹೊರಟರು.

೫. ನಾರದ, ಆ ದೇವತೆಗಳೂ, ಋಷಿಗಳೂ, ಕ್ಷೀರಸಮುದ್ರವನ್ನು ಸೇರಿ, ದೂರದಿಂದಲೇ ದೇವದೇವನೂ, ಜಗನ್ನಾಥನೂ, ಆದ ಆ ಜನಾರ್ದನನ್ನು ನಮಸ್ಕರಿಸಿ, ವಿನಯದಿಂದ ಮುಕುಲಿತಹಸ್ತರಾಗಿ ಅಲ್ಲಿ ಬಂದು ನಿಂತರು.

೬. ಆಗ ಅಲ್ಲಿ ಬಂದುನಿಂತ ಬ್ರಹ್ಮಾದಿದೇವತೆಗಳನ್ನು ಕಂಡು, ಶಿವನ ಪಾದಕಮಲಗಳನ್ನು ನೆನೆಯುತ್ತಾ ಅವರನ್ನು ಕುರಿತು ವಿಷ್ಣುವಿಂತೆಂದನು.

೭. ಎಲೈ ಬ್ರಹ್ಮಾದಿ ದೇವತೆಗಳಿರಾ, ನೀವಿಲ್ಲಿಗೆ ಬಂದ ಕಾರಣವೇನು? ಅದೆಲ್ಲವನ್ನೂ ವಿಶ್ವಾಸವಿಟ್ಟು ನನಗೆ ತಿಳಿಸಿರಿ. ಈಗ ಯಾವ ಕೆಲಸವು ನನ್ನಿಂದಾಗಬೇಕಾಗಿದೆ? ಎಂದು ಕೇಳಲು,

॥ ಬ್ರಹ್ಮೋವಾಚ ॥

ಇತಿ ಪೃಷ್ಟಾಸ್ತದಾ ತೇನ ವಿಷ್ಣುನಾ ಚ ಮಯಾ ಸುರಾಃ ।
ಪುನಃ ಪ್ರಣಮ್ಯ ತಂ ಪ್ರೀತ್ಯಾ ಕಿಂ ಕಾರ್ಯಂ ವಿದ್ಯತೇಽಧುನಾ ।
ವಿನಿವೇದಯಿತುಂ ಕಾರ್ಯಂ ಹ್ಯಬ್ರುವನ್ವಚನಂ ಶುಭಂ ॥ ೮ ॥

॥ ದೇವಾ ಊಚುಃ ॥

ನಿತ್ಯಂ ಸೇವಾ ತು ಕಸ್ಯೈವ ಕಾರ್ಯಾ ದುಃಖಾಪಹಾರಿಣೀ ॥ ೯ ॥

ಇತ್ಯೇತದ್ವಚನಂ ಶ್ರುತ್ವಾ ಭಗವಾನ್ಭಕ್ತವತ್ಸಲಃ ।
ಸಾಮರಸ್ಯಂ ಮಮ ಪ್ರೀತ್ಯಾ ಕೃಪಯಾ ವಾಕ್ಯಮಬ್ರವೀತ್ ॥ ೧೦ ॥

॥ ಶ್ರೀಭಗವಾನುವಾಚ ॥

ಬ್ರಹ್ಮಂಚ್ಛೃಣು ಸುರೈಸ್ಸಮ್ಯಕ್ಶ್ರುತಂ ಚ ಭವತಾ ಪುರಾ ।
ತಥಾಪಿ ಕಥ್ಯತೇ ತುಭ್ಯಂ ದೇವೇಭ್ಯಶ್ಚ ತಥಾ ಪುನಃ ॥ ೧೧ ॥

ದೃಷ್ಟಂ ಚ ದೃಶ್ಯತೇಽದ್ಯೈವ ಕಿಂ ಪುನಃ ಪೃಚ್ಛ್ಯತೇಽಧುನಾ ।
ಬ್ರಹ್ಮನ್ದೇವೈಸ್ಸಮಸ್ತೈಶ್ಚ ಬಹುಧಾ ಕಾರ್ಯತತ್ಪರೈಃ ॥ ೧೨ ॥

---

೮-೯. ಬ್ರಹ್ಮನು ಹೇಳಿದನು :— ಈರೀತಿ ವಿಷ್ಣುವು ಕೇಳಲು ಆ ದೇವತೆಗಳೆಲ್ಲರೂ ನನ್ನೊಡನೆ ಆತನನ್ನು ಪುನಃ ಪ್ರೀತಿಯಿಂದ ನಮಸ್ಕರಿಸಿ, ನೀನೀಗ ಕೆಲಸವೇನಿದೆಯೆಂದು ಕೇಳಿದೆಯಲ್ಲವೇ ? ಅದನ್ನೇ ನಿನಗೆ ಬಿನ್ನವಿಸಲು ಬಂದಿರುವೆವು. ನಾವು ನಿತ್ಯವೂ ನಮ್ಮೆಲ್ಲರ ದುಃಖಗಳನ್ನೂ ಪರಿಹರಿಸಿಕೊಳ್ಳಲು ಯಾವಾತನನ್ನು ಸೇವಿಸಬೇಕು ? ಅದನ್ನು ತಿಳಿಸಬೇಕು ಎಂದರು.

೧೦. ಭಕ್ತವತ್ಸಲನಾದ ಆ ಭಗವಂತನು ನಮ್ಮ ಈ ಮಾತನ್ನು ಕೇಳಿ ನಮ್ಮಲ್ಲಿ ಪ್ರೀತಿಯನ್ನೂ ದಯೆಯನ್ನೂ ಬೀರುತ್ತಾ ದೇವತೆಗಳೊಡಗೂಡಿದ ನನ್ನನ್ನು ಕುರಿತು,

೧೧. ಎಲೈ ಬ್ರಹ್ಮನೇ, ಕೇಳು. ನೀನೂ ದೇವತೆಗಳೂ ಇದನ್ನು ಚೆನ್ನಾಗಿ ಕೇಳಿಯೇ ಇರುವಿರಿ. ಆದರೂ ಮತ್ತೊಮ್ಮೆ ಇದನ್ನು ನಿಮಗೆ ತಿಳಿಸುವೆನು.

೧೨-೧೩. ನೀವೆಲ್ಲರೂ ಹಿಂದೆ ನೋಡಿರುವಿರಿ. ಈಗಲೂ ನೋಡುತ್ತಿರುವಿರಿ. ಅದನ್ನು ಮರಳಿ ಈಗ ಕೇಳಬೇಕೇ ? ಎಲೈ ಬ್ರಹ್ಮನೇ, ನಾನಾವಿಧವಾದ ಕೆಲಸಗಳಲ್ಲಿ

ಸೇವ್ಯಃ ಸೇವ್ಯಸ್ತಥಾ ದೇವಶ್ಶಂಕರಸ್ಸರ್ವದುಃಖಹಾ ।
ಮಮಾಪಿ ಕಥಿತಂ ತೇನ ಬ್ರಹ್ಮಣ್ಯೋಽಪಿ ವಿಶೇಷತಃ ॥ ೧೩ ॥

ಪ್ರಸ್ತುತಂ ಚೈವ ದೃಷ್ಟಂ ವಸ್ಸರ್ವಂ ದೃಷ್ಟಾಂತಮದ್ಭುತಂ ।
ತ್ಯಾಜ್ಯಂ ತದರ್ಚನಂ ನೈವ ಕದಾಪಿ ಸುಖಮೀಪ್ಸುಭಿಃ ॥ ೧೪ ॥

ಸಂತ್ಯಜ್ಯ ದೇವದೇವೇಶಂ ಲಿಂಗಮೂರ್ತಿಂ ಮಹೇಶ್ವರಂ ।
ತಾರಪುತ್ರಾಸ್ತಥೈವೈತೇ ನಷ್ಟಾಸ್ತೇಽಪಿ ಸಬಾಂಧವಾಃ ॥ ೧೫ ॥

ಮಯಾ ಚ ಮೋಹಿತಾಸ್ತೇ ವೈ ಮಾಯಯಾ ದೂರತಃ ಕೃತಾಃ ।
ಸರ್ವೇ ವಿನಷ್ಟಾಃ ಪ್ರಧ್ವಸ್ತಾಃ ಶಿವೇನ ರಹಿತಾ ಯದಾ ॥ ೧೬ ॥

ತಸ್ಮಾತ್ಸದಾ ಪೂಜನೀಯೋ ಲಿಂಗಮೂರ್ತಿಧರೋ ಹರಃ ।
ಸೇವನೀಯೋ ವಿಶೇಷೇಣ ಶ್ರದ್ಧಯಾ ದೇವಸತ್ತಮಃ ॥ ೧೭ ॥

---

ತೊಡಗಿರುವ ಈ ದೇವತೆಗಳೆಲ್ಲರೂ ಎಲ್ಲ ದುಃಖಗಳನ್ನೂ ನಾಶಮಾಡುವ ಆ ಶಂಕರನನ್ನು ಸದಾ ಸೇವಿಸಬೇಕು. ಆತನೇ ಈ ಅಂಶವನ್ನು ನನಗೂ, ನಿನಗೂ, ವಿಶೇಷವಾಗಿ ಹೇಳಲಿಲ್ಲವೇ ?

೧೪. ಈಗತಾನೇ ಅದ್ಭುತವಾದ ಆ ನಿದರ್ಶನವೆಲ್ಲವನ್ನೂ ಕಂಡಿರುವಿರಿ. ಸುಖವಾಗಿರಬೇಕೆನ್ನುವವರು ಯಾವಾಗಲೂ ಶಿವನ ಪೂಜೆಯನ್ನು ಬಿಡಬಾರದು.

೧೫. ದೇವದೇವನೂ, ಲಿಂಗವೇ ಶರೀರವಾಗಿ ಉಳ್ಳವನೂ ಆದ ಆ ಶಿವನನ್ನು ಮರೆತುಬಿಟ್ಟು ಈ ತಾರನ ಮಕ್ಕಳೆಲ್ಲರೂ ತಮ್ಮ ಬಂಧುಗಳೊಡನೆ ನಾಶವಾದರು.

೧೬. ಮಾಯೆಯಿಂದ ಮೋಹಿತರಾಗಿ ಅವರು ಯಾವಾಗ ಶಿವನನ್ನು ಮರೆತುಬಿಟ್ಟುಬಿಟ್ಟರೋ, ಆಗ ಅವರೆಲ್ಲರೂ ನನ್ನಿಂದ ಮೋಹಿತರಾಗಿ ಧ್ವಂಸರಾಗಿಹೋದರು.

೧೭. ಆದುದರಿಂದ ಆ ಲಿಂಗಾಕೃತಿಯನ್ನು ತಳೆದ ದೇವಶ್ರೇಷ್ಠನಾದ ಆ ಶಿವನನ್ನು ವಿಶೇಷವಾಗಿ ಶ್ರದ್ಧೆಯಿಂದ ಯಾವಾಗಲೂ ಸೇವಿಸುತ್ತಿರಬೇಕು.

ಶರ್ವಲಿಂಗಾರ್ಚನಾದೇವ ದೇವಾ ದೈತ್ಯಾಶ್ಚ ಸತ್ತಮಾಃ ।
ಅಹಂ ತ್ವಂ ಚ ತಥಾ ಬ್ರಹ್ಮನ್ಕಥಂ ತದ್ವಿಸ್ಮೃತಂ ತ್ವಯಾ ॥ ೧೮ ॥

ತಲ್ಲಿಂಗಮರ್ಚಯೇನ್ನಿತ್ಯಂ ಯೇನ ಕೇನಾಪಿ ಹೇತುನಾ ।
ತಸ್ಮಾದ್ಬ್ರಹ್ಮನ್ಸುರಃ ಶರ್ವಃ ಸರ್ವಕಾಮಫಲೇಪ್ಸಯಾ ॥ ೧೯ ॥

ಸಾ ಹಾನಿಸ್ತನ್ಮಹಾಛಿದ್ರಂ ಸಾಂಧತಾ ಸಾ ಚ ಮುಗ್ಧತಾ ।
ಯನ್ಮುಹೂರ್ತಂ ಕ್ಷಣಂ ವಾಪಿ ಶಿವಂ ನೈವ ಸಮರ್ಚಯೇತ್ ॥ ೨೦ ॥

ಭವಭಕ್ತಿಪರಾ ಯೇ ಚ ಭವಪ್ರಣತಚೇತಸಃ ।
ಭವಸಂಸ್ಮರಣಾ ಯೇ ಚ ನ ತೇ ದುಃಖಸ್ಯ ಭಾಜನಾಃ ॥ ೨೧ ॥

ಭವನಾನಿ ಮನೋಜ್ಞಾನಿ ಮನೋಜ್ಞಾಭರಣಾಃ ಸ್ತ್ರಿಯಃ ।
ಧನಂ ಚ ತುಷ್ಟಿಪರ್ಯಂತಂ ಪುತ್ರಪೌತ್ರಾದಿಸಂತತಿಃ ॥ ೨೨ ॥

---

೧೮. ಎಲೈ ಬ್ರಹ್ಮನೇ, ಶಿವನ ಲಿಂಗವನ್ನು ಪೂಜಿಸುವುದರಿಂದಲೇ ಅಲ್ಲವೇ ದೇವತೆಗಳೂ, ದೈತ್ಯರೂ, ನಾನೂ, ನೀನೂ. ಎಲ್ಲರೂ ಸಾಧುವರೇಣ್ಯರೆನಿಸಿಕೊಂಡಿರುವುದು? ಅದನ್ನು ನೀನು ಹೇಗೆ ಮರೆತುಬಿಟ್ಟೆ?

೧೯. ಎಲ್ಲ ಕೋರಿಕೆಗಳನ್ನೂ ಪಡೆಯಬೇಕೆನ್ನುವ ಪ್ರತಿಯೊಬ್ಬ ದೇವತೆಯೂ, ಒಂದಲ್ಲ ಒಂದು ಕಾರಣದಿಂದ ಪ್ರತಿನಿತ್ಯವೂ ಶಿವಲಿಂಗವನ್ನು ಪೂಜಿಸಲೇಬೇಕು.

೨೦. ಮುಹೂರ್ತಮಾತ್ರವಾಗಲಿ, ಕ್ಷಣಕಾಲವಾಗಲಿ ಶಿವನನ್ನು ಪೂಜಿಸದಿದ್ದರೆ ಅದಕ್ಕಿಂತಲೂ ಬೇರೆ ಹಾನಿಯಿಲ್ಲ. ಅದೇ ಮಹಾಛಿದ್ರವು. ಅದೇ ಅವಿವೇಕವು. ಅದೇ ಬುದ್ಧಿಮಾಂದ್ಯವೆಂದು ತಿಳಿ.

೨೧. ಯಾರು ಶಿವನಲ್ಲಿ ಭಕ್ತಿಯನ್ನು ಸದಾ ಇಟ್ಟಿರುವರೋ, ಯಾರು ಶಿವನನ್ನೇ ಸದಾ ಮರೆಹೊಕ್ಕಿರುವರೋ ಯಾರ ಮನಸ್ಸು ಶಿವನನ್ನೇ ಸದಾ ಹಂಬಲಿಸುತ್ತಿರುವುದೋ ಅವರೆಂದಿಗೂ ದುಃಖಕ್ಕೆ ಗುರಿಯಾಗಲಾರರು.

೨೨-೨೪. ದಿವ್ಯವಾದ ಉಪ್ಪರಿಗೆ, ಸೊಗಸಾದ ಒಡವೆಗಳಿಂದ ಅಲಂಕೃತವಾದ ಹೆಂಗಸರು, ಸಾಕು ಎನಿಸುವಷ್ಟು ಅತುಲೈಶ್ವರ್ಯ, ಮಕ್ಕಳುಮೊಮ್ಮಕ್ಕಳು ಮೊದ

ಆರೋಗ್ಯಂ ಚ ಶರೀರಂ ಚ ಪ್ರತಿಷ್ಠಾಂ ಚಾಪ್ಯಲೌಕಿಕೀಂ ।
ಯೇ ವಾಂಛಂತಿ ಮಹಾಭಾಗಾಃ ಸುಖಂ ವಾ ತ್ರಿದಶಾಲಯಂ ॥ ೨೩ ॥

ಅಂತೇ ಮುಕ್ತಿಫಲಂ ಚೈವ ಭಕ್ತಿಂ ವಾ ಪರಮೇಶಿತುಃ ।
ಪೂರ್ವಪುಣ್ಯಾತಿರೇಕೇಣ ತೇಽರ್ಚಯಂತಿ ಸದಾಶಿವಂ ॥ ೨೪ ॥

ಯೋಽರ್ಚಯೇಚ್ಛಿವಲಿಂಗಂ ವೈ ನಿತ್ಯಂ ಭಕ್ತಿಪರಾಯಣಃ ।
ತಸ್ಯ ವೈ ಸಫಲಾ ಸಿದ್ಧಿರ್ನ ನ ಸ ಪಾಪೈಃ ಪ್ರಯುಜ್ಯತೇ ॥ ೨೫ ॥

॥ ಬ್ರಹ್ಮೋವಾಚ ॥

ಇತ್ಯುಕ್ತಾಶ್ಚ ತದಾ ದೇವಾಃ ಪ್ರಣಿಪತ್ಯ ಹರಿಂ ಸ್ವಯಂ ।
ಲಿಂಗಾನಿ ಪ್ರಾರ್ಥಯಾಮಾಸುಸ್ಸರ್ವಕಾಮಾಪ್ತಯೇ ನೃಣಾಂ ॥ ೨೬ ॥

ತಚ್ಛ್ರುತ್ವಾ ಚ ತದಾ ವಿಷ್ಣುರ್ವಿಶ್ವಕರ್ಮಾಣಮಬ್ರವೀತ್ ।
ಅಹಂ ಚ ಮುನಿಶಾರ್ದೂಲ ಜೀವೋದ್ಧಾರಪರಾಯಣಃ ॥ ೨೭ ॥

---

ಲಾದವರಿಂದ ತುಂಬಿದ ಸಂತತಿ, ಆರೋಗ್ಯ, ಒಳ್ಳೆಯ ದೃಢಕಾಯ, ಮೇಲ್ತರದ ಗೌರವ, ಮುಂತಾದ ಐಹಿಕ ಭೋಗಭಾಗ್ಯಗಳನ್ನು ಯಾರು ಬಯಸುವರೋ, ಯಾರು ಸುಖವಾಗಿಯೇ ಸ್ವರ್ಗವನ್ನು ಪಡೆಯಲೆಳಸುವರೋ, ಯಾರು ಬೇಗನೇ ದೇಹಾಂತ್ಯದಲ್ಲಿ ಮುಕ್ತಿಯನ್ನಪೇಕ್ಷಿಸುವರೋ, ಯಾರು ಪರಶಿವನ ಭಕ್ತಿಯೊಂದನ್ನೇ ಬಯಸುವರೋ, ಅವರು ಮಾತ್ರ, ತಾವು ಹಿಂದಿನ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಗಳ ಫಲರೂಪವಾಗಿ ಈಗ ಶಿವನನ್ನು ಪೂಜಿಸುವರು.

೨೫. ಯಾವನು ನಿತ್ಯವೂ ಭಕ್ತಿಯೊಡಗೂಡಿ ಶಿವಲಿಂಗವನ್ನು ಪೂಜಿಸುವನೋ ಅವನಿಗೆ ಎಲ್ಲ ಸಿದ್ಧಿಗಳೂ ಕೈಗೂಡುವುವು. ಅವನಿಗೆ ಪಾಪಸಂಪರ್ಕವೇ ಇಲ್ಲ.

೨೬. ಬ್ರಹ್ಮನು ಹೇಳಿದನು :—ಹೀಗೆ ಹರಿಯ ಮಾತನ್ನು ಕೇಳಿ ಆ ದೇವತೆಗಳೆಲ್ಲರೂ ಆತನನ್ನು ನಮಸ್ಕರಿಸಿ ಮನುಷ್ಯರು ತಾವು ಬಯಸಿದುದೆಲ್ಲವನ್ನೂ ಪಡೆಯಲನುಕೂಲವಾಗುವಂತೆ ಲಿಂಗಗಳನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು.

೨೭. ಆಗ ಆ ಮಾತನ್ನು ಕೇಳಿ, ಪ್ರತಿಯೊಂದು ಜೀವಿಯೂ ಉದ್ಧಾರವಾಗಲೆಂದು ಬಯಸಿ ವಿಷ್ಣುವೂ, ನಾನೂ, ಆ ವಿಶ್ವಕರ್ಮನನ್ನು ಕರೆದು,

**ವಿಶ್ವಕರ್ಮನ್ಯಥಾ ಶಂಭೋಃ ಕಲ್ಪಯಿತ್ವಾ ಶುಭಾನಿ ಚ ।**
**ಲಿಂಗಾನಿ ಸರ್ವದೇವೇಭ್ಯೋ ದೇಯಾನಿ ವಚನಾನ್ಮಮ ॥ ೨೮ ॥**

**॥ ಬ್ರಹ್ಮೋವಾಚ ॥**

**ಲಿಂಗಾನಿ ಕಲ್ಪಯಿತ್ವೈವಮಧಿಕಾರಾನುರೂಪತಃ ।**
**ವಿಶ್ವಕರ್ಮಾ ದದೌ ತೇಭ್ಯೋ ನಿಯೋಗಾನ್ಮಮ ವಾ ಹರೇಃ ॥ ೨೯ ॥**

**ತದೇವ ಕಥಯಾಮ್ಯದ್ಯ ಶ್ರೂಯತಾಮೃಷಿಸತ್ತಮ ।**
**ಪದ್ಮರಾಗಮಯಂ ಶಕ್ರೋ ಹೈಮಂ ವಿಶ್ರವಸಸ್ಸುತಃ ॥ ೩೦ ॥**

**ಪೀತಂ ಮಣಿಮಯಂ ಧರ್ಮೋ ವರುಣಶ್ಯಾಮಲಂ ಶಿವಂ ।**
**ಇಂದ್ರನೀಲಮಯಂ ವಿಷ್ಣುರ್ಬ್ರಹ್ಮಾ ಹೇಮಮಯಂ ತಥಾ ॥ ೩೧ ॥**

**ವಿಶ್ವೇದೇವಾಸ್ತಥಾ ರೌಪ್ಯಂ ವಸವಶ್ಚ ತಥೈವ ಚ ।**
**ಆರಕೂಟಮಯಂ ವಾಪಿ ಪಾರ್ಥಿವಂ ಹ್ಯಶ್ವಿನೌ ಮುನೇ ॥ ೩೨ ॥**

---

೨೮. ಎಲೈ ವಿಶ್ವಕರ್ಮನೇ, ನನ್ನ ಮಾತಿನಂತೆ, ಶಂಭುವಿನ ಶುಭಕರವಾದ ಲಿಂಗಗಳನ್ನು ನಿರ್ಮಿಸಿ, ಎಲ್ಲ ದೇವತೆಗಳಿಗೂ ಕೊಡು. ಎನ್ನಲು,

೨೯. ಬಳಿಕ ವಿಶ್ವಕರ್ಮನು ನನ್ನ ಮತ್ತು ವಿಷ್ಣುವಿನ ಅಪ್ಪಣೆಯಂತೆ ಅವರವರ ಅಂತಸ್ತಿಗೆ ತಕ್ಕಂತೆ ಲಿಂಗಗಳನ್ನು ಮಾಡಿ ಅವರವರಿಗೆ ಕೊಟ್ಟನು.

೩೦. ಓ ನಾರದ, ಅದನ್ನೇ ನಿನಗೆ ವಿವರವಾಗಿ ತಿಳಿಸುವೆನು ಕೇಳು. ಇಂದ್ರನು ಕೆಂಪಿನಿಂದ ಮಾಡಿದ ಲಿಂಗವನ್ನು ಪಡೆದನು. ಕುಬೇರನು ಚಿನ್ನದ ಲಿಂಗವನ್ನು ಹೊಂದಿದನು.

೩೧. ಧರ್ಮನು ಹಳದಿ ಕಲ್ಲಿನ ಲಿಂಗವನ್ನೂ (ಗೋಮೇಧಿಕ) ವರುಣನು ನೀಲಮಣಿಯ ಲಿಂಗವನ್ನೂ, ವಿಷ್ಣುವು ಇಂದ್ರನೀಲ ಮಣಿಯಿಂದ ನಿರ್ಮಿತವಾದ ಲಿಂಗವನ್ನೂ ಬ್ರಹ್ಮನು ಚಿನ್ನದ ಲಿಂಗವನ್ನೂ ಹೊಂದಿದರು.

೩೨. ಹಾಗೆಯೇ ವಿಶ್ವದೇವತೆಗಳು ಬೆಳ್ಳಿಯ ಲಿಂಗವನ್ನೂ, ವಸುಗಳೆಂಬುವರು, ಹಿತ್ತಾಳೆಯ ಲಿಂಗವನ್ನೂ, ಅಶ್ವಿನೀ ದೇವತೆಗಳು ಮಣ್ಣಿನ ಲಿಂಗವನ್ನೂ ಪಡೆದರು.

ಲಕ್ಷ್ಮೀಶ್ಚ ಸ್ಫಾಟಿಕಂ ದೇವೀ ಹ್ಯಾದಿತ್ಯಾಸ್ತಾಮ್ರನಿರ್ಮಿತಂ ।
ಮೌಕ್ತಿಕಂ ಸೋಮರಾಜೋ ವೈ ವಜ್ರಲಿಂಗಂ ವಿಭಾವಸುಃ ॥ ೩೩ ॥

ಮೃಣ್ಮಯಂ ಚೈವ ವಿಪ್ರೇಂದ್ರಾ ವಿಪ್ರಪತ್ನ್ಯಸ್ತಥೈವ ಚ ।
ಚಾಂದನಂ ಚ ಮಯೋ ನಾಗಾಃ ಪ್ರವಾಲಮಯಮಾದರಾತ್ ॥ ೩೪ ॥

ನವನೀತಮಯಂ ದೇವೀ ಯೋಗೀ ಭಸ್ಮಮಯಂ ತಥಾ ।
ಯಕ್ಷಾ ದಧಿಮಯಂ ಲಿಂಗಂ ಛಾಯಾ ಪಿಷ್ಟಮಯಂ ತಥಾ ॥ ೩೫ ॥

ಶಿವಲಿಂಗಂ ಚ ಬ್ರಹ್ಮಾಣೀ ರತ್ನಂ ಪೂಜಯತಿ ಧ್ರುವಂ ।
ಪಾರದಂ ಪಾರ್ಥಿವಂ ಬಾಣಸ್ಸಮರ್ಚತಿ ಪರೇಽಪಿ ವಾ ॥ ೩೬ ॥

ಏವಂವಿಧಾನಿ ಲಿಂಗಾನಿ ದತ್ತಾನಿ ವಿಶ್ವಕರ್ಮಣಾ ।
ತೇ ಪೂಜಯಂತಿ ಸರ್ವೇ ವೈ ದೇವಾ ಋಷಿಗಣಾಸ್ತಥಾ ॥ ೩೭ ॥

---

೩೩. ಲಕ್ಷ್ಮಿಯು ಸ್ಫಟಿಕದ ಲಿಂಗವನ್ನೂ ದ್ವಾದಶಾದಿತ್ಯರು ತಾಮ್ರದ ಲಿಂಗವನ್ನೂ, ಚಂದ್ರನು ಮುತ್ತಿನ ಲಿಂಗವನ್ನೂ, ಅಗ್ನಿಯು ವಜ್ರದ ಲಿಂಗವನ್ನೂ ಹೊಂದಿದರು.

೩೪. ಬ್ರಾಹ್ಮಣರೂ ಬ್ರಾಹ್ಮಣ ಪತ್ನಿಯರೂ ಮಣ್ಣಿನ ಲಿಂಗವನ್ನೂ, ಮಯನು ಶ್ರೀಗಂಧದ ಲಿಂಗವನ್ನೂ, ಸರ್ಪಗಳು ಹವಳದ ಲಿಂಗವನ್ನೂ ಸ್ವೀಕರಿಸಿದರು.

೩೫. ಹಾಗೆಯೇ ಪಾರ್ವತಿಯು ಬೆಣ್ಣೆಯ ಲಿಂಗವನ್ನೂ ಯೋಗಿಯು ಭಸ್ಮದಿಂದ ಮಾಡಿದ ಲಿಂಗವನ್ನೂ ಯಕ್ಷರು ಮೊಸರಿನ ಲಿಂಗವನ್ನೂ ಛಾಯೆಯು ಹಿಟ್ಟಿನ ಲಿಂಗವನ್ನೂ ಸಂಗ್ರಹಿಸಿದರು.

೩೬. ಬ್ರಹ್ಮಪತ್ನಿಯಾದ ವಾಗ್ದೇವಿಯು, ರತ್ನಮಯವಾದ ಲಿಂಗವನ್ನೂ ಬಾಣಾಸುರನು ಪಾದರಸದ ಅಥವಾ ಮಣ್ಣಿನ ಲಿಂಗವನ್ನೂ ಇನ್ನೂ ಇತರರು ಮಣ್ಣಿನ ಲಿಂಗವನ್ನೂ ಪಡೆದು ಪೂಜಿಸುವರು.

೩೭. ಈ ರೀತಿಯಾಗಿ ವಿಶ್ವಕರ್ಮನು ಮಾಡಿಕೊಟ್ಟ ಲಿಂಗಗಳನ್ನು ಆ ದೇವತೆಗಳೆಲ್ಲರೂ ಮತ್ತು ಋಷಿಗಣಗಳೂ ಪೂಜಿಸುವರು.

ವಿಷ್ಣುರ್ದತ್ವಾ ಚ ಲಿಂಗಾನಿ ದೇವೇಭ್ಯೋ ಹಿತಕಾಮ್ಯಯಾ ॥
ಪೂಜಾವಿಧಿಂ ಸಮಾಚಷ್ಟ ಬ್ರಹ್ಮಣೇ ಮೇ ಪಿನಾಕಿನಃ ॥ ೩೮ ॥

ತಚ್ಛ್ರುತ್ವಾ ವಚನಂ ತಸ್ಯ ಬ್ರಹ್ಮಾಹಂ ದೇವಸತ್ತಮೈಃ ।
ಆಗಚ್ಛಂ ಚ ಸ್ವಕಂ ಧಾಮ ಹರ್ಷನಿರ್ಭರಮಾನಸಃ ॥ ೩೯ ॥

ತತ್ರಾಗತ್ಯ ಋಷೀನ್ಸರ್ವಾನ್ದೇವಾಂಶ್ಚಾಹಂ ತಥಾ ಮುನೇ ।
ಶಿವಪೂಜಾವಿಧಿಂ ಸಮ್ಯಗ ಬ್ರುವಂ ಸಕಲೇಷ್ಟದಂ ॥ ೪೦ ॥

॥ ಬ್ರಹ್ಮೋವಾಚ ॥

ಶ್ರೂಯತಾಮೃಷಯಃ ಸರ್ವೇ ಸಾಮರಾಃ ಪ್ರೇಮತತ್ಪರಾಃ ।
ಶಿವಪೂಜಾವಿಧಿಂ ಪ್ರೀತ್ಯಾ ಕಥಯೇ ಭುಕ್ತಿಮುಕ್ತಿದಂ ॥ ೪೧ ॥

ಮಾನುಷಂ ಜನ್ಮ ಸಂಪ್ರಾಪ್ಯ ದುಲರ್ಭಂ ಸರ್ವಜಂತುಷು ।
ತತ್ರಾಪಿ ಸತ್ಕುಲೇ ದೇವಾ ದುಷ್ಪ್ರಾಪ್ಯಂ ಚ ಮುನೀಶ್ವರಾಃ ॥ ೪೨ ॥

---

೩೮. ಬಳಿಕ ವಿಷ್ಣುವು ದೇವತೆಗಳೆಲ್ಲರಿಗೂ ಒಳ್ಳೆಯದಾಗಲೆಂದು ಲಿಂಗಗಳನ್ನು ಕೊಟ್ಟು ಆ ಶಿವನನ್ನು ಅರ್ಚಿಸುವ ಕ್ರಮವನ್ನು ಬ್ರಹ್ಮನಾದ ನನಗೆ ತಿಳಿಸಿದನು.

೩೯. ನಾನು, ಆತನು ಹೇಳಿದುದನ್ನು ಕೇಳಿ, ಸಂತೋಷದಿಂದ ಆ ದೇವತೆಗಳೊಡನೆ ಹೊರಟು ನನ್ನ ಲೋಕಕ್ಕೆ ಹಿಂದಿರುಗಿದೆನು.

೪೦. ಓ ನಾರದ, ನಾನಲ್ಲಿಗೆ ಬಂದು, ಎಲ್ಲ ದೇವತೆಗಳಿಗೂ, ಋಷಿಗಳಿಗೂ, ಸಕಲಾಭಿಷ್ಟಸಾಧಕವಾದ ಶಿವಪೂಜಾ ವಿಧಾನವನ್ನು ಚೆನ್ನಾಗಿ ವಿವರಿಸಿ ಹೇಳಿದೆನು.

೪೧. ಎಲೈ ದೇವತೆಗಳಿರಾ, ಋಷಿಗಳಿರಾ, ನೀವೆಲ್ಲರೂ ಪ್ರೀತಿಯಿಂದ ಭೋಗಭಾಗ್ಯಗಳನ್ನೂ ಮೋಕ್ಷವನ್ನೂ ಕೊಡುವ, ಶಿವಪೂಜಾ ವಿಧಾನವನ್ನು ಹೇಳುವೆನು. ಭಕ್ತಿಯಿಂದ ಕೇಳಿರಿ.

೪೨-೪೩. ಎಲ್ಲ ಪ್ರಾಣಿಗಳಿಗೂ ಮನುಷ್ಯ ಜನ್ಮವು ದುರ್ಲಭವಾದುದು. ಅದರಲ್ಲಿಯೂ ಒಳ್ಳೆಯ ಕುಲದಲ್ಲಿ ಜನ್ಮತಾಳುವುದು ದುರ್ಲಭವು. ಎಲೈ, ದೇವತೆಗಳಿರಾ, ಕೈಕಾಲು ಮುಂತಾದ ಅವಯವಗಳೊಂದೂ ವಿಕಾರಹೊಂದದೆ, ಒಳ್ಳೆಯ ಆಚಾರಶೀಲರಾದ ಬ್ರಾಹ್ಮಣರ ಮನೆಯಲ್ಲಿ ಜನ್ಮವನ್ನು ಪಡೆಯಬೇಕಾದರೆ ತಾನು

**ಅವ್ಯಗಂ ಚೈವ ವಿಪ್ರೇಷು ಸಾಚಾರೇಷು ಸುಪುಣ್ಯತಃ ।**
**ಶಿವಸಂತೋಷಹೇತೋಶ್ಚ ಕರ್ಮ ಸ್ವೋಕ್ತಂ ಸಮಾಚರೇತ್ ॥ ೪೩ ॥**

**ಯದ್ಯಜ್ಜಾತಿಸಮುದ್ದಿಷ್ಟಂ ತತ್ತತ್ಕರ್ಮ ನ ಲಂಘಯೇತ್ ।**
**ಯಾವದ್ದಾನಸ್ಯ ಸಂಪತ್ತಿಸ್ತಾವತ್ಕರ್ಮ ಸಮಾವಹೇತ್ ॥ ೪೪ ॥**

**ಕರ್ಮಯಜ್ಞಸಹಸ್ರೇಭ್ಯಸ್ತಪೋಯಜ್ಞೋ ವಿಶಿಷ್ಯತೇ ।**
**ತಪೋಯಜ್ಞಸಹಸ್ರೇಭ್ಯೋ ಜಪಯಜ್ಞೋ ವಿಶಿಷ್ಯತೇ ॥ ೪೫ ॥**

**ಧ್ಯಾನಯಜ್ಞಾತ್ಪರಂ ನಾಸ್ತಿ ಧ್ಯಾನಂ ಜ್ಞಾನಸ್ಯ ಸಾಧನಂ ।**
**ಯತಸ್ಸಮರಸಂ ಸ್ವೇಷ್ಟಂ ಯೋಗೀ ಧ್ಯಾನೇನ ಪಶ್ಯತಿ ॥ ೪೬ ॥**

**ಧ್ಯಾನಯಜ್ಞರತಸ್ಯಾಸ್ಯ ಸದಾ ಸನ್ನಿಹಿತಶ್ಶಿವಃ ।**
**ನಾಸ್ತಿ ವಿಜ್ಞಾನಿನಾಂ ಕಿಂಚಿತ್ಪ್ರಾಯಶ್ಚಿತ್ತಾದಿಶೋಧನಂ ॥ ೪೭ ॥**

---

ಹಿಂದೆ ಮಾಡಿದ ಬಹು ಪುಣ್ಯದಿಂದಲೇ ಎಂದು ತಿಳಿಯಿರಿ. ಇಂತಹ ಜನ್ಮವನ್ನು ಪಡೆದು ತನಗೆ ವಿಹಿತವಾದ ಕರ್ಮವನ್ನು ಶಿವನಿಗೆ ಪ್ರೀತಿಯಾಗಲೆಂದು ಮಾಡಬೇಕು.

೪೪. ತನ್ನ ಜಾತಿಗೆ ಯಾವುದು ವಿಹಿತವಾಗಿದೆಯೋ ಆ ಕರ್ಮಗಳನ್ನು ಉಲ್ಲಂಘಿಸಬಾರದು. ತನ್ನಲ್ಲಿ ಹಣವಿರುವಷ್ಟು ನೋಡಿಕೊಂಡು, ದಾನಾದಿಕ್ರಿಯೆಗಳನ್ನು ಮಾಡಬೇಕು.

೪೫. ಸಾವಿರ ಕರ್ಮಪ್ರಧಾನವಾದ ಯಜ್ಞಗಳಿಗಿಂತಲೂ, ಒಂದು ತಪೋಯಜ್ಞವು ಮಿಗಿಲಾದುದು. ಅಂತಹ ಸಾವಿರ ತಪೋಯಜ್ಞಗಳಿಗಿಂತಲೂ, ಒಂದು ಜಪಯಜ್ಞವು ಶ್ರೇಷ್ಠವಾದುದು.

೪೬. ಧ್ಯಾನಯಜ್ಞಕ್ಕಿಂತಲೂ ಉತ್ತಮವಾದುದಿನ್ನೊಂದಿಲ್ಲ. ಧ್ಯಾನವು ಜ್ಞಾನಕ್ಕೆ ಸಾಧಕವಾದುದು. ಯೋಗನಿರತನಾದವನು ಧ್ಯಾನದಿಂದ ತನಗಿಷ್ಟವಾದುದನ್ನು ಸಮರಸವಾಗಿ ನೋಡುವನಲ್ಲವೆ?

೪೭. ಧ್ಯಾನಯಜ್ಞನಿರತರಾದವರ ಬಳಿಯಲ್ಲಿ ಸದಾ, ಶಿವನು ನೆಲಸಿರುವನು. ವಿಜ್ಞಾನಶೀಲರಾದವರಿಗೆ ಪ್ರಾಯಶ್ಚಿತ್ತಾದಿ ಪಾಪನಿರ್ಮೂಲನ ಕಾರ್ಯಗಳು ಆವಶ್ಯಕವಿಲ್ಲ.

ವಿಶುದ್ಧಾ ವಿದ್ಯಯಾ ಯೇ ಚ ಬ್ರಹ್ಮಜ್ಞಾ ಬ್ರಹ್ಮವಿದೋ ಜನಾಃ ।
ನಾಸ್ತಿ ಕ್ರಿಯಾ ಚ ತೇಷಾಂ ವೈ ಸುಖಂ ದುಃಖಂ ವಿಚಾರತಃ ॥ ೪೮ ॥

ಧರ್ಮಾಧರ್ಮೌ ಜಪೋ ಹೋಮೋ ಧ್ಯಾನಂ ಧ್ಯಾನವಿಧಿಸ್ತಥಾ ।
ಸರ್ವದಾ ನಿರ್ವಿಕಾರಾಸ್ತೇ ವಿದ್ಯಯಾ ತಯಾಮರಾಃ ॥ ೪೯ ॥

ಪರಾನಂದಕರಂ ಲಿಂಗಂ ವಿಶುದ್ಧಂ ಶಿವಮಕ್ಷರಂ ।
ನಿಷ್ಕಲಂ ಸರ್ವಗಂ ಜ್ಞೇಯಂ ಯೋಗಿನಾಂ ಹೃದಿ ಸಂಸ್ಥಿತಂ ॥ ೫೦ ॥

ಲಿಂಗಂ ತು ದ್ವಿವಿಧಂ ಪ್ರೋಕ್ತಂ ಬಾಹ್ಯಮಾಭ್ಯಂತರಂ ದ್ವಿಜಾಃ ।
ಬಾಹ್ಯಂ ಸ್ಥೂಲಂ ಸಮುದ್ದಿಷ್ಟಂ ಸೂಕ್ಷ್ಮಮಾಭ್ಯಂತರಂ ಮತಂ ॥ ೫೧ ॥

ಕರ್ಮಯಜ್ಞರತಾ ಯೇ ಚ ಸ್ಥೂಲಲಿಂಗಾರ್ಚನೇ ರತಾಃ ।
ಅಸತಾಂ ಭಾವನಾರ್ಥಾಯ ಸೂಕ್ಷ್ಮೇಣ ಸ್ಥೂಲವಿಗ್ರಹಾಃ ॥ ೫೨ ॥

---

೪೮. ವಿಚಾರಮಾಡಿನೋಡಿದರೆ ಯಾರು ಈರೀತಿ ವಿಜ್ಞಾನದಿಂದ ಶುದ್ಧವಾಗಿರುವರೋ ಅವರಿಗೆ, ಕರ್ಮಗಳೂ ಸುಖದುಃಖಗಳೂ ಒಂದೂ ಇಲ್ಲವು.

೪೯. ಎಲೈ ದೇವತೆಗಳಿರಾ, ಅವರಿಗೆ ಧರ್ಮಾಧರ್ಮಗಳೂ, ಜಪ, ಹೋಮ, ಧ್ಯಾನ, ಇವ್ರೊಂದೂ ಬೇಕಾಗಿಲ್ಲ. ಅವರು ಆ ವಿಜ್ಞಾನಬಲದಿಂದ ಸದಾ ವಿಕಾರರಹಿತರಾಗಿಯೇ ಇರುತ್ತಾರೆ.

೫೦. ಪರಮಾನಂದಕಾರಕವೂ, ಶುದ್ಧವೂ, ಮಂಗಲಮಯವೂ, ನಾಶವಿಲ್ಲದುದೂ, ಕಲಾತೀತವೂ, ಸರ್ವವ್ಯಾಪಿಯೂ ಆದ ಶಿವಲಿಂಗವು ಯೋಗಿಗಳ ಹೃದಯದಲ್ಲೇ ಇದೆಯೆಂದು ಅರಿಯಿರಿ.

೫೧. ಎಲೈ ಬ್ರಾಹ್ಮಣರೇ, ಲಿಂಗವು ಬಾಹ್ಯವೆಂದೂ ಆಭ್ಯಂತರವೆಂದೂ ಎರಡು ವಿಧವಾಗಿರುವುದು. ಸ್ಥೂಲವಾಗಿ ಕಣ್ಣಿಗೆ ಗೋಚರವಾಗುವುದು ಬಾಹ್ಯವೆನಿಸುವುದು. ಬಾಹ್ಯೇಂದ್ರಿಯಗಳಿಗೆ ಗೋಚರಿಸದೆ ಸೂಕ್ಷ್ಮವಾಗಿರುವುದು ಆಭ್ಯಂತರವೆನಿಸುವುದು.

೫೨. ಯಾರು ಕರ್ಮಯಜ್ಞನಿರತರೋ ಯಾರು ಬಾಹ್ಯ ಲಿಂಗವನ್ನು ಪೂಜಿಸುವರೋ ಅವರು, ಅಜ್ಞಾನಿಗಳ ತಿಳುವಳಿಕೆಗಾಗಿ ಸ್ಥೂಲಲಿಂಗಾರ್ಚನೆಯಲ್ಲಿ ತೊಡಗಿರುವರೆಂದು ಭಾವಿಸಬೇಕು.

ಆಧ್ಯಾತ್ಮಿಕಂ ತು ಯಲ್ಲಿಂಗಂ ಪ್ರತ್ಯಕ್ಷಂ ಯಸ್ಯ ನೋ ಭವೇತ್ ।
ಸ ತಲ್ಲಿಂಗೇ ತಥಾ ಸ್ಥೂಲೇ ಕಲ್ಪಯೇಚ್ಚ ನ ಚಾನ್ಯಥಾ ॥ ೫೩ ॥

ಜ್ಞಾನಿನಾಂ ಸೂಕ್ಷ್ಮಮಮಲಂ ಭಾವಾತ್ಪ್ರತ್ಯಕ್ಷಮವ್ಯಯಂ ।
ಯಥಾ ಸ್ಥೂಲಮಯುಕ್ತಾನಾಮುತ್ಕೃಷ್ಟಾದೌ ಪ್ರಕಲ್ಪಿತಂ ॥ ೫೪ ॥

ಅಹೋ ವಿಚಾರತೋ ನಾಸ್ತಿ ಹನ್ಯತ್ತತ್ತ್ವಾರ್ಥವಾದಿನಃ ।
ನಿಷ್ಕಲಂ ಸಕಲಂ ಚಿತ್ತೇ ಸರ್ವಂ ಶಿವಮಯಂ ಜಗತ್ ॥ ೫೫ ॥

ಏವಂ ಜ್ಞಾನವಿಮುಕ್ತಾನಾಂ ನಾಸ್ತಿ ದೋಷವಿಕಲ್ಪನಾ ।
ವಿಧಿಶ್ಚೈವ ತಥಾ ನಾಸ್ತಿ ವಿಹಿತಾವಿಹಿತೇ ತಥಾ ॥ ೫೬ ॥

---

೫೩. ಆಧ್ಯಾತ್ಮಿಕವಾದ ಅಂದರೆ ಆಭ್ಯಂತರವಾದ ಲಿಂಗವನ್ನು ತಾನು ತಿಳಿದು ಕೊಳ್ಳಲಾರದ ಮಾತ್ರಕ್ಕೇ ಆತನು ಸ್ಥೂಲಲಿಂಗಕ್ಕೂ ಆಭ್ಯಂತರ ಲಿಂಗಕ್ಕೂ ಭೇದ ವನ್ನು ಕಲ್ಪಿಸಬಾರದು.

೫೪. ಜ್ಞಾನಿಗಳಾದವರಿಗೆ, ಶುದ್ಧವೂ, ಅವಿನಾಶಿಯೂ ಆದ ಆ ಸೂಕ್ಷ್ಮ ಲಿಂಗವು ವಿಹಿತವು. ಅಂತಹ ಯೋಗ್ಯತೆಯನ್ನು ಇನ್ನೂ ಪಡೆಯದೆ ಇರುವವರಿಗೆ ಸ್ಥೂಲಲಿಂಗವು ಪ್ರಕಲ್ಪಿತವಾಗಿರುವುದು. ಆ ಆಭ್ಯಂತರಲಿಂಗವು ಅವರಿಗೆ ಭಾವನಾ ಮಾತ್ರದಿಂದಲೇ ಗೋಚರವಾಗುವುದು.

೫೫. ತತ್ತ್ವಾರ್ಥವನ್ನು ಅರಿಯಬೇಕೆಂದಿರುವವನಿಗೆ ವಿಚಾರಕ್ಕಿಂತಲೂ ಬೇರೆ ಮಾರ್ಗವು ಯಾವುದೂ ಇಲ್ಲ ಅವನ ಅಂತರಂಗದಲ್ಲಿಯೇ ಕಲಾಸಹಿತನೂ, ಕಲಾತೀತನೂ ಆದ ಶಿವನಿರುವನು. ಅಂತಹ ವಿಜ್ಞಾನಿಯು ಪ್ರಪಂಚವೆಲ್ಲವನ್ನೂ ಶಿವನೆಂದು ಭಾವಿಸುವನು. ಅವನಿಗೆ ಜಗತ್ತೇ ಶಿವಸ್ವರೂಪವಾಗಿ ತೋರುವುದು.

೫೬. ಈರೀತಿ ಶುದ್ಧಜ್ಞಾನದಿಂದ ನಿಸ್ಸಂಗರಾದವರಿಗೆ ಯಾವ ದೋಷದ ಸಂಪರ್ಕವೂ ಇಲ್ಲ. ಅವರಿಗೆ ವಿಧಿಯಿಲ್ಲ. ವಿಹಿತಾವಿಹಿತವಿಲ್ಲ. ನಿಷಿದ್ಧವಾದುದೂ ಇಲ್ಲ.

ಯಥಾ ಜಲೇಷು ಕಮಲಂ ಸಲಿಲೈರ್ನಾವಲಿಪ್ಯತೇ ।
ತಥಾ ಜ್ಞಾನೀ ಗೃಹೇ ತಿಷ್ಠನ್ಕರ್ಮಣಾ ನಾವಬಧ್ಯತೇ ॥ ೫೭ ॥

ಇತಿ ಜ್ಞಾನಂ ಸಮುತ್ಪನ್ನಂ ಯಾವನ್ನೈವ ನರಸ್ಯ ವೈ ।
ತಾವಚ್ಚ ಕರ್ಮಣಾ ದೇವಂ ಶಿವಮಾರಾಧಯೇನ್ನರಃ ॥ ೫೮ ॥

ಪ್ರತ್ಯಯಾರ್ಥಂ ಚ ಜಗತಾಮೇಕಸ್ಥೋಽಪಿ ದಿವಾಕರಃ ।
ಏಕೋಽಪಿ ಬಹುಧಾ ದೃಷ್ಟೋ ಜಲಾಧಾರಾದಿವಸ್ತುಷು ॥ ೫೯ ॥

ದೃಶ್ಯತೇ ಶ್ರೂಯತೇ ಲೋಕೇ ಯದ್ಯತ್ಸದಸದಾತ್ಮಕಂ ।
ತತ್ತತ್ಸರ್ವಂ ಸುರಾ ವಿತ್ತಂ ಪರಂ ಬ್ರಹ್ಮ ಶಿವಾತ್ಮಕಂ ॥ ೬೦ ॥

---

೫೭. ನೀರಿನ ಮೇಲೆ ಕಮಲವು ಇದ್ದರೂ, ಆ ಕಮಲಕ್ಕೆ ನೀರು ಹೇಗೆ ಅಂಟದೇ ಇರುವುದೋ ಹಾಗೆ ಜ್ಞಾನಿಯಾದವನು ಕರ್ಮಪ್ರಧಾನವಾದ ಗೃಹಸ್ಥನಾಗಿ ಇದ್ದರೂ, ಕರ್ಮಬಂಧಕ್ಕೆ ಸಿಕ್ಕಲಾರನು.

೫೮. ಇಂತಹ ಶುದ್ಧಜ್ಞಾನವು ಯಾವನಿಗೆ ಇನ್ನೂ ಹುಟ್ಟದಿರುವುದೋ ಅವನು ಆ ಜ್ಞಾನವು ಹುಟ್ಟುವವರೆಗೂ ಕರ್ಮಾಚರಣೆಯಿಂದ ಶಿವನನ್ನಾರಾಧಿಸುತ್ತಿರಬೇಕು.

೫೯. ಜಗತ್ತಿಗೆ ನಂಬಿಕೆ ಹುಟ್ಟಲೆಂದು, ಆತನು ವಸ್ತುತಃ ಒಬ್ಬನೇ ಆಗಿದ್ದರೂ, ಒಬ್ಬನೇ ಸೂರ್ಯನು ನೀರು ತುಂಬಿದ ಅನೇಕ ಪಾತ್ರೆಗಳಲ್ಲಿ ಪ್ರತಿಬಿಂಬಿಸಿ ಬಹುವಿಧವಾಗಿ ತೋರುವಂತೆ, ನಾನಾ ರೂಪವಾಗಿ ತೋರುವನು.

೬೦. ಈ ಜಗತ್ತಿನಲ್ಲಿ ಯಾವುದು ಕಾಣುವುದೋ, ಯಾವುದು ಕೇಳಿಬರುವುದೋ, ಮತ್ತು ಸದ್ರೂಪವಾಗಿಯೂ, ಅಸದ್ರೂಪವಾಗಿಯೂ ಯಾವುದು ತೋರುವುದೋ ಅದೆಲ್ಲವೂ ಪರಬ್ರಹ್ಮಾತ್ಮಕನಾದ ಆ ಶಿವನೆಂದೇ ತಿಳಿಯಿರಿ.

ಭೇದೋ ಜಲಾನಾಂ ಲೋಕೇಽಸ್ಮಿನ್ಪ್ರತಿಭಾವೇ ವಿಚಾರತಃ ।
ಏವಮಾಹುಸ್ತಥಾ ಚಾನ್ಯೇ ಸರ್ವೇ ವೇದಾರ್ಥತತ್ತ್ವಗಾಃ ॥ ೬೧ ॥

ಹೃದಿ ಸಂಸಾರಿಣಃ ಸಾಕ್ಷಾತ್ಸಕಲಃ ಪರಮೇಶ್ವರಃ ।
ಇತಿ ವಿಜ್ಞಾನಯುಕ್ತಸ್ಯ ಕಿಂ ತಸ್ಯ ಪ್ರತಿಮಾದಿಭಿಃ ॥ ೬೨ ॥

ಇತಿ ವಿಜ್ಞಾನಹೀನಸ್ಯ ಪ್ರತಿಮಾಕಲ್ಪನಾ ಶುಭಾ ।
ಪದಮುಚ್ಚೈಸ್ಸಮಾರೋಢುಂ ಪುಂಸೋ ಹ್ಯಾಲಂಬನಂ ಸ್ಮೃತಂ ॥ ೬೩ ॥

ಆಲಂಬನಂ ವಿನಾ ತಸ್ಯ ಪದಮುಚ್ಚೈಃ ಸುದುಷ್ಕರಂ ।
ನಿರ್ಗುಣಪ್ರಾಪ್ತಯೇ ನ್ಯೃಣಾಂ ಪ್ರತಿಮಾಲಂಬನಂ ಸ್ಮೃತಂ ॥ ೬೪ ॥

---

೬೧. ನೀರು ಒಂದಾದರೂ, ಗಡಿಗೆ ಮೊದಲಾದ ವಸ್ತು ಸಂಸರ್ಗದಿಂದ ಬೇರೆ ಬೇರೆಯಾಗಿ ತೋರುವಂತೆ ಪರಬ್ರಹ್ಮವೂ ಉಪಾಧಿವಶದಿಂದ ಬೇರೆ ಬೇರೆಯಾಗಿ ತೋರುವುದೆಂದು ವೇದಾಂತದ ರಹಸ್ಯವನ್ನು ಬಲ್ಲವರು ಹೇಳುವರು.

೬೨. ಸಾಕ್ಷಾತ್ಪರಮೇಶ್ವರನು ಹೃದಯದಲ್ಲೇ ನೆಲೆಸಿರುವನು ಎಂದು ಯಾವಾತನು ತಿಳಿದಿರುವನೋ, ಆತನು ಸಂಸಾರಿಯೇ ಆಗಿದ್ದರೂ ಅವನಿಗೆ ಈ ಬಾಹ್ಯ ಪ್ರತಿಮೆಗಳು ವಿಗ್ರಹಪೂಜಾದಿಗಳು ಏತಕ್ಕೆ?

೬೩. ಈರೀತಿ ಭಾವನೆಯು ಯಾವನಿಗೆ ಇಲ್ಲವೋ ಅವನು ಪ್ರತಿಮಾದಿಗಳನ್ನಿಟ್ಟುಪೂಜಾದಿಗಳನ್ನು ಮಾಡಬೇಕು. ಉನ್ನತವಾದ ಸ್ಥಾನವನ್ನು ಪಡೆಯಬೇಕಾದರೆ, ವಿಗ್ರಹಾರಾಧನೆಯು ಶ್ರೇಷ್ಠವಾದ ಸಾಧನವೆಂದು ಹೇಳಲ್ಪಟ್ಟಿದೆ.

೬೪. ಯಾವ ಆಲಂಬನವೂ ಇಲ್ಲದೆ ಮೇಲಿನ ಹಂತವನ್ನು ಹತ್ತಲು ಸಾಧ್ಯವಿಲ್ಲವಷ್ಟೆ? ಗುಣಾತೀತನಾದ ಆ ಪರಬ್ರಹ್ಮನನ್ನು ಹೊಂದಲು ಮನುಷ್ಯರಿಗೆ ಸಗುಣ ಮೂರ್ತಿಯ ಪ್ರತಿಮೆಯೇ ಆಲಂಬನವೆಂದು ತಿಳಿ.

**ಸಗುಣಾನ್ನಿರ್ಗುಣಪ್ರಾಪ್ತಿರ್ಭವತೀತಿ ಸುನಿಶ್ಚಿತಂ ।**
**ಏವಂ ಚ ಸರ್ವದೇವಾನಾಂ ಪ್ರತಿಮಾ ಪ್ರತ್ಯಯಾವಹಾ ॥ ೬೫ ॥**

**ದೇವಶ್ಚಾಯಂ ಮಹೀಯಾನ್ವೈ ತಸ್ಯಾರ್ಥೇ ಪೂಜನಂ ತ್ವಿದಂ ।**
**ಗಂಧಚಂದನಪುಷ್ಪಾದಿ ಕಿಮರ್ಥಂ ಪ್ರತಿಮಾಂ ವಿನಾ ॥ ೬೬ ॥**

**ತಾವಚ್ಚ ಪ್ರತಿಮಾ ಪೂಜ್ಯಾ ಯಾವದ್ವಿಜ್ಞಾನಸಂಭವಃ ।**
**ಜ್ಞಾನಾಭಾವೇ ನ ಪೂಜ್ಯೇತ ಪತನಂ ತಸ್ಯ ನಿಶ್ಚಿತಂ ॥ ೬೭ ॥**

**ಏತಸ್ಮಾತ್ಕಾರಣಾದ್ವಿಪ್ರಾಃ ಶ್ರೂಯತಾಂ ಪರಮಾರ್ಥತಃ ।**
**ಸ್ವಜಾತ್ಯುಕ್ತಂ ತು ಯತ್ಕರ್ಮ ಕರ್ತವ್ಯಂ ತತ್ಪ್ರಯತ್ನತಃ ॥ ೬೮ ॥**

**ಯತ್ರ ಯತ್ರ ಯಥಾ ಭಕ್ತಿಃ ಕರ್ತವ್ಯಂ ಪೂಜನಾದಿಕಂ ।**
**ವಿನಾ ಪೂಜನದಾನಾದಿ ಪಾತಕಂ ನ ಚ ದೂರತಃ ॥ ೬೯ ॥**

೬೫. ಸಗುಣಸ್ವರೂಪದ ಆರಾಧನೆಯಿಂದ ನಿರ್ಗುಣನಾದ ಪರಬ್ರಹ್ಮನನ್ನು ಸಾಕ್ಷಾತ್ಕರಿಸಬಹುದೆಂಬುದು ನಿರ್ವಿವಾದವಾದುದು. ಹೀಗಾಗಿ, ಎಲ್ಲ ದೇವತೆಗಳಿಗೂ ಪ್ರತಿಮೆಗಳು ಆದುವೆಂದು ನಂಬಬೇಕು.

೬೬. ಪ್ರಕೃತ, ಈ ಶಿವನು ದೇವತೆಗಳಿಗೆಲ್ಲಾ ಪೂಜ್ಯನಲ್ಲವೇ? ಆತನಿಗೇ ಈ ಪೂಜೆಯಿರುವುದು. ಪ್ರತಿಮೆಯೇ ಇಲ್ಲದಿದ್ದರೆ ಗಂಧ, ಚಂದನ, ಹೂವು ಮೊದಲಾದ ಸಾಮಗ್ರಿಗಳೆಲ್ಲಾ ಏಕೆ?

೬೭. ಎಲ್ಲವೂ ಶಿವಮಯವೆಂಬ ಶುದ್ಧವಾದ, ಜ್ಞಾನವು ಹುಟ್ಟುವವರೆಗೂ, ದೇವತಾಮೂರ್ತಿಗಳನ್ನು ಪೂಜಿಸುತ್ತಿರಬೇಕು. ಅಂತಹ ಜ್ಞಾನವಿಲ್ಲದೆ, ಆ ರೀತಿ ವಿಗ್ರಹಾರಾಧನೆಯೂ ಇಲ್ಲದಿದ್ದರೆ, ಅಂಥವನು ನರಕದಲ್ಲಿ ಬೀಳುವುದು ಖಂಡಿತ.

೬೮. ಎಲೈ ಬ್ರಾಹ್ಮಣರೇ, ಯಥಾರ್ಥವಾದ ಈ ಮಾತನ್ನು ಕೇಳಿರಿ, ಈ ಕಾರಣದಿಂದಲೇ, ತನ್ನ ಜಾತಿಗೆ ವಿಹಿತವಾದ ಯಾವ ಯಾವ ಕರ್ಮವುಂಟೋ ಅದೆಲ್ಲವನ್ನೂ ತಪ್ಪದೆ ಖಂಡಿತ ನಡೆಸಿಕೊಂಡು ಬರಬೇಕು.

೬೯. ಯಾವಯಾವುದರಲ್ಲಿ ಭಕ್ತಿಯು ಯಾವ ರೀತಿ ಇರುವುದೋ, ಆರೀತಿ ಅವುಗಳಿಗೆ ಪೂಜಾದಿಗಳನ್ನು ಮಾಡಬೇಕು. ದೇವರ ಪೂಜೆಯೂ, ದಾನಧರ್ಮಗಳೂ ಇಲ್ಲದಿದ್ದರೆ ಪಾಪವು ದೂರವಾಗುವಂತಿಲ್ಲ.

ಯಾವಚ್ಚ ಪಾತಕಂ ದೇಹೇ ತಾವತ್ಸಿದ್ಧಿರ್ನ ಜಾಯತೇ ।
ಗತೇ ಚ ಪಾತಕೇ ತಸ್ಯ ಸರ್ವಂ ಚ ಸಫಲಂ ಭವೇತ್ ॥ ೭೦ ॥

ತಥಾ ಚ ಮಲಿನೇ ವಸ್ತ್ರೇ ರಂಗಃ ಶುಭತರೋ ನ ಹಿ ।
ಕ್ಷಾಲನೇ ಹಿ ಕೃತೇ ಶುದ್ಧೇ ಸರ್ವೋ ರಂಗಃ ಪ್ರಸಜ್ಜತೇ ॥ ೭೧ ॥

ತಥಾ ಚ ನಿರ್ಮಲೇ ದೇಹೇ ದೇವಾನಾಂ ಸಮ್ಯಗರ್ಚಯಾ ।
ಜ್ಞಾನರಂಗಃ ಪ್ರಜಾಯೇತ ತದಾ ವಿಜ್ಞಾನಸಂಭವಃ ॥ ೭೨ ॥

ವಿಜ್ಞಾನಸ್ಯ ಚ ಸನ್ಮೂಲಂ ಭಕ್ತಿರವ್ಯಭಿಚಾರಿಣೀ ।
ಜ್ಞಾನಸ್ಯಾಪಿ ಚ ಸನ್ಮೂಲಂ ಭಕ್ತಿರೇವಾಭಿಧೀಯತೇ ॥ ೭೩ ॥

ಭಕ್ತೇರ್ಮೂಲಂ ಸತ್ಕರ್ಮ ಸ್ವೇಷ್ಟದೇವಾದಿಪೂಜನಂ ।
ತನ್ಮೂಲಂ ಸದ್ಗುರುಃ ಪ್ರೋಕ್ತಸ್ತನ್ಮೂಲಂ ಸಂಗತಿಃ ಸತಾಂ ॥ ೭೪ ॥

---

೭೦. ಎಲ್ಲಿಯವರೆಗೆ ಈ ದೇಹದಲ್ಲಿ ಪಾಪದ ಸಂಬಂಧವಿರುವುದೋ, ಅಲ್ಲಿಯವರೆಗೆ ಆತನಿಗೆ ಸಿದ್ಧಿಯು ಲಭಿಸಲಾರದು. ಪಾಪಸಂಬಂಧವು ಬಿಟ್ಟುಹೋಗಲು ಅವನು ಮಾಡಿದ ಕರ್ಮವೆಲ್ಲವೂ ಸಫಲವಾಗುವುದು.

೭೧. ಹೇಗೆಂದರೆ, ಕೊಳಕು ಬಟ್ಟೆಯಮೇಲೆ ಯಾವ ಬಣ್ಣವೂ ಕಾಣಿಸಲಾರದು, ಬಟ್ಟೆಯನ್ನು ಒಗೆಯಲು, ಕೊಳೆಯೆಲ್ಲವೂ ಕಳೆದುಹೋದಮೇಲೆ, ಬಣ್ಣವು ಚೆನ್ನಾಗಿ ಕಾಣುವುದು.

೭೨. ಹಾಗೆಯೇ, ದೇವತಾರಾಧನೆಯಿಂದ ಶರೀರವೆಲ್ಲವೂ ಪಾಪರಹಿತವಾಗಿ ಶುದ್ಧವಾಗಲು ಜ್ಞಾನವೆಂಬ ಬಣ್ಣವು ಹತ್ತಲು ಅನುವಾಗುವುದು. ಆಗಲೇ ವಿಜ್ಞಾನವು ಹುಟ್ಟುವುದು.

೭೩. ವಿಜ್ಞಾನಕ್ಕೆ ಮೂಲಕಾರಣವಾವುದೆಂದರೆ ಅನನ್ಯವಾದ ಭಕ್ತಿಯೇ. ಜ್ಞಾನಕ್ಕೂ ಸಹ ಮುಖ್ಯಕಾರಣವು, ಭಕ್ತಿಯೆಂದೇ ತಿಳಿಯಬೇಕು.

೭೪. ಆ ಭಕ್ತಿಯು ಹುಟ್ಟಬೇಕಾದರೆ, ತನಗೆ ಇಷ್ಟವಾದ ದೇವತೆಗಳೇ ಮೊದಲಾದವರ ಪೂಜೆ ಮುಂತಾದ ಸತ್ಕರ್ಮಗಳು ಅವಶ್ಯಕ. ಆ ಸತ್ಕರ್ಮಗಳಿಗೆ ಗುರುವು ಕಾರಣ. ಆ ಗುರುವು ದೊರೆಯಲು ಸಜ್ಜನರ ಸಹವಾಸವು ಕಾರಣ.

**ಸಂಗತ್ಯಾ ಗುರುಲಾಭಸ್ಯೇತ ಗುರೋರ್ಮಂತ್ರಾದಿ ಪೂಜನಂ ।**
**ಪೂಜನಾಜ್ಜಾಯತೇ ಭಕ್ತಿರ್ಭಕ್ತ್ಯಾ ಜ್ಞಾನಂ ಪ್ರಜಾಯತೇ ॥ ೭೫ ॥**

**ವಿಜ್ಞಾನಂ ಜಾಯತೇ ಜ್ಞಾನಾತ್ಪರಬ್ರಹ್ಮಪ್ರಕಾಶಕಂ ।**
**ವಿಜ್ಞಾನಂ ಚ ಯದಾ ಜಾತಂ ತದಾ ಭೇದೋ ನಿವರ್ತತೇ ॥ ೭೬ ॥**

**ಭೇದೇ ನಿವೃತ್ತೇ ಸಕಲೇ ದ್ವಂದ್ವದುಃಖವಿಹೀನತಾ ।**
**ದ್ವಂದ್ವದುಃಖವಿಹೀನಸ್ತು ಶಿವರೂಪೋ ಭವತ್ಯಸೌ ॥ ೭೭ ॥**

**ದ್ವಂದ್ವಾಪ್ರಾಪ್ತೌ ನ ಜಾಯೇತಾಂ ಸುಖದುಃಖೇ ವಿಜಾನತಃ ।**
**ವಿಹಿತಾವಿಹಿತೇ ತಸ್ಯ ನ ಸ್ಯಾತಾಂ ಚ ಸುರರ್ಷಯಃ ॥ ೭೮ ॥**

**ಈದೃಶೋ ವಿರಲೋ ಲೋಕೇ ಗೃಹಾಶ್ರಮವಿವರ್ಜಿತಃ ।**
**ಯದಿ ಲೋಕೇ ಭವತ್ಯಸ್ಮಿನ್ದರ್ಶನಾತ್ಪಾಪಹಾರಕಃ ॥ ೭೯ ॥**

೭೫. ಸಾಧುಸಜ್ಜನರ ಸಹವಾಸದಿಂದ ಗುರುವು ದೊರೆಯುವನು. ಗುರುವಿನಿಂದ ಮಂತ್ರಗಳು ದೊರೆತು ದೇವನನ್ನು ಪೂಜಿಸಲು ಅನುಕೂಲವಾಗುವುದು. ಆ ಪೂಜೆಯಿಂದ ಭಕ್ತಿಯುಂಟಾಗುವುದು. ಭಕ್ತಿಯಿಂದ ಜ್ಞಾನವು ಲಭಿಸುವುದು.

೭೬. ಪರಬ್ರಹ್ಮನನ್ನು ಸಾಕ್ಷಾತ್ಕರಿಸಲು ಬೇಕಾದ ಆ ವಿಜ್ಞಾನವು ಜ್ಞಾನದಿಂದ ಹುಟ್ಟುವುದು. ವಿಜ್ಞಾನವು ಹುಟ್ಟಿದ ಮೇಲೆ ಭೇದವೆಲ್ಲಾ ಹೋಗಿ ಅಭೇದ ಜ್ಞಾನವುಂಟಾಗುವುದು.

೭೭. ಈರೀತಿ ಭೇದವು ಮಾಯವಾಗಲು ಶೀತೋಷ್ಣಾದಿ ದುಃಖಗಳು ಇಲ್ಲದೆ ಹೋಗುವುವು. ಯಾವಾಗ ಈ ದ್ವಂದ್ವಗಳ .ಬಾಧೆಯಿಲ್ಲವೋ ಆಗ ಸಾಕ್ಷಾತ್ ಶಿವನೇ ಇವನಾಗುವನು.

೭೮. ಓ ದೇವತೆಗಳಿರಾ, ಋಷಿಗಳಿರಾ, ಹೀಗೆ ದ್ವಂದ್ವವು ನಾಶವಾಗಲು ಆ ವಿಜ್ಞಾನಿಗೆ ಸುಖದುಃಖಗಳೇ ಇರುವುದಿಲ್ಲವು. ಆತನಿಗೆ ವಿಹಿತವೂ ಅವಿಹಿತವೂ ಯಾವುದೂ ಇಲ್ಲ.

೭೯. ಈರೀತಿ ಮನೆ, ಆಶ್ರಮ ಇವ್ಯಾವುದೂ ಇಲ್ಲದೆ ಇರುವವನು ಈ ಪ್ರಪಂಚದಲ್ಲಿ ಬಹು ಅಪರೂಪ. ಒಂದು ವೇಳೆ ದೊರೆತರೆ, ಅವನನ್ನು ನೋಡಿದ ಮಾತ್ರದಿಂದಲೇ ಪಾಪಗಳೆಲ್ಲವೂ ಪರಿಹಾರವಾಗುವುದು.

ತೀರ್ಥಾನಿ ಶ್ಲಾಘಯಂತೀಹ ತಾದೃಶಂ ಜ್ಞಾನವಿತ್ತಮಂ ।
ದೇವಾಶ್ಚ ಮುನಯಸ್ಸರ್ವೇ ಪರಬ್ರಹ್ಮಾತ್ಮಕಂ ಶಿವಂ ॥ ೮೦ ॥

ತಾದೃಶಾನಿ ನ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರುಕಾಲೇನ ವಿಜ್ಞಾನೀ ದರ್ಶನಾದಪಿ ॥ ೮೧ ॥

ಯಾವದ್ಗೃಹಾಶ್ರಮೇ ತಿಷ್ಠೇತ್ತಾವದಾಕಾರಪೂಜನಂ ।
ಕುರ್ಯಾಚ್ಛ್ರೇಷ್ಠಸ್ಯ ಸುಪ್ರೀತ್ಯಾ ಸುರೇಷು ಖಲು ಪಂಚಸು ॥ ೮೨ ॥

ಅಥವಾ ಚ ಶಿವಃ ಪೂಜ್ಯೋ ಮೂಲಮೇಕಂ ವಿಶಿಷ್ಯತೇ ।
ಮೂಲೇ ಸಿಕ್ತೇ ತಥಾ ಶಾಖಾಸ್ತೃಪ್ತಾಸ್ಸಂತ್ಯಖಿಲಾಸ್ಸುರಾಃ ॥ ೮೩ ॥

ಶಾಖಾಸು ಚ ಸುತೃಪ್ತಾಸು ಮೂಲಂ ತೃಪ್ತಂ ನ ಕರ್ಹಿಚಿತ್ ।
ಏವಂ ಸರ್ವೇಸು ತೃಪ್ತೇಷು ಸುರೇಷು ಮುನಿಸತ್ತಮಾಃ ॥ ೮೪ ॥

---

೮೦. ಅಂತಹ ಜ್ಞಾನಿಶ್ರೇಷ್ಠನನ್ನು, ತೀರ್ಥಗಳೂ, ದೇವತೆಗಳೂ, ಋಷಿಗಳೂ ಎಲ್ಲರೂ ಪರಬ್ರಹ್ಮಸ್ವರೂಪನಾದ ಶಿವನೇ ಇವನೆಂದು ಹೊಗಳುವರು.

೮೧. ತೀರ್ಥಗಳೂ ಮತ್ತು ಮಣ್ಣಿನಲ್ಲಿ ಮಾಡಿದ, ಕಲ್ಲಿನಲ್ಲಿ ಕಡೆದ ದೇವರುಗಳೂ, ಆ ವಿಜ್ಞಾನಿಯನ್ನು ಹೋಲಲಾರವು. ತೀರ್ಥಾದಿಗಳು ಬಹಳ ದಿವಸಗಳ ಮೇಲೆ ಮನುಷ್ಯನನ್ನು ಪಾವನನನ್ನಾಗಿ ಮಾಡುತ್ತವೆ. ವಿಜ್ಞಾನಿಯಾದರೋ ದರ್ಶನ ಮಾತ್ರದಿಂದಲೇ ಪಾವನಗೊಳಿಸುವನು.

೮೨. ಎಲ್ಲಿಯವರೆಗೆ, ಮನೆ, ಆಶ್ರಮ ಮುಂತಾದುವುಗಳ ಸಂಬಂಧವಿರುವುದೋ, ಅಲ್ಲಿಯವರೆಗೆ ಐದು ಮಂದಿ ಪ್ರಸಿದ್ಧವಾದ ದೇವತೆಗಳಲ್ಲಿ ಶ್ರೇಷ್ಠನಾದವನ ವಿಗ್ರಹವನ್ನು ಪ್ರೀತಿಯಿಂದ ಮಾಡಿ ಪೂಜಿಸಬೇಕು.

೮೩. ಇಲ್ಲದಿದ್ದರೆ ಶಿವನೊಬ್ಬನನ್ನೇ ಪೂಜಿಸಬಹುದು. ಕೊಂಬೆಗಳಿಗಿಂತಲೂ ಬುಡಕ್ಕೆ ಹೆಚ್ಚು ಬೆಲೆಯಲ್ಲವೆ? ಬುಡಕ್ಕೆ ನೀರೆರೆದರೆ ಕೊಂಬೆಗಳೂ ತಣಿಯುತ್ತವೆ. ಹಾಗೆಯೇ ಶಿವನು ಸುಪ್ರೀತನಾಗಲು ದೇವತೆಗಳೆಲ್ಲರೂ ತಣಿಯುವರು.

೮೪-೮೫. ಕೊಂಬೆಗಳು ಮಾತ್ರ ಚೆನ್ನಾಗಿ ತಣಿದ ಪಕ್ಷಕ್ಕೆ ಬುಡವು ಎಂದಿಗೂ ತಣಿದಂತೆ ಎಲ್ಲಿಯೂ ಕಂಡುಬಂದಿಲ್ಲ. ಎಲೈ ಮುನಿವರ್ಯರೇ, ಹೀಗೆಯೇ ಎಲ್ಲ

**ಸರ್ವಥಾ ಶಿವತೃಪ್ತಿರ್ನೋ ವಿಜ್ಞೇಯಾ ಸೂಕ್ಷ್ಮಬುದ್ಧಿಭಿಃ ।
ಶಿವೇ ಚ ಪೂಜಿತೇ ದೇವಾಃ ಪೂಜಿತಾಸ್ಸರ್ವ ಏವ ಹಿ ॥ ೮೫ ॥**

**ತಸ್ಮಾಚ್ಚ ಪೂಜಯೇದ್ದೇವಂ ಶಂಕರಂ ಲೋಕಶಂಕರಂ ।
ಸರ್ವಕಾಮಫಲಾವಾಪ್ತ್ಯೈ ಸರ್ವಭೂತಹಿತೇ ರತಃ ॥ ೮೬ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಪೂಜಾವಿಧಿವರ್ಣನೇ ಸಾರಾಸಾರ ವಿಚಾರವರ್ಣನೋ ನಾಮ ದ್ವಾದಶೋಽಧ್ಯಾಯಃ**



ದೇವತೆಗಳು ಪ್ರೀತರಾದರೂ, ಶಿವನು ಎಂದಿಗೂ ತೃಪ್ತನಾಗಲಿಲ್ಲವೆಂದು ಸೂಕ್ಷ್ಮಬುದ್ಧಿಗಳಾದವರು ಅರಿಯಬೇಕು. ಶಿವನೊಬ್ಬನನ್ನು ಪೂಜಿಸಿದರೆ ಎಲ್ಲ ದೇವರನ್ನೂ ಪೂಜಿಸಿದಂತೆಯೇ ಸರಿ.

೮೬. ಆದುದರಿಂದ, ತನ್ನ ಮನೋರಥಗಳೆಲ್ಲವನ್ನೂ ಪಡೆಯಬೇಕು ಎನ್ನುವವನು ಮತ್ತು ಸರ್ವ ಪ್ರಾಣಿಗಳಿಗೂ ಹಿತವನ್ನುಂಟುಮಾಡಲು ಆಸೆಯುಳ್ಳವನು, ಪ್ರಪಂಚಕ್ಕೇ ಕಲ್ಯಾಣದಾಯಕನಾದ ಶಂಕರನನ್ನು ಪೂಜಿಸಬೇಕು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯ ಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಪೂಜಾವಿಧಿವರ್ಣನದಲ್ಲಿಯ ಸಾರಾಸಾರ ವಿಚಾರವರ್ಣನವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸೃಷ್ಟಿಖಂಡೇ

# ತ್ರಯೋದಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

**ಅತಃ ಪರಂ ಪ್ರವಕ್ಷ್ಯಾಮಿ ಪೂಜಾವಿಧಿಮನುತ್ತಮಂ ।**
**ಶ್ರೂಯತಾಮೃಷಯೋ ದೇವಾಸ್ಸರ್ವಕಾಮಸುಖಾವಹಂ ॥ ೧ ॥**

**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಸಂಸ್ಮರೇತ್ಸಾಂಬಕಂ ಶಿವಂ ।**
**ಕುರ್ಯಾತ್ತತ್ಪ್ರಾರ್ಥನಾಂ ಭಕ್ತ್ಯಾ ಸಾಂಜಲಿರ್ನತಮಸ್ತಕಃ ॥ ೨ ॥**

---

## ಹದಿಮೂರನೆಯ ಅಧ್ಯಾಯವು

೧. ಬ್ರಹ್ಮನು ಹೇಳತೊಡಗಿದನು. ಎಲೈ ಋಷಿಗಳಿರಾ, ದೇವತೆಗಳಿರಾ, ಇನ್ನು ಮೇಲೆ, ಎಲ್ಲ ಅಭೀಷ್ಟಗಳನ್ನೂ ಸುಖಗಳನ್ನೂ ಕೊಡತಕ್ಕ, ಶ್ರೇಷ್ಠವಾದ ಶಿವ ಪೂಜಾವಿಧಾನವನ್ನು ಹೇಳುತ್ತೇನೆ, ಕೇಳಿರಿ.

೨. ಬ್ರಾಹ್ಮಮುಹೂರ್ತದಲ್ಲೆದ್ದು, ಎಂದರೆ ಉಷಃಕಾಲದಲ್ಲೆದ್ದು ಪಾರ್ವತಿಯಿಂದೊಡಗೂಡಿದ ಶಿವನನ್ನು ಸ್ಮರಣೆಮಾಡಬೇಕು. ಬದ್ಧಾಂಜಲಿಯಾಗಿ ತಲೆಯನ್ನು ಬಾಗಿಸಿ ಭಕ್ತಿಯಿಂದ ಆತನನ್ನು ಪ್ರಾರ್ಥಿಸಬೇಕು.

ಉತ್ತಿಷ್ಠೋತ್ತಿಷ್ಠ ದೇವೇಶ ಉತ್ತಿಷ್ಠ ಹೃದಯೇಶಯ ।
ಉತ್ತಿಷ್ಠ ತ್ವಮುಮಾಸ್ವಾಮಿನ್ಬ್ರಹ್ಮಾಂಡೇ ಮಂಗಲಂ ಕುರು ॥ ೩ ॥

ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿ-
ರ್ಜಾನಾಮ್ಯಧರ್ಮಂ ನ ಚ ಮೇ ನಿವೃತ್ತಿಃ ।
ತ್ವಯಾ ಮಹಾದೇವ ಹೃದಿ ಸ್ಥಿತೇನ
ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ ॥ ೪ ॥

ಇತ್ಯುಕ್ತ್ವಾ ವಚನಂ ಭಕ್ತ್ಯಾ ಸ್ಮೃತ್ವಾ ಚ ಗುರುಪಾದುಕೇ ।
ಬಹಿರ್ಗಚ್ಛೇದ್ದಕ್ಷಿಣಾಶಾಂ ತ್ಯಾಗಾರ್ಥಂ ಮಲಮೂತ್ರಯೋಃ ॥ ೫ ॥

ದೇಹಶುದ್ಧಿಂ ತತಃ ಕೃತ್ವಾ ಸಮ್ಯುಜ್ಜಲವಿಶೋಧನೈಃ ।
ಹಸ್ತೌ ಪಾದೌ ಚ ಪ್ರಕ್ಷಾಲ್ಯ ದಂತಧಾವನಮಾಚರೇತ್ ॥ ೬ ॥

೩. ಓ ದೇವಶ್ರೇಷ್ಠ, ಏಳು, ಎದ್ದೇಳು, ಸ್ಮರಿಸುವವರ ಮನಸ್ಸಿನಲ್ಲಿಯೇ ನೆಲಸಿರುವ ಸ್ವಾಮಿಯೇ! ಏಳು. ಓ ಪಾರ್ವತೀಕಾಂತ, ನೀನು ಮೇಲಕ್ಕೆದ್ದು ಬ್ರಹ್ಮಾಂಡದಲ್ಲಿ ಎಲ್ಲರಿಗೂ ಮಂಗಲವನ್ನು ಕರುಣಿಸು.

೪. ಓ ಮಹಾದೇವ, ಧರ್ಮವು ಇಂಥಾದ್ದೆಂದು ತಿಳಿದಿದ್ದರೂ ನನಗೆ ಅದರಲ್ಲಿ ಪ್ರವೃತ್ತಿಯಿಲ್ಲ. ಅಧರ್ಮವು ಇಂಥದೆಂದು ಗೊತ್ತು. ಆದರೆ ನಾನದನ್ನು ಬಿಟ್ಟಿಲ್ಲ. ನಮ್ಮ ಹೃದಯದಲ್ಲಿ ನೆಲಸಿರುವ ನೀನು ನಮ್ಮನ್ನು ಹೇಗೆ ಪ್ರೇರೇಪಿಸುವಿಯೋ ಆರೀತಿ ಮಾಡುತ್ತೇನೆ.

೫. ಈರೀತಿ ಭಕ್ತಿಯಿಂದ ಪ್ರಾರ್ಥನೆಯನ್ನು ಮಾಡಿದ ಬಳಿಕ, ಗುರುವಿನ ಪಾದುಕೆಗಳನ್ನು ನೆನೆದು, ಮಲಮೂತ್ರಾದಿ ಶೌಚಕರ್ಮಗಳಿಗೋಸ್ಕರ ಹೊರಗೆ ದಕ್ಷಿಣಾಭಿಮುಖವಾಗಿ ಹೋಗಬೇಕು.

ಬಳಿಕ ಮಣ್ಣು, ನೀರುಗಳಿಂದ ದೇಹಶುದ್ಧಿಯನ್ನು ಮಾಡಿಕೊಂಡು, ಕೈಕಾಲುಗಳನ್ನು ಚೆನ್ನಾಗಿ ತೊಳೆದುಕೊಂಡು ಹಲ್ಲುಗಳನ್ನುಜ್ಜಿಕೊಳ್ಳಬೇಕು.

**ದಿವಾನಾಥೇ ತ್ವನುದಿತೇ ಕೃತ್ವಾ ವೈ ದಂತಧಾವನಂ ।**
**ಮುಖಂ ಷೋಡಶವಾರಂ ತು ಪ್ರಕ್ಷಾಲ್ಯಾಂಜಲಿಭಿಸ್ತಥಾ ॥ ೭ ॥**

**ಷಷ್ಠ್ಯಾದ್ಯಮಾಶ್ಚ ತಿಥಯೋ ನವಮ್ಯರ್ಕದಿನೇ ತಥಾ ।**
**ವರ್ಜ್ಯಾಸ್ಸುರರ್ಷಯೋ ಯತ್ನಾದ್ಭಕ್ತೇನ ರದಧಾವನೇ ॥ ೮ ॥**

**ಯಥಾವಕಾಶಂ ಸುಸ್ನಾಯಾನ್ನದ್ಯಾದಿಷ್ವಥವಾ ಗೃಹೇ ।**
**ದೇಶಕಾಲವಿರುದ್ಧಂ ನ ಸ್ನಾನಂ ಕಾರ್ಯಂ ನರೇಣ ಚ ॥ ೯ ॥**

**ರವೇರ್ದಿನೇ ತಥಾ ಶ್ರಾದ್ಧೇ ಸಂಕ್ರಾಂತೌ ಗ್ರಹಣೇ ತಥಾ ।**
**ಮಹಾದಾನೇ ತಥಾ ತೀರ್ಥೇ ಉಪವಾಸದಿನೇ ತಥಾ ॥ ೧೦ ॥**

**ಅಶೌಚೇಽಪ್ಯಥವಾ ಪ್ರಾಪ್ತೇ ನ ಸ್ನಾಯಾದುಷ್ಣವಾರಿಣಾ ।**
**ಯಥಾ ಸಾಭಿಮುಖಂ ಸ್ನಾಯಾತ್ತೀರ್ಥಾದೌ ಭಕ್ತಿಮಾನ್ನರಃ ॥ ೧೧ ॥**

---

೭. ಸೂರ್ಯನು ಇನ್ನೂ ಹುಟ್ಟುವುದರೊಳಗಾಗಿಯೇ, ಹಲ್ಲುಗಳನ್ನುಜ್ಜಿಕೊಂಡು, ಹದಿನಾರು ಬಾರಿ, ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು ಮುಖವನ್ನು ತೊಳೆದುಕೊಳ್ಳಬೇಕು.

೮. ಎಲೈ, ದೇವರ್ಷಿಗಳಿರಾ, ಭಕ್ತನಾದವನು ಷಷ್ಠೀ, ಅಮಾವಾಸ್ಯೆ, ನವಮೀ ಮುಂತಾದ ತಿಥಿಗಳೂ, ಭಾನುವಾರವೂ ಸಹ ಖಂಡಿತವಾಗಿಯೂ ಹಲ್ಲುಗಳನ್ನುಜ್ಜಬಾರದು.

೯. ತನಗೆ ಅವಕಾಶ ದೊರೆತಂತೆ, ನದೀ ಮೊದಲಾದ ಜಲಾಶಯಗಳಲ್ಲೋ, ಅಥವಾ ಮನೆಯಲ್ಲಿಯೋ, ದೇಶಕ್ಕೂ ಕಾಲಕ್ಕೂ ವಿರೋಧವಿಲ್ಲದಂತೆ ಚೆನ್ನಾಗಿ ಸ್ನಾನವನ್ನು ಮಾಡಬೇಕು.

೧೦-೧೧. ಭಾನುವಾರ, ಶ್ರಾದ್ಧದಿವಸ, ಸಂಕ್ರಮಣ, ಗ್ರಹಣದಿನ, ಮಹಾದಾನಗಳನ್ನು ಮಾಡುವ ಸಮಯ, ತೀರ್ಥಕ್ಷೇತ್ರಗಳು, ಮತ್ತು ಏಕಾದಶಿ ಮುಂತಾದ ಉಪವಾಸದಿವಸಗಳು, ಆಶೌಚಾದಿಗಳು, ಇಂತಹ ಸಮಯಗಳಲ್ಲಿ ಬಿಸಿನೀರಿನಲ್ಲಿ ಸ್ನಾನ ಮಾಡಬಾರದು. ತೀರ್ಥ ಮುಂತಾದ ಕಡೆಗಳಲ್ಲಿ ಮನುಷ್ಯನು ಭಕ್ತಿಯುಕ್ತನಾಗಿ ನೀರು ತನಗೆ ಅಭಿಮುಖವಾಗಿ ಹರಿದುಬರುವ ಕಡೆ ನಿಂತು ಸ್ನಾನಮಾಡಬೇಕು.

**ತೈಲಾಭ್ಯಂಗಂ ಚ ಕುರ್ವೀತ ವಾರಾನ್ದೃಷ್ಟ್ವಾ ಕ್ರಮೇಣ ಚ ।**
**ನಿತ್ಯಮಭ್ಯಂಗಕೇ ಚೈವ ವಾಸಿತಂ ವಾ ನ ದೂಷಿತಂ ॥ ೧೨ ॥**

**ಶ್ರಾದ್ಧೇ ಚ ಗ್ರಹಣೇ ಚೈವೋಪವಾಸೇ ಪ್ರತಿಪದ್ದಿನೇ ।**
**ಅಥವಾ ಸಾರ್ಷಪಂ ತೈಲಂ ನ ದುಷ್ಯೇದ್ಗ್ರಹಣಂ ವಿನಾ ॥ ೧೩ ॥**

**ದೇಶಂ ಕಾಲಂ ವಿಚಾರ್ಯೈವಂ ಸ್ನಾನಂ ಕುರ್ಯಾದ್ಯಥಾವಿಧಿ ।**
**ಉತ್ತರಾಭಿಮುಖಶ್ಚೈವ ಪ್ರಾಙ್ಮುಖೋಽಪ್ಯಥವಾ ಪುನಃ ॥ ೧೪ ॥**

**ಉಚ್ಛಿಷ್ಟೇನೈವ ವಸ್ತ್ರೇಣ ನ ಸ್ನಾಯಾತ್ಸ ಕದಾಚನ ।**
**ಶುದ್ಧವಸ್ತ್ರೇಣ ಸ ಸ್ನಾಯಾತ್ತದ್ದೇವಸ್ಮರಪೂರ್ವಕಂ ॥ ೧೫ ॥**

**ಪರಧಾರ್ಯಂ ಚ ನೋಚ್ಛಿಷ್ಟಂ ರಾತ್ರೌ ಚ ವಿಧೃತಂ ಚ ಯತ್ ।**
**ತೇನ ಸ್ನಾನಂ ತಥಾ ಕಾರ್ಯಂ ಕ್ಷಾಲಿತಂ ಚ ಪರಿತ್ಯಜೇತ್ । ॥ ೧೬ ॥**

೧೨. ವಾರಗಳನ್ನು ಪರಿಶೀಲಿಸಿ ಕ್ರಮವಾಗಿ ಎಣ್ಣೆಯನ್ನೊತ್ತಿ ನೀರೆರೆದು ಕೊಳ್ಳಬೇಕು. ನಿತ್ಯವೂ ಹಾಗೆ ತೈಲಾಭ್ಯಂಗನವನ್ನು ಮಾಡಿಕೊಳ್ಳುವ ಅಭ್ಯಾಸ ವಿದ್ದಲ್ಲಿ ಸುವಾಸನೆಯು ದೂಷಿತವಾದುದಲ್ಲ.

೧೩. ಶ್ರಾದ್ಧ, ಗ್ರಹಣ, ಉಪವಾಸ, ಪಾಡ್ಯಮಿ ಈ ದಿನಗಳಲ್ಲಿ ಗ್ರಹಣದಿನ ವೊಂದನ್ನು ಬಿಟ್ಟು, ಉಳಿದ ದಿನಗಳಲ್ಲಿ ಸಾಸಿವೆಯ ಎಣ್ಣೆಗೆ ದೋಷವಿಲ್ಲ.

೧೪. ಈರೀತಿ ಕಾಲ ದೇಶಗಳನ್ನು ವಿಚಾರಿಸಿ, ವಿಧಿಗನುಸಾರವಾಗಿ, ಉತ್ತ ರಾಭಿಮುಖವಾಗಿಯೋ, ಪೂರ್ವಾಭಿಮುಖವಾಗಿಯೋ, ಸ್ನಾನವನ್ನಾಚರಿಸಬೇಕು.

೧೫. ಸಾಧಕನು ಎಂದಿಗೂ, ಉಟ್ಟ ಬಟ್ಟೆಯನ್ನು ಒಗೆಯದೆ, ಹಾಗೆಯೇ ಸ್ನಾನಮಾಡಬಾರದು. ಶುದ್ಧವಾದ ವಸ್ತ್ರವನ್ನುಟ್ಟು ಆಯಾ ದೇವರನ್ನು ಸ್ಮರಿ ಸುತ್ತಾ ಸ್ನಾನಮಾಡಬೇಕು.

೧೬. ಇನ್ನೊಬ್ಬರ ಬಟ್ಟೆ, ರಾತ್ರಿ ಹೊದ್ದಿದ್ದ ಬಟ್ಟೆ, ಇವು ಉಚ್ಛಿಷ್ಟವೆನಿಸು ವುವು. ಅವುಗಳನ್ನುಟ್ಟು ಸ್ನಾನಮಾಡಬಾರದು. ಸ್ನಾನವಾದಮೇಲೆ ಒದ್ದೆ ಬಟ್ಟೆ ಗಳನ್ನು ಬಿಚ್ಚಿಬಿಡಬೇಕು.

ತರ್ಪಣಂ ಚ ತತಃ ಕಾರ್ಯಂ ದೇವರ್ಷಿಪಿತೃತೃಪ್ತಿದಂ ।
ಧೌತವಸ್ತ್ರಂ ತತೋ ಧಾರ್ಯಂ ಪುನರಾಚಮನಂ ಚರೇತ್ ॥ ೧೭ ॥

ಶುಚೌ ದೇಶೇ ತತೋ ಗತ್ವಾ ಗೋಮಯಾದ್ಯುಪಮಾರ್ಜಿತೇ ।
ಆಸನಂ ಚ ಶುಭಂ ತತ್ರ ರಚನೀಯಂ ದ್ವಿಜೋತ್ತಮಾಃ ॥ ೧೮ ॥

ಶುದ್ಧಕಾಷ್ಠಸಮುತ್ಪನ್ನಂ ಪೂರ್ಣಂ ಸ್ತರಿತಮೇವ ವಾ ।
ಚಿತ್ರಾಸನಂ ತಥಾ ಕುರ್ಯಾತ್ಸರ್ವಕಾಮಫಲಪ್ರದಂ ॥ ೧೯ ॥

ಯಥಾಯೋಗ್ಯಂ ಪುನರ್ಗ್ರಾಹ್ಯಂ ಮೃಗಚರ್ಮಾದಿಕಂ ಚ ಯತ್ ।
ತತ್ರೋಪವಿಶ್ಯ ಕುರ್ವೀತ ತ್ರಿಪುಂಡ್ರಂ ಭಸ್ಮನಾ ಸುಧೀಃ ॥ ೨೦ ॥

ಜಪಸ್ತಪಸ್ತಥಾ ದಾನಂ ತ್ರಿಪುಂಡ್ರಾತ್ಸಫಲಂ ಭವೇತ್ ।
ಅಭಾವೇ ಭಸ್ಮನಸ್ತತ್ರ ಜಲಸ್ಯಾದಿ ಪ್ರಕೀರ್ತಿತಂ ॥ ೨೧ ॥

---

೧೭. ಹಾಗೆಯೇ, ದೇವತೆಗಳು, ಋಷಿಗಳು, ಪಿತೃಗಳು ಇವರುಗಳಿಗೆ ತೃಪ್ತಿಯನ್ನುಂಟುಮಾಡುವುದಕ್ಕಾಗಿ ತರ್ಪಣವನ್ನು ಮಾಡಿ, ಮಡಿಬಟ್ಟೆಯನ್ನುಟ್ಟು ಬಳಿಕ ಆಚಮನವನ್ನು ಮಾಡಬೇಕು.

೧೮. ಬಳಿಕ ಗೋಮಯವನ್ನು ತಂದು ಸಾರಿಸಿ ಶುದ್ಧಮಾಡಿ ಆ ಜಾಗದಲ್ಲಿ ಶುಭಕರವಾದ ಆಸನವನ್ನು ಏರ್ಪಡಿಸಬೇಕು.

೧೯. ಶುದ್ಧವಾದ ಮರದಿಂದ ಮಾಡಲ್ಪಟ್ಟ ಮಣೆಯನ್ನಾಗಲೀ, ಅಗಲವಾದ ಪೀಠವನ್ನಾಗಲೀ ಕೋರಿದುದೆಲ್ಲವನ್ನೂ ಕೊಡುವ ಚಿತ್ರಾಸನವನ್ನಾಗಲೀ ಉಪಯೋಗಿಸಬೇಕು.

೨೦. ಅಥವಾ ತನ್ನ ಆಶ್ರಮಕ್ಕೆ ಉಚಿತವಾದ ಕೃಷ್ಣಾಜಿನ ಮುಂತಾದುವನ್ನು ಉಪಯೋಗಿಸಬಹುದು. ಅದರಲ್ಲಿ ಕುಳಿತು ಭಸ್ಮದಿಂದ ತ್ರಿಪುಂಡ್ರಧಾರಣವನ್ನು ಮಾಡಬೇಕು.

೨೧. ಈರೀತಿ ಭಸ್ಮದ ಮೂರು ಎಳೆಗಳಿಂದ ತಾನು ಮಾಡಿದ ಜಪವೂ, ತಪಸ್ಸೂ, ದಾನವೂ ಸಫಲವಾಗುವುವು. ಒಂದುವೇಳೆ ಭಸ್ಮವು ದೊರೆಯದೆಹೋದರೆ ನೀರು ಮುಂತಾದುವುಗಳಿಂದ ತ್ರಿಪುಂಡ್ರವನ್ನು ಧರಿಸಬಹುದು.

ಏವಂ ಕೃತ್ವಾ ತ್ರಿಪುಂಡ್ರಂ ಚ ರುದ್ರಾಕ್ಷಾನ್ಧಾರಯೇನ್ನರಃ ।
ಸಂಪಾದ್ಯ ಚ ಸ್ವಕಂ ಕರ್ಮ ಪುನರಾರಾಧಯೇಚ್ಛಿವಂ || ೨೨ ||

ಪುನರಾಚಮನಂ ಕೃತ್ವಾ ತ್ರಿವಾರಂ ಮಂತ್ರಪೂರ್ವಕಂ ।
ಏಕಂ ವಾಥ ಪ್ರಕುರ್ಯಾಚ್ಚ ಗಂಗಾಬಿಂದುರಿತಿ ಬ್ರುವನ್ || ೨೩ ||

ಅನ್ನೋದಕಂ ತಥಾ ತತ್ರ ಶಿವಪೂಜಾರ್ಥಮಾಹರೇತ್ ।
ಅನ್ಯದ್ವಸ್ತು ಚ ಯತ್ಕಿಂಚಿದ್ಯಥಾಶಕ್ತಿ ಸಮೀಪಗಂ || ೨೪ ||

ಕೃತ್ವಾ ಸ್ಥೇಯಂ ಚ ತತ್ರೈವ ಧೈರ್ಯಮಾಸ್ಥಾಯ ವೈ ಪುನಃ ।
ಅರ್ಘಪಾತ್ರಂ ತಥಾ ಚೈಕಂ ಜಲಗಂಧಾಕ್ಷತೈರ್ಯುತಂ || ೨೫ ||

ದಕ್ಷಿಣಾಂಸೇ ತಥಾ ಸ್ಥಾಪ್ಯಮುಪಚಾರಸ್ಯ ಕ್ಲೃಪ್ತಯೇ ।
ಗುರೋಶ್ಚ ಸ್ಮರಣಂ ಕೃತ್ವಾ ತದನುಜ್ಞಾಮವಾಪ್ಯ ಚ || ೨೬ ||

೨೨. ಈರೀತಿಯಾಗಿ ತ್ರಿಪುಂಡ್ರವನ್ನು ಧರಿಸಿದಮೇಲೆ ರುದ್ರಾಕ್ಷಿಗಳನ್ನು ಧರಿಸಬೇಕು. ಬಳಿಕ ತನ್ನ ನಿತ್ಯಕರ್ಮಗಳನ್ನು ಪೂರೈಸಿಕೊಂಡು ಶಿವನನ್ನು ಪೂಜಿಸಬೇಕು.

೨೩. ಮಂತ್ರಪೂರ್ವಕವಾಗಿ ಮೂರುಸಲ ಆಚಮನವನ್ನು ಮಾಡಬೇಕು. ಅಥವಾ ಇದೇ ಗಂಗಾಜಲವೆಂದು ಉಚ್ಚರಿಸುತ್ತಾ ಒಂದು ಸಲವಾದರೂ ಆಚಮನವನ್ನು ಮಾಡಬೇಕು.

೨೪. ಹಾಗೆಯೇ ಶಿವನ ಪೂಜೆಗೆಂದು ಅನ್ನೋದಕಗಳನ್ನೂ, ತನ್ನ ಶಕ್ತಿಯಿದ್ದಷ್ಟು ಇನ್ನೂ ಇತರ ವಸ್ತುಗಳನ್ನೂ ಬಳಿಯಲ್ಲಿ ತಂದು ಇಟ್ಟುಕೊಳ್ಳಬೇಕು. ಹೀಗೆ ಅವನ್ನೆಲ್ಲಾ ಅಣಿಮಾಡಿಕೊಂಡ ಬಳಿಕ ನಿಶ್ಚಲಚಿತ್ತನಾಗಿ ತಾನೂ ಕುಳಿತುಕೊಳ್ಳಬೇಕು.

೨೫. ಅದರಂತೆಯೇ, ಗಂಧ, ಮಂತ್ರಾಕ್ಷತೆ, ನೀರು ಇವುಗಳಿಂದ ತುಂಬಿದ ಅರ್ಘ್ಯಪಾತ್ರವೊಂದನ್ನು, ಉಪಚಾರಗಳನ್ನು ನೆರವೇರಿಸಲು ತನ್ನ ಬಲತೋಳಿನ ಕಡೆ ಇಟ್ಟುಕೊಳ್ಳಬೇಕು.

೨೬-೨೭. ಗುರುವನ್ನು ನೆನೆದು. ಆತನ ಅಪ್ಪಣೆಯನ್ನು ಪಡೆದು, ತಾನು ಉದ್ದೇಶಿಸಿದ ಕಾಮನೆಯನ್ನು ಹೇಳಿ, ಎಂದರೆ ಇಂತಹ ಇಷ್ಟಪ್ರಾಪ್ತಿಗಾಗಿ ಈ

ಸಂಕಲ್ಪಂ ವಿಧಿವತ್ಕೃತ್ವಾ ಕಾಮನಾಂ ನ ನಿಯುಜ್ಯ ವೈ ।
ಪೂಜಯೇತ್ಪರಯಾ ಭಕ್ತ್ಯಾ ಶಿವಂ ಸಪರಿವಾರಕಂ ॥ ೨೭ ॥

ಮುದ್ರಾಮೇಕಾಂ ಪ್ರದರ್ಶ್ಯೈವ ಪೂಜಯೇದ್ವಿಘ್ನಹಾರಕಂ ।
ಸಿಂದುರಾದಿಪದಾರ್ಥೈಶ್ಚ ಸಿದ್ಧಿಬುದ್ಧಿಸಮನ್ವಿತಂ ॥ ೨೮ ॥

ಲಕ್ಷಲಾಭಯುತಂ ತತ್ರ ಪೂಜಯಿತ್ವಾ ನಮೇತ್ಪುನಃ ।
ಚತುರ್ಥ್ಯಂತೈರ್ನಾಮಪದೈರ್ನಮೋಂತೈಃ ಪ್ರಣವಾದಿಭಿಃ ॥ ೨೯ ॥

ಕ್ಷಮಾಪ್ಯೈನಂ ತದಾ ದೇವಂ ಭ್ರಾತ್ರಾ ಚೈವ ಸಮನ್ವಿತಂ ।
ಪೂಜಯೇತ್ಪರಯಾ ಭಕ್ತ್ಯಾ ನಮಸ್ಕುರ್ಯಾತ್ಪುನಃ ಪುನಃ ॥ ೩೦ ॥

ದ್ವಾರಪಾಲಂ ಸದಾ ದ್ವಾರಿ ತಿಷ್ಠಂತಂ ಚ ಮಹೋದರಂ ।
ಪೂಜಯಿತ್ವಾ ತತಃ ಪಶ್ಚಾತ್ಪೂಜಯೇದ್ಗಿರಿಜಾಂ ಸತೀಂ ॥ ೩೧ ॥

---

ಪೂಜೆಯನ್ನು ಮಾಡುವೆನು ಎಂಬುದಾಗಿ ಸಂಕಲ್ಪವನ್ನು ವಿಧಿವತ್ತಾಗಿ ಮಾಡಿ, ತನ್ನ ಪರಿವಾರದೊಡಗೂಡಿದ ಶಿವನನ್ನು ಅತಿಶಯವಾದ ಭಕ್ತಿಯಿಂದ ಪೂಜಿಸಬೇಕು.

೨೮. ಬಳಿಕ ಮುದ್ರೆಯೊಂದನ್ನು ಪ್ರದರ್ಶಿಸಿ ಸಿದ್ಧಿಬುದ್ಧಿಯರಿಂದ ಕೂಡಿರುವ ವಿಘ್ನನಿವಾರಕನಾದ ಮಹಾಗಣಪತಿಯನ್ನು ಚಂದ್ರ ಮೊದಲಾದ ವಸ್ತುಗಳಿಂದ ಪೂಜಿಸಬೇಕು.

೨೯. ಲಕ್ಷಲಾಭಾದಿ ದೇವತೆಗಳಿಂದ ಪರಿವೃತನಾದ ಆ ಗಣಪತಿಯನ್ನು ಪೂಜಿಸಿ, 'ಓಂ ಸುಮುಖಾಯನಮಃ' ಎಂಬೀರೀತಿಯಾಗಿ, ಮೊದಲು ಓಂಕಾರವೂ, ಕಡೆಯಲ್ಲಿ ನಮಃ ಎಂಬ ಶಬ್ದವೂ ಉಳ್ಳ ಚತುರ್ಥ್ಯಂತವಾದ ನಾಮಪದಗಳಿಂದ ನಮಸ್ಕರಿಸಬೇಕು.

೩೦. ಆಗ ತನ್ನ ಭ್ರಾತೃವಾದ ಕುಮಾರಸ್ವಾಮಿಯಿಂದೊಡಗೂಡಿದ ಆ ಮಹಾಗಣಪತಿಯನ್ನು ಅಪರಾಧಕ್ಷಮಾಪಣೆಯನ್ನು ಬೇಡಿ, ಮಿಗಿಲಾದ ಭಕ್ತಿಯಿಂದ ಪೂಜಿಸಿ, ಮತ್ತೆ ಮತ್ತೆ ನಮಸ್ಕರಿಸಬೇಕು.

೩೧. ಬಳಿಕ ಯಾವಾಗಲೂ ಬಾಗಿಲಲ್ಲಿ ಕಾಯ್ದುಕೊಂಡು ನಿಂತಿರುವ ಮಹೋದರನೆಂಬ ದ್ವಾರಪಾಲಕನನ್ನು ಪೂಜಿಸಿ, ಆಮೇಲೆ ಹಿಮವಂತನ ಮಗಳಾದ ಪಾರ್ವತಿಯನ್ನು ಪೂಜಿಸಬೇಕು.

ಚಂದನೈಃ ಕುಂಕುಮೈಶ್ಚೈವ ಧೂಪೈರ್ದೀಪೈರನೇಕಶಃ ।
ನೈವೇದ್ಯೈರ್ವಿವಿಧೈಶ್ಚೈವ ಪೂಜಯಿತ್ವಾ ತತಶ್ಶಿವಂ ॥ ೩೨ ॥

ನಮಸ್ಕೃತ್ಯ ಪುನಸ್ತತ್ರ ಗಚ್ಛೇಚ್ಚ ಶಿವಸನ್ನಿಧೌ ।
ಯದಿ ಗೇಹೇ ಪಾರ್ಥಿವೀಂ ವಾ ಹೈಮೀಂ ವಾ ರಾಜತೀಂ ತಥಾ ॥ ೩೩ ॥

ಧಾತುಜನ್ಯಾಂ ತಥೈವಾನ್ಯಾಂ ಪಾರದಾಂ ವಾ ಪ್ರಕಲ್ಪಯೇತ್ ।
ನಮಸ್ಕೃತ್ಯ ಪುನಸ್ತಾಂ ಚ ಪೂಜಯೇದ್ಭಕ್ತಿತತ್ಪರಃ ॥ ೩೪ ॥

ತಸ್ಯಾಂ ತು ಪೂಜಿತಾಯಾಂ ವೈ ಸರ್ವೇ ಸ್ಯುಃ ಪೂಜಿತಾಸ್ತಥಾ ।
ಸ್ಥಾಪಯೇಚ್ಚ ಮೃದಾ ಲಿಂಗಂ ವಿಧಾಯ ವಿಧಿಪೂರ್ವಕಂ ॥ ೩೫ ॥

ಕರ್ತವ್ಯಂ ಸರ್ವಥಾ ತತ್ರ ನಿಯಮಾತ್ಸ್ವಗೃಹೇ ಸ್ಥಿತೈಃ ।
ಪ್ರಾಣಪ್ರತಿಷ್ಠಾಂ ಕುರ್ವೀತ ಭೂತಶುದ್ಧಿಂ ವಿಧಾಯ ಚ ॥ ೩೬ ॥

---

೩೨. ಚಂದನ, ಕುಂಕುಮ ಮೊದಲಾದುವುಗಳಿಂದಲೂ, ಅನೇಕವಾದ ಧೂಪ ದೀಪಗಳಿಂದಲೂ, ನಾನಾ ವಿಧವಾದ ನೈವೇದ್ಯಗಳಿಂದಲೂ, ಆಕೆಯನ್ನು ಅರ್ಚಿಸಿ ಬಳಿಕ,

೩೩-೩೪. ಶಿವನನ್ನು ನಮಸ್ಕರಿಸಿ, ಶಿವನ ಸನ್ನಿಧಿಯನ್ನು ಸೇರಬೇಕು. ಸಾಧ್ಯವಾದರೆ, ಮನೆಯಲ್ಲಿಯೇ ಮಣ್ಣಿನಿಂದಾಗಲಿ, ಚಿನ್ನದಿಂದಾಗಲಿ, ಬೆಳ್ಳಿಯಿಂದಲಾಗಲಿ, ಧಾತುಗಳಿಂದಲಾಗಲಿ, ಪಾದರಸದಿಂದಾಗಲಿ, ಶಿವನ ಮೂರ್ತಿಯನ್ನು ಮಾಡಿ, ಕೇವಲ ಭಕ್ತಿಯುಕ್ತನಾಗಿ ಆ ಮೂರ್ತಿಗೆ ನಮಸ್ಕರಿಸಿ ಪೂಜೆಯನ್ನು ಮಾಡಬೇಕು. ಆ ಮೂರ್ತಿಯೊಂದನ್ನು ಪೂಜಿಸಲು ಎಲ್ಲರನ್ನೂ ಪೂಜಿಸಿದಂತಾಗುವುದು.

೩೫. ಮಣ್ಣಿನಿಂದ ಲಿಂಗವನ್ನು ಮಾಡಿಡಬೇಕು. ಮನೆಯಲ್ಲಿ ಇರತಕ್ಕವರು ಎಲ್ಲ ರೀತಿಯಿಂದಲೂ ನಿಯಮದಿಂದಿದ್ದುಕೊಂಡು ವಿಧಿಪೂರ್ವಕವಾಗಿ ಎಲ್ಲವನ್ನೂ ಮಾಡಬೇಕು.

೩೬. ಭೂತಶುದ್ಧಿ ಎಂಬ ವಿಧಿಯನ್ನು ಮಾಡಿದನಂತರ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು.

ದಿಕ್ಪಾಲಾನ್ಪೂಜಯೇತ್ತತ್ರ ಸ್ಥಾಪಯಿತ್ವಾ ಶಿವಾಲಯೇ ।
ಗೃಹೇ ಶಿವಸ್ಸದಾ ಪೂಜ್ಯೋ ಮೂಲಮಂತ್ರಾಭಿಯೋಗತಃ ॥ ೩೭ ॥

ತತ್ರ ತು ದ್ವಾರಪಾಲಾನಾಂ ನಿಯಮೋ ನಾಸ್ತಿ ಸರ್ವಥಾ ।
ಗೃಹೇ ಲಿಂಗಂ ಚ ಯತ್ಪೂಜ್ಯಂ ತಸ್ಮಿಂತ್ಸರ್ವಂ ಪ್ರತಿಷ್ಠಿತಂ ॥ ೩೮ ॥

ಪೂಜಾಕಾಲೇ ಚ ಸಾಂಗಂ ವೈ ಪರಿವಾರೇಣ ಸಂಯುತಂ ।
ಆವಾಹ್ಯ ಪೂಜಯೇದ್ದೇವಂ ನಿಯಮೋಽತ್ರ ನ ವಿದ್ಯತೇ ॥ ೩೯ ॥

ಶಿವಸ್ಯ ಸಂನಿಧಿಂ ಕೃತ್ವಾ ಸ್ವಾಸನಂ ಪರಿಕಲ್ಪಯೇತ್ ।
ಉದಙ್ಮುಖಸ್ತದಾ ಸ್ಥಿತ್ವಾ ಪುನರಾಚಮನಂ ಚರೇತ್ ॥ ೪೦ ॥

ಪ್ರಕ್ಷಾಲ್ಯ ಹಸ್ತೌ ಪಶ್ಚಾದ್ವೈ ಪ್ರಾಣಾಯಾಮಂ ಪ್ರಕಲ್ಪಯೇತ್ ।
ಮೂಲಮಂತ್ರೇಣ ತತ್ರೈವ ದಶಾವರ್ತಂ ನಯೇನ್ನರಃ ॥ ೪೧ ॥

---

೩೭. ಶಿವಾಲಯದಲ್ಲಿ ದಿಕ್ಪಾಲಕರನ್ನು ಸ್ಥಾಪಿಸಿ ಪೂಜಿಸಬೇಕು. ಮನೆಯಲ್ಲಿ ಶಿವನನ್ನು ಯಾವಾಗಲೂ ಮೂಲಮಂತ್ರದಿಂದ ಪೂಜಿಸಬೇಕು.

೩೮. ಮನೆಯಲ್ಲಿ ಮಾತ್ರ ಸರ್ವವಿಧದಿಂದಲೂ, ದ್ವಾರಪಾಲಕರಿರಬೇಕೆಂಬ ನಿಯಮವಿಲ್ಲ. ಮನೆಯಲ್ಲಿ ನಾವು ಯಾವ ಲಿಂಗವನ್ನು ಪೂಜಿಸುವೆವೋ ಅದರಲ್ಲೇ ಎಲ್ಲವೂ ಅಡಗಿರುವುದು.

೩೯. ಪೂಜೆಯನ್ನು ಮಾಡುವಾಗ, ಅಂಗದೇವತೆಗಳೊಡನೆಯೂ, ಪರಿವಾರ ದೇವತೆಗಳೊಡನೆಯೂ, ಆ ಶಿವನನ್ನು ಆವಾಹಿಸಿ ಪೂಜಿಸಬೇಕು. ಇದರಲ್ಲಿ ನಿಯಮ ವೇನೂ ಇಲ್ಲ.

೪೦. ಶಿವನ ಸಾನ್ನಿಧ್ಯವನ್ನು ಕಲ್ಪಿಸಿದ ಬಳಿಕ ತನ್ನ ಆಸನವನ್ನು ಏರ್ಪಡಿಸಿ ಕೊಂಡು, ಉತ್ತರಾಭಿಮುಖವಾಗಿ ಕುಳಿತುಕೊಂಡು ಮತ್ತೆ ಆಚಮನವನ್ನು ಮಾಡಬೇಕು.

೪೧. ಬಳಿಕ ಕೈಗಳನ್ನು ತೊಳೆದುಕೊಂಡು ಮೂಲಮಂತ್ರದಿಂದ ಹತ್ತು ಸಲ ಪ್ರಾಣಾಯಾಮವನ್ನು ಮಾಡಬೇಕು.

**ಪಂಚಮುದ್ರಾಃ ಪ್ರಕರ್ತವ್ಯಾಃ ಪೂಜಾವಶ್ಯಂ ಕರೇಪ್ಸಿತಾಃ ।**
**ಏತಾ ಮುದ್ರಾಃ ಪ್ರದರ್ಶ್ಯೈವ ಚರೇತ್ಪೂಜಾವಿಧಿಂ ನರಃ || ೪೨ ||**

**ದೀಪಂ ಕೃತ್ವಾ ತದಾ ತತ್ರ ನಮಸ್ಕಾರಂ ಗುರೋರಥ ।**
**ಬಧ್ವಾ ಪದ್ಮಾಸನಂ ತತ್ರ ಭದ್ರಾಸನಮಥಾಪಿ ವಾ || ೪೩ ||**

**ಉತ್ತಾನಾಸನಕಂ ಕೃತ್ವಾ ಪರ್ಯಂಕಾಸನಕಂ ತಥಾ ।**
**ಯಥಾಸುಖಂ ತಥಾ ಸ್ಥಿತ್ವಾ ಪ್ರಯೋಗಂ ಪುನರೇವ ಚ || ೪೪ ||**

**ಕೃತ್ವಾ ಪೂಜಾಂ ಪುರಾಂ ಜಾತಾಂ ವಟ್ಟಿಕೇನೈವ ತಾರಯೇತ್ ।**
**ಯದಿ ವಾ ಸ್ವಯಮೇವೇಹ ಗೃಹೇ ನ ನಿಯಮೋಽಸ್ತಿ ಚ || ೪೫ ||**

**ಪಶ್ಚಾಚ್ಚೈವಾರ್ಘಪಾತ್ರೇಣ ಕ್ಷಾಲಯೇಲ್ಲಿಂಗಮುತ್ತಮಂ ।**
**ಅನನ್ಯಮಾನಸೋ ಭೂತ್ವಾ ಪೂಜಾದ್ರವ್ಯಂ ನಿಧಾಯ ಚ || ೪೬ ||**

**ಪಶ್ಚಾಚ್ಚಾವಾಹಯೇದ್ದೇವಂ ಮಂತ್ರೇಣಾನೇನ ವೈ ನರಃ**
**ಕೈಲಾಸಶಿಖರಸ್ಥಂ ಚ ಪಾರ್ವತೀಪತಿಮುತ್ತಮಂ || ೪೭ ||**

---

೪೨. ಪೂಜೆಗೆ ಅವಶ್ಯಕವಾದ ಮತ್ತು ಈಪ್ಸಿತವಾದ ಪಂಚಮುದ್ರೆಗಳನ್ನು ಪ್ರದರ್ಶಿಸಬೇಕು. ಈ ಮುದ್ರೆಗಳನ್ನು ಹಾಕಿ ತೋರಿಸಿದ ಬಳಿಕ ಮಾನವನು ಪೂಜಾ ವಿಧಿಯನ್ನು ಆರಂಭಿಸಬೇಕು.

೪೩-೪೫. ಆಗ ಅಲ್ಲಿ ದೀಪವೊಂದನ್ನಿಟ್ಟು ಬೆಳಗಿಸಿ, ತನ್ನ ಗುರುವಿಗೆ ನಮಸ್ಕಾರವನ್ನು ಮಾಡಿ, ಬಳಿಕ ಪದ್ಮಾಸನವನ್ನೋ ಅಥವಾ ಭದ್ರಾಸನವನ್ನೋ, ಇಲ್ಲದಿದ್ದರೆ ಉತ್ತಾನಾಸನವನ್ನಾಗಲೀ, ಪರ್ಯಂಕಾಸನವನ್ನಾಗಲೀ ಹೂಡಿ ಅದರಲ್ಲಿ ಸುಖವಾಗಿ ಕುಳಿತು ಪ್ರಯೋಗಾನುಸಾರವಾಗಿ ಪೂಜಾದಿಗಳನ್ನು ಮಾಡಬೇಕು. ಮನೆಯಲ್ಲಿ ಮಾಡುವ ಪೂಜೆಗೆ ಅಷ್ಟು ನಿಯಮವಿಲ್ಲ.

೪೬. ಬಳಿಕ ಬೇರೊಂದೆಡೆ ಸುಳಿಯದಂತೆ ಮನಸ್ಸನ್ನು ಹಿಡಿದುನಿಲ್ಲಿಸಿ, ಅರ್ಘ್ಯಪಾತ್ರದಿಂದ, ಲಿಂಗವನ್ನು ತೊಳೆಯಬೇಕು. ಪೂಜಾದ್ರವ್ಯಗಳೆಲ್ಲವನ್ನೂ ಹತ್ತಿರ ಇಟ್ಟುಕೊಂಡು ಈ ಮಂತ್ರದಿಂದ ಶಿವನನ್ನು ಆವಾಹಿಸಬೇಕು.

೪೭-೫೩. ಆ ಶಿವನು ಕೈಲಾಸಶಿಖರವಾಸಿಯಾಗಿಯೂ, ಪಾರ್ವತೀದೇವಿಯ ವಲ್ಲಭನಾಗಿಯೂ. ಮಹಾಶ್ರೇಷ್ಠನಾಗಿಯೂ, ಹಿಂದೆ ವರ್ಣಿಸಿದಂತೆ ರೂಪವುಳ್ಳವನಾ

ಯಥೋಕ್ತರೂಪಿಣಂ ಶಂಭುಂ ನಿರ್ಗುಣಂ ಗುಣರೂಪಿಣಂ ।
ಪಂಚವಕ್ತ್ರಂ ದಶಭುಜಂ ತ್ರಿನೇತ್ರಂ ವೃಷಭಧ್ವಜಂ ॥ ೪೮ ॥

ಕರ್ಪೂರಗೌರಂ ದಿವ್ಯಾಂಗಂ ಚಂದ್ರಮೌಲಿಂ ಕಪರ್ದಿನಂ ।
ವ್ಯಾಘ್ರಚರ್ಮೋತ್ತರೀಯಂ ಚ ಗಜಚರ್ಮಾಂಬರಂ ಶುಭಂ ॥ ೪೯ ॥

ವಾಸುಕ್ಯಾದಿಪರೀತಾಂಗಂ ಪಿನಾಕಾದ್ಯಾಯುಧಾನ್ವಿತಂ ॥
ಸಿದ್ಧಯೋಽಷ್ಟೌ ಚ ಯಸ್ಯಾಗ್ರೇ ನೃತ್ಯಂತೀಹ ನಿರಂತರಂ ॥ ೫೦ ॥

ಜಯಜಯೇತಿ ಶಬ್ದೈಶ್ಚ ಸೇವಿತಂ ಭಕ್ತಪುಂಜಕೈಃ ।
ತೇಜಸಾ ದುಃಸಹೇನೈವ ದುರ್ಲಕ್ಷ್ಯಂ ದೇವಸೇವಿತಂ ॥ ೫೧ ॥

ಶರಣ್ಯಂ ಸರ್ವಸತ್ತ್ವಾನಾಂ ಪ್ರಸನ್ನಮುಖಪಂಕಜಂ ।
ವೇದೈಶ್ಶಾಸ್ತ್ರೈರ್ಯಥಾ ಗೀತಂ ವಿಷ್ಣುಬ್ರಹ್ಮನುತಂ ಸದಾ ॥ ೫೨ ॥

ಭಕ್ತವತ್ಸಲಮಾನಂದಂ ಶಿವಮಾವಾಹಯಾಮ್ಯಹಂ ।
ಏವಂ ಧ್ಯಾತ್ವಾ ಶಿವಂ ಸಾಂಬಮಾಸನಂ ಪರಿಕಲ್ಪಯೇತ್ ॥ ೫೩ ॥

---

ಗಿಯೂ, ನಿರ್ಗುಣವುಳ್ಳವನಾಗಿಯೂ, ಸಗುಣನಾಗಿಯೂ ಇರುವನು. ಐದು ಮುಖಗಳು, ಹತ್ತು ಬಾಹುಗಳು, ಮೂರು ಕಣ್ಣುಗಳು ಇವನಿಗಿರುವುವು. ವೃಷಭಧ್ವಜನಾದ, ಆ ಈಶ್ವರನು ಕರ್ಪೂರದಂತೆ ಶುಭ್ರವಾದ ಮೈಬಣ್ಣವುಳ್ಳವನು. ದಿವ್ಯವಾದ ಅಂಗಗಳಿಂದ ಒಪ್ಪುತ್ತಿರುವನು. ತಲೆಯಲ್ಲಿ ಚಂದ್ರಕಲೆಯನ್ನು ತಳೆದು ಜಟಾಜೂಟವನ್ನು ಧರಿಸಿ, ವ್ಯಾಘ್ರಚರ್ಮವನ್ನು ಹೊದ್ದು ಗಜಚರ್ಮವನ್ನು ಉಟ್ಟಿರುವನು. ಶುಭಕರವಾದ ವಾಸುಕಿಯಿಂದ ಸುತ್ತುವರಿಯಲ್ಪಟ್ಟ ಅವಯವಗಳುಳ್ಳವನು ಪಿನಾಕವೇ ಮೊದಲಾದ ಆಯುಧಗಳನ್ನು ಧರಿಸಿರುವನು ಮತ್ತು ಯಾವನ ಮುಂದೆ ಯಾವಾಗಲೂ ಅಷ್ಟಸಿದ್ಧಿಗಳು ನರ್ತನವನ್ನು ಮಾಡುತ್ತಿರುವರೋ ಅಲ್ಲದೆ ಭಕ್ತರು ಗುಂಪುಗುಂಪಾಗಿ ನಿಂತು, 'ಜಯ, ಜಯ' ಎಂದು ಉಚ್ಚರಿಸುತ್ತಿರುವರೋ, ಮತ್ತು ದುಸ್ಸಹವಾದ ತೇಜಸ್ಸಿನಿಂದ ಯಾವನನ್ನು ನೋಡಲೂ ಸಾಧ್ಯವಿಲ್ಲವೋ, ಅಂತಹ ದೇವಸೇವಿತನೂ, ಎಲ್ಲ ಪ್ರಾಣಿಗಳಿಗೂ ರಕ್ಷಕನೂ, ಪ್ರಸನ್ನವಾದ ಮುಖಕಮಲವುಳ್ಳವನೂ, ವೇದ ಮತ್ತು ಶಾಸ್ತ್ರಗಳಿಂದ ಸ್ತುತಿಸಲ್ಪಡುವ ಅಲ್ಲದೆ ಯಾವಾಗಲೂ, ಬ್ರಹ್ಮ ವಿಷ್ಣುಗಳಿಂದ ಸ್ತೋತ್ರಮಾಡಲ್ಪಟ್ಟವನೂ, ಭಕ್ತವತ್ಸಲನೂ, ಆನಂದಸ್ವರೂಪನೂ ಆದ ಶಿವನನ್ನು ಆವಾಹಿಸುವೆನು, ಎಂದು ಮನಸ್ಸಿನಲ್ಲಿ ಧ್ಯಾನಿಸಿ, ಆತನಿಗೆ ಆಸನವನ್ನು ಕಲ್ಪಿಸಬೇಕು.

ಚತುರ್ಥ್ಯಂತಪದೇನೈವ ಸರ್ವಂ ಕುರ್ಯಾದ್ಯಥಾಕ್ರಮಂ ।
ತತಃ ಪಾದ್ಯಂ ಪ್ರದದ್ಯಾದ್ವೈ ತತೋಽರ್ಘ್ಯಂ ಶಂಕರಸ್ಯ ಚ ॥ ೫೪ ॥

ತತಶ್ಚಾಚಮನಂ ಕೃತ್ವಾ ಶಂಭವೇ ಪರಮಾತ್ಮನೇ ।
ಪಶ್ಚಾಚ್ಚ ಪಂಚಭಿರ್ದ್ರವ್ಯೈಃ ಸ್ನಾಪಯೇಚ್ಛಂಕರಂ ಮುದಾ ॥ ೫೫ ॥

ವೇದಮಂತ್ರೈರ್ಯಥಾಯೋಗ್ಯಂ ನಾಮಭಿರ್ವಾ ಸಮಂತ್ರಕೈಃ ।
ಚತುರ್ಥ್ಯಂತಪದೈರ್ಭಕ್ತ್ಯಾ ದ್ರವ್ಯಾಣ್ಯೇವಾರ್ಪಯೇತ್ತದಾ ॥ ೫೬ ॥

ತಥಾಭಿಲಷಿತಂ ದ್ರವ್ಯಮರ್ಪಯೇಚ್ಛಂಕರೋಪರಿ ।
ತತಶ್ಚ ವಾರುಣಂ ಸ್ನಾನಂ ಕರಣೀಯಂ ಶಿವಾಯ ವೈ ॥ ೫೭ ॥

ಸುಗಂಧಂ ಚಂದನಂ ದದ್ಯಾದನ್ಯಲೇಪಾನಿ ಯತ್ನತಃ ।
ಸಸುಗಂಧಜಲೇನೈವ ಜಲಧಾರಾಂ ಪ್ರಕಲ್ಪಯೇತ್ ॥ ೫೮ ॥

೫೪. ಎಲ್ಲವನ್ನೂ ಯಥಾಕ್ರಮವಾಗಿ ಚತುರ್ಥ್ಯಂತವಾದ ನಾಮಪದವನ್ನು ಚ್ಚರಿಸಿ ಉಪಚಾರ ನಡೆಸಬೇಕು. ಬಳಿಕ ಪಾದ್ಯವನ್ನು ಇತ್ತು ಶಂಕರನಿಗೆ ಅರ್ಘ್ಯವನ್ನು ಈಯಬೇಕು.

೫೫. ಬಳಿಕ ಪರಮಾತ್ಮನಾದ ಶಂಭುವಿಗೆ ಆಚಮನವನ್ನು ಒಪ್ಪಿಸಿ ಸಂತೋಷದಿಂದ ಶಂಕರನನ್ನು ಪಂಚಾಮೃತ ದ್ರವ್ಯಗಳಿಂದ ಅಭಿಷೇಕಮಾಡಬೇಕು.

೫೬. ತನಗೆ ಉಚಿತವಾದ ವೇದಮಂತ್ರಗಳಾಗಲೀ, ಇಲ್ಲವೇ ಚತುರ್ಥ್ಯಂತವಾದ ಶಿವನ ನಾಮ ಮಂತ್ರಗಳಾಗಲೀ ಇವುಗಳಿಂದ ಭಕ್ತಿಯಿಂದ ಶಿವನಿಗೆ ದ್ರವ್ಯಗಳನ್ನು ಅರ್ಪಿಸಬೇಕು.

೫೭. ಅಂತೆಯೇ ತನಗೆ ಇಷ್ಟವಾದ ವಸ್ತುವಿನಿಂದ ಶಂಕರನ ಮೇಲೆ ಅಭಿಷೇಕವನ್ನು ಮಾಡಬೇಕು. ಬಳಿಕ ವಾರುಣ ಎಂದರೆ ಶುದ್ಧೋದಕದಿಂದ ಶಿವನಿಗೆ ಸ್ನಾನಮಾಡಿಸಬೇಕು.

೫೮. ಸುವಾಸನಾಪೂರಿತವಾದ ಚಂದನವನ್ನೂ ಮತ್ತು ಇತರ ಲೇಪಗಳನ್ನೂ ಪ್ರಯತ್ನಪೂರ್ವಕವಾಗಿ ಒಪ್ಪಿಸಿ ಸುಗಂಧ ಪೂರಿತವಾದ ನೀರು ಧಾರಾಕಾರವಾಗಿ ಬೀಳುವಂತೆ ಮಾಡಬೇಕು.

ವೇದಮಂತ್ರೈಃ ಷಡಂಗೈರ್ವಾ ನಾಮಭೀ ರುದ್ರಸಂಖ್ಯಯಾ ।
ಯಥಾವಕಾಶಂ ತಾಂ ದತ್ವಾ ವಸ್ತ್ರೇಣ ಮಾರ್ಜಯೇತ್ತತಃ ॥ ೫೯ ॥

ಪಶ್ಚಾದಾಚಮನಂ ದದ್ಯಾತ್ತತೋ ವಸ್ತ್ರಂ ಸಮರ್ಪಯೇತ್ ।
ತಿಲಾಶ್ಚೈವ ಜವಾ ವಾಪಿ ಗೋಧೂಮಾ ಮುದ್ಗಮಾಷಕಾಃ ॥ ೬೦ ॥

ಅರ್ಪಣೀಯಾಃ ಶಿವಾಯೈವಂ ಮಂತ್ರೈರ್ನಾನಾವಿಧೈರಪಿ ।
ತತಃ ಪುಷ್ಪಾಣಿ ದೇಯಾನಿ ಪಂಚಾಸ್ಯಾಯ ಮಹಾತ್ಮನೇ ॥ ೬೧ ॥

ಪ್ರತಿವಕ್ತ್ರಂ ಯಥಾಧ್ಯಾನಂ ಯಥಾಯೋಗ್ಯಾಭಿಲಾಷತಃ ।
ಕಮಲೈಶ್ಶತಪತ್ರೈಶ್ಚ ಶಂಖಪುಷ್ಪೈಃ ಪರೈಸ್ತಥಾ ॥ ೬೨ ॥

ಕುಶಪುಷ್ಪೈಶ್ಚ ಧತ್ತೂರೈರ್ಮಂದಾರೈರ್ದ್ರೋಣಸಂಭವೈಃ ।
ತಥಾ ಚ ತುಲಸೀಪತ್ರೈರ್ಬಿಲ್ವಪತ್ರೈರ್ವಿಶೇಷತಃ ॥ ೬೩ ॥

---

೫೯. ತನಗೆ ಅವಕಾಶವಿದ್ದಂತೆ, ವೇದಮಂತ್ರಗಳಿಂದಲಾಗಲಿ, ಶಿಕ್ಷಾದಿ ವೇದಾಂಗಗಳಿಂದಲಾಗಲೀ, ಅಥವಾ ನಾಮಮಂತ್ರಗಳಿಂದಾಗಲಿ, ಹನ್ನೊಂದು ಸಲ ಜಲಧಾರೆಯಿಂದ ಅಭಿಷೇಕಮಾಡಿದ ಬಳಿಕ ಬಟ್ಟೆಯಿಂದ ಒರೆಸಬೇಕು.

೬೦. ಅನಂತರ ಆಚಮನವನ್ನು ಇತ್ತು ವಸ್ತ್ರವನ್ನು ಅರ್ಪಿಸಬೇಕು. ಆಮೇಲೆ, ಎಳ್ಳು, ಜವೆಗೋಧಿ, ಗೋಧುವೆ, ಹೆಸರು, ಉದ್ದು, ಇವುಗಳನ್ನು ನಾನಾ ವಿಧವಾದ ಮಂತ್ರಗಳೊಡನೆ ಶಿವನಿಗೆ ಅರ್ಪಿಸಬೇಕು.

೬೧. ಬಳಿಕ ಸದ್ಯೋಜಾತಾದಿ ಪಂಚಮುಖಗಳುಳ್ಳ ಆ ಮಹಾತ್ಮನ ಒಂದೊಂದು ಮುಖಕ್ಕೂ, ಧ್ಯಾನಕ್ಕೆ ಅನುಸಾರವಾಗಿ, ಮತ್ತು ಆಯಾ ಅಭಿಲಾಷೆಗಳಿಗನುಗುಣವಾಗಿ ಹೂವುಗಳನ್ನು ಸಮರ್ಪಿಸಬೇಕು.

೬೨-೬೩. ನೂರು ದಳಗಳುಳ್ಳ ಕಮಲಗಳು, ಶಂಖಾಕೃತಿಯುಳ್ಳ ಹೂಗಳು, ಹಾಗೆಯೇ ಕುಶಪುಷ್ಪಗಳು ದತ್ತೂರಿಹೂವು, ಮಂದಾರ ಕುಸುಮಗಳು, ತುಲಸೀದಲಗಳು, ವಿಶೇಷವಾಗಿ ಬಿಲ್ವಪತ್ರೆ ಇವುಗಳಿಂದ ಶಿವನನ್ನು ಅರ್ಚಿಸಬೇಕು.

**ಪೂಜಯೇತ್ಪರಯಾ ಭಕ್ತ್ಯಾ ಶಂಕರಂ ಭಕ್ತವತ್ಸಲಂ ।**
**ಸರ್ವಾಭಾವೇ ಬಿಲ್ವಪತ್ರಮರ್ಪಣೀಯಂ ಶಿವಾಯ ವೈ ॥ ೬೪ ॥**

**ಬಿಲ್ವಪತ್ರಾರ್ಪಣೇನೈವ ಸರ್ವಪೂಜಾ ಪ್ರಸಿಧ್ಯತಿ ।**
**ತತಸ್ಸುಗಂಧಚೂರ್ಣಂ ವೈ ವಾಸಿತಂ ತೈಲಮುತ್ತಮಂ ॥ ೬೫ ॥**

**ಅರ್ಪಣೀಯಂ ಚ ವಿವಿಧಂ ಶಿವಾಯ ಪರಯಾ ಮುದಾ ।**
**ತತೋ ಧೂಪಃ ಪ್ರಕರ್ತವ್ಯೋ ಗುಗ್ಗುಲಾಗುರುಭಿರ್ಮುದಾ ॥ ೬೬ ॥**

**ದೀಪೋ ದೇಯಸ್ತತಸ್ತಸ್ಮೈ ಶಂಕರಾಯ ಘೃತಪ್ಲುತಃ ।**
**ಅರ್ಘ್ಯಂ ದದ್ಯಾತ್ಪುನಸ್ತಸ್ಮೈ ಮಂತ್ರೇಣಾನೇನ ಭಕ್ತಿತಃ ॥ ೬೭ ॥**

**ಕಾರಯೇದ್ಭಾವತೋ ಭಕ್ತ್ಯಾ ವಸ್ತ್ರೇಣ ಮುಖಮಾರ್ಜನಂ ।**
**ರೂಪಂ ದೇಹಿ ಯಶೋ ದೇಹಿ ಭೋಗಂ ದೇಹಿ ಚ ಶಂಕರ ॥ ೬೮ ॥**

---

೬೪. ಮೇಲೆ ಹೇಳಿದ ಹೂಗಳಿಂದ ಭಕ್ತವತ್ಸಲನಾದ ಶಂಕರನನ್ನು ಮಿಗಿಲಾದ ಭಕ್ತಿಯಿಂದ ಪೂಜಿಸಬೇಕು. ಯಾವುದೂ ಸಿಗದಿದ್ದ ಪಕ್ಷದಲ್ಲಿ ಬಿಲ್ವಪತ್ರವೊಂದರಿಂದಲೇ ಶಿವನನ್ನು ಪೂಜಿಸಬಹುದು

೬೫. ಬಿಲ್ವಪತ್ರವೊಂದನ್ನು ಒಪ್ಪಿಸಿದರೆ ಎಲ್ಲ ಪೂಜೆಯನ್ನೂ ಮಾಡಿದಂತಾಗುವುದು. ಬಳಿಕ ಸುಗಂಧ ಚೂರ್ಣವನ್ನೂ, ಸುವಾಸನೆಯುಳ್ಳ ನಾನಾ ವಿಧವಾದ ತೈಲವನ್ನೂ, ಪರಮಸಂತೋಷದಿಂದ ಶಿವನಿಗೊಪ್ಪಿಸಬೇಕು.

೬೬ ಬಳಿಕ ಸಂತೋಷವಾಗಿ ಗುಗ್ಗುಳ, ಅಗುರುಚಕ್ಕೆ ಇವುಗಳಿಂದ ಧೂಪವನ್ನು ಹೊತ್ತಿಸಬೇಕು.

೬೭-೬೮. ಬಳಿಕ ಶಂಕರನಿಗೆ ತುಪ್ಪದ ದೀಪವನ್ನು ಹಚ್ಚಬೇಕು. ಆಮೇಲೆ 'ಓ ಶಂಕರ! ಈ ಅರ್ಘ್ಯವನ್ನು ಸ್ವೀಕರಿಸಿ, ರೂಪವನ್ನೂ ಕೀರ್ತಿಯನ್ನೂ ಕೊಡು, ಭೋಗವನ್ನು ನೀಡು. ಭುಕ್ತಿಯನ್ನೂ ಮುಕ್ತಿಯನ್ನೂ ಅನುಗ್ರಹಿಸು, ನಿನಗೆ ನಮಸ್ಕಾರ' ಎಂಬ ಮಂತ್ರದಿಂದ ಭಕ್ತಿಯುಕ್ತನಾಗಿ ಆತನಿಗೆ ಅರ್ಘ್ಯವನ್ನೀಯಬೇಕು

ಭುಕ್ತಿಮುಕ್ತಿಫಲಂ ದೇಹಿ ಗೃಹೀತ್ವಾರ್ಘ್ಯಂ ನಮೋಽಸ್ತು ತೇ ।
ತತೋ ದೇಯಂ ಶಿವಾಯೈವ ನೈವೇದ್ಯಂ ವಿವಿಧಂ ಶುಭಂ ॥ ೬೯ ॥

ತತ ಆಚಮನಂ ಪ್ರೀತ್ಯಾ ಕಾರಯೇದ್ವಾ ವಿಲಂಬತಃ ।
ತತಶ್ಚೈವಾಯ ತಾಂಬೂಲಂ ಸಾಂಗೋಪಾಂಗಂ ವಿಧಾಯ ಚ ॥ ೭೦ ॥

ಕುರ್ಯಾದಾರಾರ್ತಿಕಂ ಪಂಚವರ್ತಿಕಾಮನುಸಂಖ್ಯಯಾ ।
ಪಾದಯೋಶ್ಚ ಚತುರ್ವಾರಂ ದ್ವಿಃಕೃತ್ವೋ ನಾಭಿಮಂಡಲೇ ॥ ೭೧ ॥

ಏಕಕೃತ್ವೋ ಮುಖೇ ಸಪ್ತಕೃತ್ವಃ ಸರ್ವಾಂಗ ಏವ ಹಿ ।
ತತೋ ಧ್ಯಾನಂ ಯಥೋಕ್ತಂ ವೈ ಕೃತ್ವಾ ಮಂತ್ರಮುದೀರಯೇತ್ ॥ ೭೨ ॥

ಯಥಾಸಂಖ್ಯಂ ಯಥಾಜ್ಞಾನಂ ಕುರ್ಯಾನ್ಮಂತ್ರವಿಧಿಂ ನರಃ ।
ಗುರೂಪದಿಷ್ಟಮಾರ್ಗೇಣ ಕೃತ್ವಾ ಮಂತ್ರಜಪಂ ಸುಧೀಃ ॥ ೭೩ ॥

ಗುರೂಪದಿಷ್ಟಮಾರ್ಗೇಣ ಕೃತ್ವಾ ಮಂತ್ರಮುದೀರಯೇತ್ ।
ಯಥಾಸಂಖ್ಯಂ ಯಥಾಜ್ಞಾನಂ ಕುರ್ಯಾನ್ಮಂತ್ರವಿಧಿಂನರಃ ॥ ೭೪ ॥

---

೬೯. ಆಮೇಲೆ ಭಕ್ತಿಭಾವದಿಂದ ವಸ್ತ್ರವನ್ನು ತೆಗೆದುಕೊಂಡು ಮುಖವನ್ನು ಒರೆಸಬೇಕು. ಬಳಿಕ ಆ ಶಿವನಿಗೆ ನಾನಾ ಬಗೆಯ ಶುಭಕರವಾದ ನೈವೇದ್ಯವನ್ನು ನಿವೇದಿಸಬೇಕು.

೭೦. ಬಳಿಕ ವಿಲಂಬಕ್ಕೆ ಸ್ವಲ್ಪವೂ ಅವಕಾಶಕೊಡದೆ ಪ್ರೀತಿಯಿಂದ ಆಚಮನವನ್ನಿತ್ತು, ಅನಂತರ ಬೇಕಾದ ನಾನಾ ಬಗೆಯ ಪರಿಕರಗಳಿಂದ ಕೂಡಿ ಹಿತವಾದ ತಾಂಬೂಲವನ್ನು ಒಪ್ಪಿಸಬೇಕು

೭೧-೭೨. ಬಳಿಕ ಸಂಖ್ಯಾನುಗುಣವಾಗಿ ಐದು ಬತ್ತಿಗಳುಳ್ಳ ಆರತಿಯನ್ನು ಹಚ್ಚಿಕೊಂಡು, ಕಾಲ್ಗಳಬಳಿ ನಾಲ್ಕು ಸಲವೂ ನಾಭಿಮಂಡಲದ (ಹೊಕ್ಕಳು) ಬಳಿ ಎರಡು ಬಾರಿಯೂ, ಮುಖದ ಬಳಿ ಒಂದು ಸಾರಿಯೂ, ಸರ್ವಾಂಗಗಳಲ್ಲಿಯೂ ಏಳು ಸಲವೂ, ಆ ಆರತಿಯನ್ನು ಬೆಳಗಿ ಯಥೋಕ್ತವಾದ ಧ್ಯಾನವನ್ನು ಮಾಡಿದಮೇಲೆ, ಮಂತ್ರವನ್ನು ಹೇಳಬೇಕು.

೭೩-೭೪. ವಿವೇಕಿಯಾದವನು ತಾನು ತಿಳಿದಮಟ್ಟಿಗೆ ನಿಯತವಾದ ಸಂಖ್ಯೆಗನುಗುಣವಾಗಿ, ತನಗೆ ಗುರುವು ಉಪದೇಶವಿತ್ತಂತೆ ಆ ಮಂತ್ರಜಪವನ್ನು ಮಾಡಬೇಕು.

ಸ್ತೋತ್ರೈರ್ನಾನಾವಿಧೈಃ ಪ್ರೀತ್ಯಾ ಸ್ತುವೀತ ವೃಷಭಧ್ವಜಂ ।
ತತಃ ಪ್ರದಕ್ಷಿಣಾಂ ಕುರ್ಯಾಚ್ಛಿವಸ್ಯ ಚ ಶನೈಶ್ಶನೈಃ ॥ ೭೫ ॥

ನಮಸ್ಕಾರಾಂಸ್ತತಃ ಕುರ್ಯಾತ್ಸಾಷ್ಟಾಂಗಂ ವಿಧಿವತ್ಪುಮಾನ್ ।
ತತಃ ಪುಷ್ಪಾಂಜಲಿರ್ದೇಯೋ ಮಂತ್ರೇಣಾನೇನ ಭಕ್ತಿತಃ ॥ ೭೬ ॥

ಶಂಕರಾಯ ಪರೇಶಾಯ ಶಿವಸಂತೋಷಹೇತವೇ ।
ಅಜ್ಞಾನಾದ್ಯದಿ ವಾ ಜ್ಞಾನಾದ್ಯದ್ಯತ್ಪೂಜಾದಿಕಂ ಮಯಾ ॥ ೭೭ ॥

ಕೃತಂ ತದಸ್ತು ಸಫಲಂ ಕೃಪಯಾ ತವ ಶಂಕರ ।
ತಾವಕಸ್ತ್ವದ್ಗತಪ್ರಾಣಸ್ತ್ವಚ್ಚಿತ್ತೋಽಹಂ ಸದಾ ಮೃಡ ॥ ೭೮ ॥

ಇತಿ ವಿಜ್ಞಾಯ ಗೌರೀಶ ಭೂತಾನಾಥ ಪ್ರಸೀದ ಮೇ ।
ಭೂಮೌ ಸ್ಖಲಿತಪಾದಾನಾಂ ಭೂಮಿರೇವಾವಲಂಬನಂ ॥ ೭೯ ॥

---

೭೫ ನಾನಾವಿಧವಾದ ಸ್ತೋತ್ರಗಳನ್ನು ಹೇಳುತ್ತಾ ವೃಷಭಧ್ವಜನಾದ ಶಿವನನ್ನು ಸ್ತೋತ್ರಮಾಡಬೇಕು. ಆಮೇಲೆ ಮೆಲ್ಲಗೆ ನಿಧಾನವಾಗಿ ಶಿವನಿಗೆ ಪ್ರದಕ್ಷಿಣೆಯನ್ನು ಮಾಡಬೇಕು.

೭೬. ಬಳಿಕ ವಿಧ್ಯುಕ್ತವಾಗಿ, ' ಎದೆ, ತಲೆ, ದೃಷ್ಟಿ, ಮನಸ್ಸು, ಶ್ರದ್ಧೆ, ಕಾಲು, ಕೈ, ಕಿವಿ ' ಎಂಬ ಅಷ್ಟಾಂಗಗಳಿಂದಲೂ ಕೂಡಿದ ನಮಸ್ಕಾರಗಳನ್ನು ಮಾಡಿದಮೇಲೆ ಈ ಕೆಳಗಿನ ಮಂತ್ರದಿಂದ ಭಕ್ತಿಯುಕ್ತನಾಗಿ, ಶಿವನಿಗೆ ಸಂತೋಷವಾಗಲೆಂದು ಪರಮೇಶ್ವರನಾದ ಶಂಕರನಿಗೆ ಪುಷ್ಪಾಂಜಲಿಯನ್ನೀಯಬೇಕು.

೭೭. ಓ ಶಂಕರ ! ಜ್ಞಾನಪೂರ್ವಕವಾಗಿಯೋ, ಜ್ಞಾನಪೂರ್ವಕವಲ್ಲದೆಯೋ, ನಾನು ಮಾಡಿದ ಪೂಜೆ ಮೊದಲಾದವುಗಳಲ್ಲಿ ಯಾವ ಯಾವ ಕ್ರಿಯಾಕಲಾಪವಿದೆಯೋ ಅದೆಲ್ಲವೂ ಹೋಗಿ ನಿನ್ನ ದಯೆಯಿಂದ ಪೂಜೆಯು ಸಫಲವಾಗಲಿ.

೭೮. ಎಲೈ ಕೃಪಾಳುವೇ, ನಾನು ಯಾವಾಗಲೂ ನಿನ್ನವನು, ನನ್ನ ಪ್ರಾಣಗಳೆಲ್ಲವೂ ನಿನ್ನಲ್ಲೇ ನೆಲಸಿವೆ. ಮನಸ್ಸೆಲ್ಲಾ ನಿನ್ನನ್ನೇ ನೆನಸುತ್ತಿದೆ, ಎಂದು ತಿಳಿದು ಓ ಗೌರೀಪತೀ, ಭೂತನಾಥ! ನನ್ನಲ್ಲಿ ಪ್ರಸನ್ನನಾಗು.

೭೯. ನೆಲದಮೇಲೆ ನಡೆಯುತ್ತಾ ಜಾರಿ ಬಿದ್ದುಬಿಟ್ಟವನಿಗೆ ಹೇಗೆ ನೆಲವೇ ಅವಲಂಬನವೋ ಹಾಗೆ ನಿನ್ನಲ್ಲಿ ಅಪರಾಧವೆಸಗಿದ್ದರೂ ನಮಗೆ ನೀನೇ ಗತಿಯಲ್ಲದೆ ಮತ್ತಾರೂ ಇಲ್ಲ.

ತ್ವಯಿ ಜಾತಾಪರಾಧಾನಾಂ ತ್ವಮೇವ ಶರಣಂ ಪ್ರಭೋ ।
ಇತ್ಯಾದಿ ಬಹುವಿಜ್ಞಪ್ತಿಂ ಕೃತ್ವಾ ಸಮ್ಯಗ್ವಿಧಾನತಃ ॥ ೮೦ ॥

ಪುಷ್ಪಾಂಜಲಿಂ ಸಮರ್ಪ್ಯೈವ ಪುನಃ ಕುರ್ಯಾನ್ನತಿಂ ಮುಹುಃ ।
ಸ್ವಸ್ಥಾನಂ ಗಚ್ಛ ದೇವೇಶ ಪರಿವಾರಯುತಃ ಪ್ರಭೋ ॥ ೮೧ ॥

ಪೂಜಾಕಾಲೇ ಪುನರ್ನಾಥ ತ್ವಯಾಂಗತವ್ಯಮಾದರಾತ್ ।
ಇತಿ ಸಂಪ್ರಾರ್ಥ್ಯ ಬಹುಶಶ್ಶಂಕರಂ ಭಕ್ತವತ್ಸಲಂ ॥ ೮೨ ॥

ವಿಸರ್ಜಯೇತ್ಸ್ವಹೃದಯೇ ತದಪೋ ಮೂರ್ಧ್ನಿ ವಿನ್ಯಸೇತ್ ।
ಇತಿ ಪ್ರೋಕ್ತಮಶೇಷೇಣ ಮುನಯಃ ಶಿವಪೂಜನಂ ॥
ಭುಕ್ತಿಮುಕ್ತಿಪ್ರದಂ ಚೈವ ಕಿಮನ್ಯಚ್ಛ್ರೋತುಮರ್ಹಥ ॥ ೮೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಶಿವಪೂಜಾವರ್ಣನೋ
ನಾಮ ತ್ರಯೋದಶೋಽಧ್ಯಾಯಃ

---

೮೦. ಈ ಪ್ರಕಾರ ಬಹಳ ಬಿನ್ನಹಗಳನ್ನು ಮಾಡಿಕೊಂಡು ವಿಧಿಪೂರ್ವಕವಾಗಿ ಪುಷ್ಪಾಂಜಲಿಯನ್ನು ಸಮರ್ಪಿಸಿ ಪುನಃ ಪುನಃ ನಮಸ್ಕಾರವನ್ನು ಮಾಡಬೇಕು.

೮೧. ಓ ಪ್ರಭೂ, ಓ ದೇವದೇವ, ನಿನ್ನ ಪರಿವಾರ ಸಮೇತನಾಗಿ ಈಗ ನಿನ್ನ ನಿವಾಸಕ್ಕೆ ತೆರಳುವವನಾಗು. ನಾಥ, ನಾನು ಪುನಃ ಪೂಜೆಮಾಡುವಾಗ ನನ್ನಲ್ಲಿ ಅಭಿಮಾನವಿಟ್ಟು ನೀನು ಮರಳಿ ದಯೆಮಾಡಬೇಕು.

೮೨. ಹೀಗೆ ಭಕ್ತವತ್ಸಲನಾದ ಶಂಕರನನ್ನು ಬಹುವಾಗಿ ಪ್ರಾರ್ಥಿಸಿ ಬೀಳ್ಕೊಡಬೇಕು. ಆಮೇಲೆ ಅತೀರ್ಥೋದಕವನ್ನು ತನ್ನ ಎದೆಯಮೇಲೂ ತಲೆಯಮೇಲೂ ಪ್ರೋಕ್ಷಿಸಿಕೊಳ್ಳಬೇಕು.

೮೩. ಎಲೈ ಋಷಿಗಳಿರಾ, ಈರೀತಿ ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುವಂಥ ಶಿವಪೂಜಾಕ್ರಮವನ್ನು ನಿಮಗೆ ಸಂಪೂರ್ಣವಾಗಿ ವಿವರಿಸಿರುವೆನು. ಮತ್ತೇನನ್ನು ಕೇಳಬೇಕೆಂದಿರುವಿರಿ ? ಕೇಳಿರಿ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಶಿವಪೂಜಾವರ್ಣನವೆಂಬ
ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಸೃಷ್ಟಿಖಂಡೇ
## ಚತುರ್ದಶೋಽಧ್ಯಾಯಃ

॥ ಋಷಯ ಊಚುಃ ॥

ವ್ಯಾಸಶಿಷ್ಯ ಮಹಾಭಾಗ ಕಥಯ ತ್ವಂ ಪ್ರಮಾಣತಃ ।
ಕೈಃ ಪುಷ್ಪೈಃ ಪೂಜಿತಶ್ಶಂಭುಃ ಕಿಂ ಕಿಂ ಯಚ್ಛತಿ ವೈ ಫಲಂ ॥ ೧ ॥

॥ ಸೂತ ಉವಾಚ ॥

ಶೌನಕಾದ್ಯಾಶ್ಚ ಋಷಯಃ ಶೃಣುತಾದರತೋಽಖಿಲಂ ।
ಕಥಯಾಮ್ಯದ್ಯ ಸುಪ್ರೀತ್ಯಾ ಪುಷ್ಪಾರ್ಪಣವಿನಿರ್ಣಯಂ ॥ ೨ ॥

---

## ಹದಿನಾಲ್ಕನೆಯ ಅಧ್ಯಾಯವು

೧. ಋಷಿಗಳು ಕೇಳಿದರು:—ವ್ಯಾಸಮುನಿಯ ಶಿಷ್ಯನೂ ಮಹಾಮಹಿಮನೂ ಆದ ಓ ಸೂತಮುನಿ, ಶಿವನನ್ನು ಯಾವ ಯಾವ ಹೂವುಗಳಿಂದ ಅರ್ಚಿಸಿದರೆ ಯಾವಾವ ಫಲವು ಲಭಿಸುವುದು: ಎಂಬುದನ್ನು ಹೇಳು ಎನ್ನಲು,

೨. ಸೂತಮುನಿಯು ಹೇಳಿದನು:—ಎಲೈ ಶೌನಕನೇ ಮೊದಲಾದ ಋಷಿಗಳೇ, ಶಿವನನ್ನು ಹೂವಿನಿಂದ ಅರ್ಚಿಸುವ ವಿಧಿಯನ್ನು ಹೇಳುವೆನು, ಆದರದಿಂದ ಕೇಳಿ.

ಏಷ ಏವ ವಿಧಿಃ ಪೃಷ್ಟೋ ನಾರದೇನ ಮಹರ್ಷಿಣಾ ।
ಪ್ರೋವಾಚ ಪರಮಪ್ರೀತ್ಯಾ ಪುಷ್ಪಾರ್ಪಣವಿನಿರ್ಣಯಂ ॥ ೩ ॥

॥ ಬ್ರಹ್ಮೋವಾಚ ॥

ಕಮಲೈರ್ಬಿಲ್ವಪತ್ರೈಶ್ಚ ಶತಪತ್ರೈಸ್ತಥಾ ಪುನಃ ।
ಶಂಖಪುಷ್ಪೈಸ್ತಥಾ ದೇವಂ ಲಕ್ಷ್ಮೀಕಾಮೋಽರ್ಚಯೇಚ್ಛಿವಂ ॥ ೪ ॥

ಏತೈಶ್ಚ ಲಕ್ಷಸಂಖ್ಯಾಕೈಃ ಪೂಜಿತಶ್ಚೇದ್ಭವೇಚ್ಛಿವಃ ।
ಪಾಪಹಾನಿಸ್ತಥಾ ವಿಪ್ರ ಲಕ್ಷ್ಮೀಸ್ಸ್ಯಾನ್ನಾತ್ರ ಸಂಶಯಃ ॥ ೫ ॥

ವಿಂಶತಿಃ ಕಮಲಾನಾಂ ತು ಪ್ರಸ್ಥಮೇಕಮುದಾಹೃದಂ ।
ಬಿಲ್ವೇ ದಲಸಹಸ್ರೇಣ ಪ್ರಸ್ಥಾರ್ದ್ಧಂ ಪರಿಭಾಷಿತಂ ॥ ೬ ॥

ಶತಪತ್ರಸಹಸ್ರೇಣ ಪ್ರಸ್ಥಾರ್ದ್ಧಂ ಪರಿಭಾಷಿತಂ ।
ಪಲೈಃ ಷೋಡಶಭಿಃ ಪ್ರಸ್ಥಃ ಪಲೈಃ ಟಂಕದಶ ಸ್ಮೃತಃ ॥ ೭ ॥

---

೩. ಎಲೈ ಮುನಿಗಳೆ, ಹಿಂದೆ ನಾರದನು ಬ್ರಹ್ಮನನ್ನು ಕುರಿತು ಈ ಶಿವನ ಪುಷ್ಪಾರ್ಚನೆಯ ವಿಧಿಯನ್ನೇ ಕೇಳಿದ್ದನು. ಅದನ್ನೇ ನಿಮಗೆ ಹೇಳುವೆನು.

೪. ಸಂಪತ್ತನ್ನು ಅಪೇಕ್ಷಿಸುವವನು ಕಮಲಗಳಿಂದಲೂ ಬಿಲ್ವಪತ್ರಗಳಿಂದಲೂ ಶತಪತ್ರಗಳೆಂಬ ಕಮಲವಿಶೇಷಗಳಿಂದಲೂ ಶಂಖಪುಷ್ಪಗಳಿಂದಲೂ ಶಿವನನ್ನು ಅರ್ಚಿಸಬೇಕು.

೫. ಈ ಮೇಲೆ ಹೇಳಿದ ಪತ್ರ ಮತ್ತು ಪುಷ್ಪಗಳನ್ನು ಲಕ್ಷಸಂಖ್ಯೆಯಿಂದ ಪೂಜಿಸಬೇಕು ಹಾಗೆ ಪೂಜಿಸಿದರೆ ಪಾಪಪರಿಹಾರವಾಗಿ ಸಂಪದಭಿವೃದ್ಧಿಯಾಗುವುದು. ಇದರಲ್ಲಿ ಸಂಶಯವಿಲ್ಲ.

೬-೭. ಇಪ್ಪತ್ತು ಕಮಲಗಳಿಗೆ ಒಂದು ಪ್ರಸ್ಥವೆಂದು ಹೆಸರು ಸಾವಿರ ಬಿಲ್ವಪತ್ರಗಳಿಗೆ ಅರ್ಧಪ್ರಸ್ಥವಾಗುವುದು. ಸಾವಿರ ಶತಪತ್ರಪುಷ್ಪಗಳಿಗೂ ಅರ್ಧಪ್ರಸ್ಥವು. ಹತ್ತು ಟಂಕಗಳಿಗೆ ಒಂದು ಪಲವು. ಇಂತಹ ಹದಿನಾರು ಪಲಗಳಿಗೆ ಒಂದು ಪ್ರಸ್ಥವು. ಈ ತೂಕದಂತೆ ಕಮಲ ಮೊಂತಾದುವುಗಳನ್ನು ಸಂಗ್ರಹಿಸಿ ಶಿವನನ್ನು

ಅನೇನೈವ ತು ಮಾನೇನ ತುಲಾಮಾರೋಪಯೇದ್ಯದಾ ।
ಸರ್ವಾನ್ಕಾಮಾನವಾಪ್ನೋತಿ ನಿಷ್ಕಾಮಶ್ಶಿವೋ ಭವೇತ್ ॥ ೮ ॥

ರಾಜ್ಯಸ್ಯ ಕಾಮುಕೋ ಯೋ ವೈ ಪಾರ್ಥಿವಾನಾಂ ಚ ಪೂಜಯಾ ।
ತೋಷಯೇಚ್ಛಂಕರಂ ದೇವಂ ದಶಕೋಟ್ಯಾ ಮುನೀಶ್ವರಾಃ ॥ ೯ ॥

ಲಿಂಗಂ ಶಿವಂ ತಥಾ ಪುಷ್ಪಮಖಂಡಂ ತಂದುಲಂ ತಥಾ ।
ಚರ್ಚಿತಂ ಚಂದನೇನೈವ ಜಲಧಾರಾಂ ತಥಾ ಪುನಃ ॥ ೧೦ ॥

ಪ್ರೀತಿರೂಪಂ ತಥಾ ಮಂತ್ರಂ ಬಿಲ್ವೀದಲಮನುತ್ತಮಂ ।
ಅಥವಾ ಶತಪತ್ರಂ ಚ ಕಮಲಂ ವಾ ತಥಾ ಪುನಃ ॥ ೧೧ ॥

ಶಂಖಪುಷ್ಪೈಸ್ತಥಾ ಪ್ರೋಕ್ತಂ ವಿಶೇಷೇಣ ಪುರಾತನೈಃ ।
ಸರ್ವಕಾಮಫಲಂ ದಿವ್ಯಂ ಪರತ್ರೇಹಾಪಿ ಸರ್ವಥಾ ॥ ೧೨ ॥

ಧೂಪಂ ದೀಪಂ ಚ ನೈವೇದ್ಯಮರ್ಘ್ಯಂ ಚಾರಾರ್ತಿಕಂ ತಥಾ ।
ಪ್ರದಕ್ಷಿಣಾಂ ನಮಸ್ಕಾರಂ ಕ್ಷಮಾಪನವಿಸರ್ಜನೇ ॥ ೧೩ ॥

---

ಫಲೇಚ್ಛೆಯಿಂದ ಅರ್ಚಿಸಿದರೆ ಸಕಲ ಇಷ್ಟಾರ್ಥಗಳೂ ಲಭಿಸುವುವು. ಫಲಕಾಮನೆಯಿಲ್ಲದೆ ಅರ್ಚಿಸಿದರೆ ಸಾಕ್ಷಾಚ್ಛಿವರೂಪವನ್ನೇ ಹೊಂದುವನು.

೯. ರಾಜ್ಯವನ್ನು ಪಡೆಯಬೇಕೆಂದಿರುವವನು ಹತ್ತುಕೋಟಿ ಪಾರ್ಥಿವ ಲಿಂಗಗಳನ್ನು ಅರ್ಚಿಸಿ ಮಹಾದೇವನನ್ನು ಸಂತೋಷಗೊಳಿಸಬೇಕು.

೧೦-೧೧. ಶಿವನನ್ನು ಲಿಂಗ ಅಥವಾ ಅಖಂಡವಾದ ಪುಷ್ಪ, ತಂಡುಲರಾಶಿ, ಅಥವಾ ವಿಗ್ರಹ ಇವುಗಳಲ್ಲಿ ಮಂತ್ರಪೂರ್ವಕವಾಗಿ ಆವಾಹನೆ ಮಾಡಿ ಗಂಧೋದಕ ಸ್ನಾನ ಬಿಲ್ವಾರ್ಚನೆ, ಶತಪತ್ರಪೂಜೆ, ಕಮಲಾರ್ಚನೆ ಇವುಗಳಿಂದ ಅರ್ಚಿಸಬೇಕು.

೧೨. ಅಲ್ಲದೆ, ಶಂಖಪುಷ್ಪಗಳು ಶಿವಪೂಜೆಗೆ ತುಂಬಾ ಪ್ರಶಸ್ತವಾದುವುಗಳು ಅವುಗಳನ್ನರ್ಪಿಸಿದರೆ ಇಹಪರಗಳೆರಡರಲ್ಲೂ ಇಷ್ಟಸಿದ್ಧಿಯಾಗುವುದು, ಎಂದು ಹಿಂದಿನ ಋಷಿಗಳು ಹೇಳಿರುವರು.

೧೩-೧೪. ಪುಷ್ಪಾರ್ಚನೆ ಮಾಡಿದಮೇಲೆ ಧೂಪ ದೀಪ ನೈವೇದ್ಯ, ಅರ್ಘ್ಯ, ಮಂಗಳಾರತಿ ಪ್ರದಕ್ಷಿಣೆ ನಮಸ್ಕಾರ ಕ್ಷಮಾಪಣೆ ಮತ್ತು ವಿಸರ್ಜನೆ ಇವುಗಳನ್ನು

ಕೃತ್ವಾ ಸಾಂಗಂ ತಥಾ ಭೋಜ್ಯಂ ಕೃತಂ ಯೇನ ಭವೇದಿಹ ।
ತಸ್ಯ ವಾ ಸರ್ವಥಾ ರಾಜ್ಯಂ ಶಂಕರಃ ಪ್ರದದಾತಿ ಚ ॥ ೧೪ ॥

ಪ್ರಧಾನ್ಯಕಾಮುಕೋ ಯೋ ವೈ ತದರ್ಧೇನಾರ್ಚಯೇತ್ಪುಮಾನ್ ।
ಕಾರಾಗೃಹಗತೋ ಯೋ ವೈ ಲಕ್ಷೇಣೈವಾರ್ಚಯೇದ್ಧರಂ ॥ ೧೫ ॥

ರೋಗಗ್ರಸ್ತೋ ಯದಾ ಸ್ಯಾದ್ವೈ ತದರ್ಧೇನಾರ್ಚಯೇಚ್ಛಿವಂ ।
ಕನ್ಯಾಕಾಮೋ ಭವೇದ್ಯೋ ವೈ ತದರ್ಧೇನ ಶಿವಂ ಪುನಃ ॥ ೧೬ ॥

ವಿದ್ಯಾಕಾಮಸ್ತಥಾ ಯಃ ಸ್ಯಾತ್ತದರ್ಧೇನಾರ್ಚಯೇಚ್ಛಿವಂ ।
ವಾಣೀಕಾಮೋ ಭವೇದ್ಯೋ ವೈ ಘೃತೇನೈವಾರ್ಚಯೇಚ್ಛಿವಂ ॥ ೧೭ ॥

ಉಚ್ಚಾಟನಾರ್ಥಂ ಶತ್ರೂಣಾಂ ತನ್ಮಿತೇನವ ಪೂಜನಂ ।
ಮಾರಣೇ ವೈ ತು ಲಕ್ಷೇಣ ಮೋಹನೇ ತು ತದರ್ಧತಃ ॥ ೧೮ ॥

---

ಮಾಡಿ, ಸಾಂಗವಾಗಿ ಶಿವನನ್ನು ಪೂಜಿಸಿ, ಕೊನೆಯಲ್ಲಿ ಸದ್ಭಕ್ತರಿಗೆ ಮೃಷ್ಟಾನ್ನ ಭೋಜನಮಾಡಿಸಬೇಕು. ಹಾಗೆ ಮಾಡಿದರೆ ಶಂಕರನು ರಾಜ್ಯವನ್ನು ಕೊಡುವನು ಇದರಲ್ಲಿ ಸಂಶಯವಿಲ್ಲ.

೧೫. ಗೌರವಪ್ರತಿಷ್ಠಾದಿಗಳನ್ನು ಅಪೇಕ್ಷಿಸುವವನು ಐವತ್ತುಲಕ್ಷ ಶಂಖಪುಷ್ಪಗಳಿಂದ ಶಿವನನ್ನು ಅರ್ಚಿಸಬೇಕು. ಬಂಧನದಲ್ಲಿರುವವನು ಕಾರಾಗೃಹನಿವೃತ್ತಿಗಾಗಿ ಲಕ್ಷ ಹೂವುಗಳಿಂದ ಶಿವನನ್ನು ಅರ್ಚಿಸಬೇಕು.

೧೬-೧೭. ರೋಗದಿಂದ ನರಳುತ್ತಿರುವವನು ಐವತ್ತುಸಾವಿರ ಪುಷ್ಪಗಳಿಂದ ಶಿವನನ್ನು ಅರ್ಚಿಸಬೇಕು. ಕನ್ಯೆಯನ್ನಪೇಕ್ಷಿಸುವವನು ಇಪ್ಪತ್ತೈದುಸಾವಿರ ಪುಷ್ಪಗಳಿಂದಲೂ, ವಿದ್ಯೆಯನ್ನಪೇಕ್ಷಿಸುವವನು ಹದಿಮೂರುಸಾವಿರ ಪುಷ್ಪಗಳಿಂದಲೂ, ಭಾಷಣಾಶಕ್ತಿಯನ್ನಪೇಕ್ಷಿಸುವವನು ತುಪ್ಪದಿಂದಲೂ ಶಿವನನ್ನು ಅರ್ಚಿಸಬೇಕು.

೧೮-೨೦. ಶತ್ರುಗಳನ್ನು ಓಡಿಸಲೋಸುಗ ಹದಿಮೂರುಸಾವಿರ ಪುಷ್ಪಗಳಿಂದ ಅರ್ಚಿಸಬೇಕು. ಶತ್ರುನಾಶಕ್ಕಾಗಿ ಲಕ್ಷ ಪುಷ್ಪಪೂಜೆಯನ್ನೂ, ಮೋಹಗೊಳಿಸುವುದಕ್ಕಾಗಿ ಅರ್ಧಲಕ್ಷ ಪೂಜೆಯನ್ನೂ ಸಾಮಂತರಾಜರನ್ನು ಜಯಿಸಲು ಕೋಟಿಪುಷ್ಪ

ಸಾಮಂತಾನಾಂ ಜಯೇ ಚೈವ ಕೋಟಿಪೂಜಾ ಪ್ರಶಸ್ಯತೇ ।
ರಾಜ್ಞಾಮಯುತಸಂಖ್ಯಂ ಚ ವಶೀಕರಣಕರ್ಮಣಿ ॥ ೧೯ ॥

ಯಶಸೇ ಚ ತಥಾ ಸಂಖ್ಯಾ ವಾಹನಾದ್ಯೈಃ ಸಹಸ್ರಿಕಾ ।
ಮುಕ್ತಿಕಾಮೋಽರ್ಚಯೇಚ್ಛಂಭುಂ ಪಂಚಕೋಟ್ಯಾ ಸುಭಕ್ತಿತಃ ॥ ೨೦ ॥

ಜ್ಞಾನಾರ್ಥೀ ಪೂಜಯೇತ್ಕೋಟ್ಯಾ ಶಂಕರಂ ಲೋಕಶಂಕರಂ ।
ಶಿವದರ್ಶನಕಾಮೋ ವೈ ತದರ್ಧೇನ ಪ್ರಪೂಜಯೇತ್ ॥ ೨೧ ॥

ತಥಾ ಮೃತ್ಯುಂಜಯೋ ಜಾಪ್ಯಃ ಕಾಮನಾಫಲರೂಪತಃ ।
ಪಂಚಲಕ್ಷಾ ಜಪಾ ಯರ್ಹಿ ಪ್ರತ್ಯಕ್ಷಂ ತು ಭವೇಚ್ಛಿವಃ ॥ ೨೨ ॥

ಲಕ್ಷೇಣ ಭಜತೇ ಕಶ್ಚಿದ್ದ್ವಿತೀಯೇ ಜಾತಿಸಂಭವಃ ।
ತೃತೀಯೇ ಕಾಮನಾಲಾಭಶ್ಚತುರ್ಥೇ ತಂ ಪ್ರಪಶ್ಯತಿ ॥ ೨೩ ॥

---

ಪೂಜೆಗಳನ್ನೂ ಮಾಡಬೇಕು. ರಾಜರನ್ನು ವಶಮಾಡಿಕೊಳ್ಳಲು ಹತ್ತುಸಾವಿರ ಪುಷ್ಪಪೂಜೆಗಳಿಂದಲೂ, ವಾಹನ ಮತ್ತು ಯಶಸ್ಸು ಮುಂತಾದುವುಗಳನ್ನು ಪಡೆಯಲು ಸಾವಿರ ಪೂಜೆಗಳಿಂದಲೂ ಶಿವನನ್ನರ್ಚಿಸಬೇಕು ಮುಕ್ತಿಯನ್ನಪೇಕ್ಷಿಸುವವನು ಭಕ್ತಿಯಿಂದ ಐದುಕೋಟಿ ಪುಷ್ಪಾರ್ಚನೆಗಳನ್ನು ಮಾಡಬೇಕು.

೨೧. ಜ್ಞಾನವನ್ನಪೇಕ್ಷಿಸುವವನು ಕೋಟಿ ಪುಷ್ಪಗಳಿಂದ ಶಿವನನ್ನು ಅರ್ಚಿಸಬೇಕು. ಶಿವನ ದರ್ಶನವನ್ನಪೇಕ್ಷಿಸುವವನು ಅರ್ಧಕೋಟಿ ಪುಷ್ಪಾರ್ಚನೆಗಳಿಂದ ಸುಖದಾಯಕನಾದ ಶಿವನನ್ನು ಆರಾಧಿಸಬೇಕು.

೨೨. ಮೃತ್ಯುಂಜಯಮಂತ್ರವನ್ನು ಐದುಲಕ್ಷ ಬಾರಿ ಜಪಿಸಿದರೆ ಶಿವನು ಪ್ರತ್ಯಕ್ಷನಾಗುವನು.

೨೩-೨೪. ಆ ಮೃತ್ಯುಂಜಯ ಮಂತ್ರವನ್ನು ಒಂದು ಲಕ್ಷಬಾರಿ ಜಪಿಸಿದರೆ ಸಕಲ ಇಷ್ಟ-ಸಿದ್ಧಿಯಾಗುವುದು. ಎರಡನೆಯ ಲಕ್ಷವನ್ನು ಜಪಿಸಿದರೆ ಉತ್ತಮ ಜಾತಿಯು ಲಭಿಸುವುದು. ಮೂರನೆಯ ಲಕ್ಷವನ್ನು ಜಪಿಸಿದರೆ ಅಲಭ್ಯವಾದ ವಸ್ತುಗಳೂ ಸಿದ್ಧಿಸುವುವು. ನಾಲ್ಕನೆಯ ಬಾರಿ ಲಕ್ಷವನ್ನು ಜಪಿಸಿದರೆ ಶಿವನ ಸಾಕ್ಷಾತ್ಕಾರ

ಪಂಚಮುಂ ಚ ಯದಾ ಲಕ್ಷಂ ಫಲಂ ಯಚ್ಛತ್ಯಸಂಶಯಂ ।
ಅನೇನೈವ ತು ಮಂತ್ರೇಣ ದಶಲಕ್ಷೇ ಫಲಂ ಭವೇತ್ ॥ ೨೪ ॥

ಮುಕ್ತಿಕಾಮೋ ಭವೇದ್ಯೋ ವೈ ದರ್ಭೈಶ್ಚ ಪೂಜನಂ ಚರೇತ್ ।
ಲಕ್ಷಸಂಖ್ಯಾ ತು ಸರ್ವತ್ರ ಜ್ಞಾತವ್ಯಾ ಋಷಿಸತ್ತಮ ॥ ೨೫ ॥

ಆಯುಃಕಾಮೋ ಭವೇದ್ಯೋ ವೈ ದೂರ್ವಾಭಿಃ ಪೂಜನಂ ಚರೇತ್ ।
ಪುತ್ರಕಾಮೋ ಭವೇದ್ಯೋ ವೈ ಧತ್ತೂರಕುಸುಮೈಶ್ಚರೇತ್ ॥ ೨೬ ॥

ರಕ್ತದಂಡಶ್ಚ ಧತ್ತೂರಃ ಪೂಜನೇ ಶುಭದಃ ಸ್ಮೃತಃ ।
ಅಗಸ್ತ್ಯಕುಸುಮೈಶ್ಚೈವ ಪೂಜಕಸ್ಯ ಮಹದ್ಯಶಃ ॥ ೨೭ ॥

ಭುಕ್ತಿಮುಕ್ತಿಫಲಂ ತಸ್ಯ ತುಲಸ್ಯಾ ಪೂಜಯೇದ್ಯದಿ ।
ಅರ್ಕಪುಷ್ಪೈಃ ಪ್ರತಾಪಶ್ಚ ಕುಬ್ಜಕಲ್ಹಾರಕೈಸ್ತಥಾ ॥ ೨೮ ॥

---

ವಾಗುವುದು. ಐದು ಲಕ್ಷಬಾರಿ ಮೃತ್ಯುಂಜಯ ಜಪವನ್ನು ಜಪಿಸಿದರೆ ಶಿವನು ಬೇಕಾದ ಫಲವನ್ನು ಕೊಡುವನು. ಹತ್ತುಲಕ್ಷಪರ್ಯಂತ ಜಪಿಸಿದರೆ ಇದಕ್ಕೂ ಹೆಚ್ಚಾದ ಫಲವು ಲಭಿಸುವುದು.

೨೫. ಮುಕ್ತಿಯನ್ನಪೇಕ್ಷಿಸುವವನು ದರ್ಭೆಗಳಿಂದ ಶಿವನನ್ನು ಅರ್ಚಿಸ ಬೇಕು. ಎಲೈ ನಾರದ, ಇನ್ನು ಮುಂದೆ ಹೇಳುವ ಪ್ರತಿಯೊಂದು ವಸ್ತುವನ್ನೂ ಲಕ್ಷ ಸಂಖ್ಯೆಯಿಂದ ಪೂಜಿಸಬೇಕು.

೨೬-೨೮. ಆಯುಸ್ಸನ್ನು ಅಪೇಕ್ಷಿಸುವವನು ದೂರ್ವೆಗಳಿಂದ ಶಿವನನ್ನು ಪೂಜಿಸಬೇಕು. ಪುತ್ರರನ್ನಪೇಕ್ಷಿಸುವವನು ಧತ್ತೂರ ಪುಷ್ಪಗಳಿಂದ ಅರ್ಚಿಸಬೇಕು. ಕೆಂಪು ನಾಳವುಳ್ಳ ಧತ್ತೂರ ಪುಷ್ಪವು ಶಿವಪೂಜೆಗೆ ಪ್ರಶಸ್ತವಾದುದು, ಅಗಸ್ತ್ಯ ಕುಸುಮದಿಂದರ್ಚಿಸಿದರೆ ಯಶಸ್ಸು ಲಭಿಸುವುದು. ತುಲಸಿಯಿಂದ ಪೂಜಿಸಿದರೆ ಭೋಗಮುಕ್ತಿಗಳೆರಡೂ ಲಭಿಸುವುವು. ಅರ್ಕಪುಷ್ಪ (ಎಕ್ಕದ ಹೂ) ಕುಬ್ಜಪುಷ್ಪ ಕಲ್ಹಾರಪುಷ್ಪ ಇವುಗಳಿಂದ ಶಿವನನ್ನರ್ಚಿಸಿದರೆ ಪರಾಕ್ರಮವು ಹೆಚ್ಚಾಗುವುದು.

ಜಪಾಕುಸುಮಪೂಜಾ ತು ಶತ್ರೂಣಾಂ ಮೃತ್ಯುದಾ ಸ್ಮೃತಾ ।
ರೋಗೋಚ್ಚಾಟನಕಾನೀಹ ಕರವೀರಾಣಿ ವೈ ಕ್ರಮಾತ್ ॥ ೨೯ ॥

ಬಂಧುಕೈರ್ಭೂಷಣಾವಾಪ್ತಿರ್ಜಾತ್ಯಾ ವಾಹಾನ್ನ ಸಂಶಯಃ ।
ಅತಸೀಪುಷ್ಪಕೈರ್ದೇವಂ ವಿಷ್ಣುವಲ್ಲಭತಾಮಿಯಾತ್ ॥ ೩೦ ॥

ಶಮೀಪತ್ರೈಸ್ತಥಾ ಮುಕ್ತಿಃ ಪ್ರಾಪ್ಯತೇ ಪುರುಷೇಣ ಚ ।
ಮಲ್ಲಿಕಾಕುಸುಮೈರ್ದತ್ತೈಃ ಸ್ತ್ರಿಯಂ ಶುಭತರಾಂ ಶಿವಃ ॥ ೩೧ ॥

ಯೂಥಿಕಾಕುಸುಮೈಶ್ಶಸ್ಯೈರ್ಗೃಹಂ ನೈವ ವಿಮುಚ್ಯತೇ ।
ಕರ್ಣಿಕಾರೈಸ್ತಥಾ ವಸ್ತ್ರಸಂಪತ್ತಿರ್ಜಾಯತೇ ನೃಣಾಂ ॥ ೩೨ ॥

ನಿರ್ಗುಂಡೀಕುಸುಮೈರ್ಲೋಕೇ ಮನೋ ನಿರ್ಮಲತಾಂ ವ್ರಜೇತ್ ।
ಬಿಲ್ವಪತ್ರೈಸ್ತಥಾ ಲಕ್ಷೈಃ ಸರ್ವಾನ್ಕಾಮಾನವಾಪ್ನುಯಾತ್ ॥ ೩೩ ॥

ಶೃಂಗಾರಹಾರಪುಷ್ಪೈಶ್ಚ ವರ್ಧತೇ ಸುಖಸಂಪದಾ ।
ಋತುಜಾತಾನಿ ಪುಷ್ಪಾಣಿ ಮುಕ್ತಿದಾನಿ ನ ಸಂಶಯಃ ॥ ೩೪ ॥

---

೨೯. ಜಪಾಕುಸುಮ, ಕರವೀರ ಪುಷ್ಪಗಳಿಂದ ಶಿವನನ್ನರ್ಚಿಸಿದರೆ ಶತ್ರುಗಳು ನಾಶವಾಗುವರು. ರೋಗಪರಿಹಾರವಾಗುವುದು.

೩೦-೩೨. ಅಗಸೇ ಹೂವಿನಿಂದ ಶಿವನನ್ನರ್ಚಿಸಿದರೆ ವಿಷ್ಣುಪ್ರಿಯನಾಗುವನು. ಶಮೀ ಪತ್ರಗಳಿಂದ ಅರ್ಚಿಸಿದರೆ ಮುಕ್ತಿಯು ಲಭಿಸುವುದು. ದಾಸವಾಳ ಹೂವಿನಿಂದ ಅರ್ಚಿಸಿದರೆ ಅಲಂಕಾರವು ಲಭಿಸುವುದು. ಜಾಜೀ ಪುಷ್ಪದಿಂದ ಉತ್ತಮವಾದ ವಾಹನಗಳು ಲಭಿಸುವುವು. ಮಲ್ಲಿಗೆ ಹೂವಿನಿಂದ ಅರ್ಚಿಸಿದರೆ ಉತ್ತಮ ಸ್ತ್ರೀಯು ಲಭಿಸುವಳು. ಯೂಥಿಕಾ ಕುಸುಮದಿಂದ ಅರ್ಚಿಸಿದರೆ ಸ್ಥಿರವಾದ ಗಾರ್ಹಸ್ಥ್ಯವು ಲಭಿಸುವುದು. ಕರ್ಣಿಕಾರ ಕುಸುಮಗಳಿಂದ ಶಿವನನ್ನರ್ಚಿಸಿದರೆ ಉತ್ತಮವಾದ ವಸ್ತ್ರಗಳು ಲಭಿಸುವುವು.

೩೩-೩೪. ನಿರ್ಗುಂಡೀ ಕುಸುಮಗಳಿಂದ ಶಿವನನ್ನು ಅರ್ಚಿಸಿದರೆ ಮನಶ್ಶುದ್ಧಿಯಾಗುವುದು. ಲಕ್ಷ ಬಿಲ್ವಪತ್ರಗಳಿಂದ ಅರ್ಚಿಸಿದರೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು. ಅಲಂಕಾರವಾದ ಪುಷ್ಪಹಾರಗಳನ್ನು ಶಿವನಿಗೆ ಅರ್ಪಿಸಿದರೆ ಹೆಚ್ಚಾದ ಸುಖವು

ರಾಜಿಕಾಕುಸುಮಾನೀಹ ಶತ್ರೂಣಾಂ ಮೃತ್ಯುದಾನಿ ಚ ।
ಏಷಾಂ ಲಕ್ಷಂ ಶಿವೇ ದದ್ಯಾದ್ದದ್ಯಾಚ್ಚ ವಿಪುಲಂ ಫಲಂ ॥ ೩೫ ॥

ವಿದ್ಯತೇ ಕುಸುಮಂ ತನ್ನ ಯನ್ನೈವ ಶಿವವಲ್ಲಭಂ ।
ಚಂಪಕಂ ಕೇತಕಂ ಹಿತ್ವಾ ತ್ವನ್ಯತ್ಸರ್ವಂ ಸಮರ್ಪಯೇತ್ ॥ ೩೬ ॥

ಅತಃಪರಂ ಚ ಧಾನ್ಯಾನಾಂ ಪೂಜನೇ ಶಂಕರಸ್ಯ ಚ ।
ಪ್ರಮಾಣಂ ಚ ಫಲಂ ಸರ್ವಂ ಪ್ರೀತ್ಯಾ ಶೃಣು ಚ ಸತ್ತಮ ॥ ೩೭ ॥

ತಂದುಲಾರೋಪಣೇ ನೃಣಾಂ ಲಕ್ಷ್ಮೀವೃದ್ಧಿಃ ಪ್ರಜಾಯತೇ ।
ಅಖಂಡಿತವಿಧೌ ವಿಪ್ರ ಸಮ್ಯಗ್ಭಕ್ತ್ಯಾ ಶಿವೋಪರಿ ॥ ೩೮ ॥

ಷಟ್ಕೇನೈವ ತು ಪ್ರಸ್ಥಾನಾಂ ತದರ್ಧೇನ ತಥಾ ಪುನಃ ।
ಪಲದ್ವಯಂ ತಥಾ ಲಕ್ಷಮಾನೇನ ಸಮುದಾಹೃತಂ ॥ ೩೯ ॥

---

ಲಭಿಸುವುದು. ಆಯಾಯ ಋತುಗಳಲ್ಲಿ ಜನಿಸುವ ಪುಷ್ಪಗಳಿಂದ ಆಯಾಯ ಋತುಗಳಲ್ಲಿ ಶಿವನನ್ನರ್ಚಿಸಿದರೆ ಮುಕ್ತಿಯು ಲಭಿಸುವುದು. ಕಮಲ ಪುಷ್ಪಗಳಿಂದ ಶಿವನನ್ನರ್ಚಿಸಿದರೆ ಶತ್ರುನಾಶವಾಗುವುದು. ಈ ಮೇಲೆ ಹೇಳಿದ ಕುಸುಮಗಳಿಂದ ಲಕ್ಷ ಬಾರಿ ಅರ್ಚಿಸಿದರೆ ಅಪರಮಿತವಾದ ಫಲವು ಲಭಿಸುವುದು.

೩೬. ಕೆಂಡಸಂಪಿಗೆ, ಕೆಂದಗೆ (ತಾಳೆ) ಹೂವುಗಳನ್ನು ಹೊರತು ಮಿಕ್ಕ ಎಲ್ಲಾ ಹೂವುಗಳೂ ಶಿವನಿಗೆ ಪ್ರಿಯವಾದುವು. ಪ್ರಿಯವಲ್ಲದುದು ಯಾವುದೂ ಇಲ್ಲ. ಮಿಕ್ಕ ಎಲ್ಲಾ ಹೂವುಗಳಿಂದಲೂ ಶಿವನನ್ನರ್ಚಿಸಬಹುದು.

೩೭. ಎಲೈ ನಾರದನೇ, ಈಗ ಶಂಕರನ ಪೂಜೆಯಲ್ಲಿ ಯಾವ ಯಾವ ಧಾನ್ಯಗಳು ಪ್ರಶಸ್ತವಾಗಿರುವುವು? ಎಂತೆಂತಹ ಫಲಗಳನ್ನರ್ಪಿಸಬೇಕು? ಅವುಗಳ ಪರಿಮಾಣವೆಷ್ಟು? ಇವೆಲ್ಲವನ್ನೂ ಹೇಳುವೆನು, ಭಕ್ತಿಯಿಂದ ಕೇಳು.

೩೮. ಶಿವನ ಮೇಲೆ ಭಕ್ತಿಯಿಂದ ಅಕ್ಷತವಾದ ತಂಡುಲ (ಅಕ್ಕಿ) ವನ್ನು ಅರ್ಪಿಸಿದರೆ ಸಂಪತ್ತು ಅಭಿವೃದ್ಧಿಯಾಗುವುದು.

೩೯. ಆರು ಪ್ರಸ್ಥ (ಬಳ್ಳ) ತಂಡುಲವನ್ನಾಗಲೀ ಎರಡು ಲಕ್ಷ ಪಲತಂಡುಲವನ್ನಾಗಲೀ ಶಿವನಮೇಲೆ ಅರ್ಪಿಸಬೇಕು.

ಪೂಜಾಂ ರುದ್ರಪ್ರಧಾನೇನ ಕೃತ್ವಾ ವಸ್ತ್ರಂ ಸುಸುಂದರಂ ।
ಶಿವೋಪರಿ ನ್ಯಸೇತ್ತತ್ರ ತಂದುಲಾರ್ಪಣಮುತ್ತಮಂ ॥ ೪೦ ॥

ಉಪರಿ ಶ್ರೀಫಲಂ ತ್ವೇಕಂ ಗಂಧಪುಷ್ಪಾದಿಭಿಸ್ತಥಾ ।
ರೋಪಯಿತ್ವಾ ಚ ಧೂಪಾದಿ ಕೃತ್ವಾ ಪೂಜಾಫಲಂ ಭವೇತ್ ॥ ೪೧ ॥

ಪ್ರಾಜಾಪತ್ಯದ್ವಯಂ ರೌಪ್ಯಮಾಷಸಂಖ್ಯಾ ಚ ದಕ್ಷಿಣಾ ।
ದೇಯಾ ತದುಪದೇಷ್ಟ್ರೇ ಹಿ ಶಕ್ತ್ಯಾ ವಾ ದಕ್ಷಿಣಾ ಮತಾ ॥ ೪೨ ॥

ಆದಿತ್ಯಸಂಖ್ಯಯಾ ತತ್ರ ಬ್ರಾಹ್ಮಣಾನ್ಭೋಜಯೇತ್ತತಃ ।
ಲಕ್ಷಪೂಜಾ ತಥಾ ಜಾತಾ ಸಾಂಗಂ ಚ ಮಂತ್ರಪೂರ್ವಕಂ ॥ ೪೩ ॥

ಶತಮಷ್ಟೋತ್ತರಂ ತತ್ರ ಮಂತ್ರೇ ವಿಧಿರುದಾಹೃತಃ ।
ತಿಲಾನಾಂ ಚ ಪಲಂ ಲಕ್ಷಂ ಮಹಾಪಾತಕನಾಶನಂ ॥ ೪೪ ॥

ಏಕಾದಶಪಲ್ಯೈರೇವ ಲಕ್ಷಮಾನಮುದಾಹೃತಂ ।
ಪೂರ್ವವತ್ಪೂಜನಂ ತತ್ರ ಕರ್ತವ್ಯಂ ಹಿತಕಾಮ್ಯಯಾ ॥ ೪೫ ॥

೪೦. ಲಿಂಗದಲ್ಲಿ ಪ್ರಧಾನವಾಗಿ ರುದ್ರನನ್ನರ್ಚಿಸಿ ಸುಂದರವಾದ ವಸ್ತ್ರವನ್ನಲಂಕರಿಸಿ ಅಲ್ಲಿ ಶಿವನಿಗೆ ಆ ಅಕ್ಷತ ತಂಡುಲಗಳನ್ನು ಅರ್ಪಿಸಬೇಕು.

೪೧. ಆ ತಂಡುಲದ ಮೇಲೆ ಬಿಲ್ವಫಲವನ್ನು ಇರಿಸಿ ಗಂಧ ಪುಷ್ಪ ಧೂಪ ಮುಂತಾದುವುಗಳಿಂದ ಪೂಜಿಸಿದರೆ ಇಷ್ಟಸಿದ್ಧಿಯಾಗುವುದು.

೪೨. ಎರಡು ಪ್ರಾಜಾಪತ್ಯ ಅಂದರೆ ಹದಿನೆಂಟು ಮಾಷಪ್ರಮಾಣ (ಮಾಷವೆಂದರೆ ಎರಡು ಗುಲಗಂಜಿ ತೂಕ) ಬೆಳ್ಳಿಯನ್ನು ದಕ್ಷಿಣೆಯಾಗಿ ಪೂಜೆಯನ್ನುಪದೇಶಿಸಿದ ಗುರುವಿಗೆ ಕೊಡಬೇಕು ಅಥವಾ ತನ್ನ ಶಕ್ತಿಗನುಸಾರವಾಗಿ ದಕ್ಷಿಣೆಯನ್ನು ಕೊಡಬೇಕು.

೪೩. ಹನ್ನೆರಡು ಜನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಹೀಗೆ ಒಂದು ಲಕ್ಷದ ನೂರೆಂಟು ಪೂಜೆಗಳನ್ನು ವಿಧಿವತ್ತಾಗಿ ಮಾಡಬೇಕು. ಅದರಿಂದ ಸಕಲ ಇಷ್ಟಸಿದ್ಧಿಯೂ ಆಗುವುದು.

೪೪-೪೫. ಒಂದು ಲಕ್ಷ ಪಲ ಎಳ್ಳನ್ನು ಶಿವನಿಗೆ ಅರ್ಪಿಸಿದರೆ ಮಹಾಪಾಪಗಳು ನಾಶವಾಗುವುವು. ಹನ್ನೊಂದು ಪಲ ಎಳ್ಳನ್ನರ್ಪಿಸಿದರೇ ಲಕ್ಷ ಪಲಗಳನ್ನು ಅರ್ಪಿಸಿದಂತಾಗುವುದು. ಪೂಜೆಯನ್ನು ಮೊದಲಿನಂತೆಯೇ ಎಲ್ಲವನ್ನೂ ಮಾಡಬೇಕು.

ಭೋಜ್ಯಾ ವೈ ಬ್ರಾಹ್ಮಣಾಸ್ತಸ್ಮಾದತ್ರ ಕಾರ್ಯಾ ನರೇಣ ಹಿ ।
ಮಹಾಪಾತಕಜಂ ದುಃಖಂ ತತ್ಕ್ಷಣಾನ್ನಶ್ಯತಿ ಧ್ರುವಂ ॥ ೪೬ ॥

ಯವಪೂಜಾ ತಥಾ ಪ್ರೋಕ್ತಾ ಲಕ್ಷೇಣ ಪರಮಾ ಶಿವೇ ।
ಪ್ರಸ್ಥಾನಾಮಷ್ಟಕಂ ಚೈವ ತಥಾ ಪ್ರಸ್ಥಾರ್ಧಕಂ ಪುನಃ ॥ ೪೭ ॥

ಪಲದ್ವಯಯುತಂ ತತ್ರ ಮಾನಮೇತತ್ಪುರಾತನಂ ।
ಯವಪೂಜಾ ಚ ಮುನಿಭಿಃ ಸ್ವರ್ಗಸೌಖ್ಯವಿವರ್ಧಿನೀ ॥ ೪೮ ॥

ಪ್ರಾಜಾಪತ್ಯಂ ಬ್ರಾಹ್ಮಣಾನಾಂ ಕರ್ತವ್ಯಂ ಚ ಫಲೇಪ್ಸುಭಿಃ ।
ಗೋಧೂಮಾನ್ನೈಸ್ತಥಾ ಪೂಜಾ ಪ್ರಶಸ್ತಾ ಶಂಕರಸ್ಯ ವೈ ॥ ೪೯ ॥

ಸಂತತಿರ್ವರ್ಧತೇ ತಸ್ಯ ಯದಿ ಲಕ್ಷಾವಧಿಃ ಕೃತಾ ।
ದ್ರೋಣಾರ್ಧೇನ ಭವೇಲ್ಲಕ್ಷಂ ವಿಧಾನಂ ವಿಧಿಪೂರ್ವಕಂ ॥ ೫೦ ॥

ಮುದ್ಗಾನಾಂ ಪೂಜನೇ ದೇವಃ ಶಿವೋ ಯಚ್ಛತಿ ವೈ ಸುಖಂ ।
ಪ್ರಸ್ಥಾನಾಂ ಸಪ್ತಕೇನೈವ ಪ್ರಸ್ಥಾರ್ಧೇನಾಥವಾ ಪುನಃ ॥ ೫೧ ॥

---

೪೬-೪೮. ಲಕ್ಷಯವಗಳಿಂದ ಶಿವನನ್ನು ಪೂಜಿಸಬೇಕು. ಎಂಟೂವರೆ ಪ್ರಸ್ಥ (ಕೊಳಗ) ಮತ್ತು ಎರಡು ಪಲಗಳ ಅಳತೆಯುಳ್ಳಯವಗಳಿಂದ ಪೂಜಿಸಿದರೆ ಲಕ್ಷಪೂಜೆಯಾಗುವುದು. ಈ ಯವಪೂಜೆಯನ್ನು ಮಾಡಿದರೆ ಸ್ವರ್ಗಸುಖವು ಲಭಿಸುವುದು, ಎಂದು ಮುನಿಗಳು ಹೇಳಿರುವರು.

೪೯-೫೦. ಯವಪೂಜೆಯಲ್ಲಿ ಒಂಭತ್ತು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಲಕ್ಷ ಗೋಧಿಯ ಅನ್ನದಿಂದ ಶಿವನನ್ನು ಪೂಜಿಸಿದರೆ ಪ್ರಜಾಭಿವೃದ್ಧಿಯು ಆಗುವುದು. ಅರ್ಧದ್ರೋಣವೆಂದರೆ ಒಂದು ಲಕ್ಷ ಗೋಧಿಗಳು. ವಿಧಿಯೆಲ್ಲವೂ ಮೊದಲಿನಂತೆಯೇ ಇರಬೇಕು.

೫೧-೫೨. ಲಕ್ಷ ಹೆಸರುಗಳಿಂದ ಶಿವನನ್ನರ್ಚಿಸಿದರೆ ಸುಖವು ಲಭಿಸುವುದು. ಏಳೂವರೆ ಪ್ರಸ್ಥ ಮತ್ತು ಎರಡು ಪಲಮುದ್ಗಗಳಿಗೆ ಒಂದು ಲಕ್ಷ ಹೆಸರುಗಳಾಗು

ಪಲದ್ವಯಯುತೇನೈವ ಲಕ್ಷಮುಕ್ತಂ ಪುರಾತನೈಃ ।
ಬ್ರಾಹ್ಮಣಾಶ್ಚ ತಥಾ ಭೋಜ್ಯಾ ರುದ್ರಸಂಖ್ಯಾಪ್ರಮಾಣತಃ ॥ ೫೨ ॥

ಪ್ರಿಯಂಗುಪೂಜನಾದೇವ ಧರ್ಮಾಧ್ಯಕ್ಷೇ ಪರಾತ್ಮನಿ ॥
ಧರ್ಮಾರ್ಥಕಾಮಾ ವರ್ಧಂತೇ ಪೂಜಾ ಸರ್ವಸುಖಾವಹಾ ॥ ೫೩ ॥

ಪ್ರಸ್ಥೈಕೇನ ಚ ತಸ್ಯೋಕ್ತಂ ಲಕ್ಷಮೇಕಂ ಪುರಾತನೈಃ ।
ಬ್ರಹ್ಮಭೋಜಂ ತಥಾ ಪ್ರೋಕ್ತಮರ್ಕಸಂಖ್ಯಾಪ್ರಮಾಣತಃ ॥ ೫೪ ॥

ರಾಜಿಕಾಪೂಜನಂ ಶಂಭೋಶ್ಶತ್ರೋರ್ಮೃತ್ಯುಕರಂ ಸ್ಮೃತಂ ।
ಸಾರ್ಷಪಾನಾಂ ತಥಾ ಲಕ್ಷಂ ಪಲೈರ್ವಿಂಶತಿಸಂಖ್ಯಯಾ ॥ ೫೫ ॥

ತೇಷಾಂ ಚ ಪೂಜನಾದೇವ ಶತ್ರೋರ್ಮೃತ್ಯುರುದಾಹೃತಃ ।
ಆಢಕೀನಾಂ ದಲೈಶ್ಚೈವ ಶೋಭಯಿತ್ವಾರ್ಚಯೇಚ್ಛಿವಂ ॥ ೫೬ ॥

---

ವುವು. ಈ ಪೂಜೆಯಲ್ಲಿ ಹನ್ನೊಂದು ಜನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೫೩-೫೪. ಲಕ್ಷ ಪ್ರಿಯಂಗು (ಜೀರಿಗೆ) ಗಳಿಂದ ಧರ್ಮಪ್ರಭುವಾದ ಶಿವನನ್ನ ರ್ಚಿಸಿದರೆ ಸಕಲ ಸುಖವೂ ಧರ್ಮಾರ್ಥಕಾಮಗಳೂ ಲಭಿಸುವುವು. ಒಂದು ಪ್ರಸ್ಥ ಪ್ರಿಯಂಗುಗಳಿಗೆ ಒಂದು ಲಕ್ಷ ಸಂಖ್ಯೆಯಾಗುವುದು. ಹನ್ನೆರಡು ಜನ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನವನ್ನು ಮಾಡಿಸಬೇಕು.

೫೫. ಲಕ್ಷ ಸಾಸವೆಗಳಿಂದ ಶಿವನನ್ನರ್ಚಿಸಿದರೆ ಶತ್ರುನಾಶವಾಗುವುದು. ಇಪ್ಪತ್ತು ಪಲ ಸಾಸವೆಗಳಿಗೆ ಲಕ್ಷ ಸಾಸವೆಗಳಾಗುವುವು. ವಿಧಿವತ್ತಾಗಿ ಪೂಜಿಸಿದರೆ ಶತ್ರುನಾಶವಾಗುವುದರಲ್ಲಿ ಸಂಶಯವಿಲ್ಲ.

೫೬. ತೊಗರೀಗಿಡದ ಪತ್ರಗಳಿಂದ ಶಂಕರನನ್ನಲಂಕರಿಸಿ ಶಿವನನ್ನರ್ಚಿಸ ಬೇಕು. ಬ್ರಾಹ್ಮಣನಿಗೆ ಅವನಪೇಕ್ಷಿಸಿದ ಹಸುವನೂ ಹೋರಿಯನ್ನೂ ದಾನಮಾಡ ಬೇಕು.

ವೃತಾ ಗೌಶ್ಚ ಪ್ರದಾತವ್ಯಾ ಬಲೀವರ್ದಸ್ತಥೈವ ಚ ।
ಮರೀಚಿಸಂಭವಾ ಪೂಜಾ ಶತ್ರೋರ್ನಾಶಕರೀ ಸ್ಮೃತಾ ॥ ೫೭ ॥

ಆಢಕೀನಾಂ ದಲೈಶ್ಚೈವ ರಂಜಯಿತ್ವಾರ್ಚಯೇಚ್ಛಿವಂ ।
ನಾನಾಸುಖಕರೀ ಹ್ಯೇಷಾ ಪೂಜಾ ಸರ್ವಫಲಪ್ರದಾ ॥ ೫೮ ॥

ಧಾನ್ಯಮಾನಮಿತಿ ಪ್ರೋಕ್ತಂ ಮಯಾ ತೇ ಮುನಿಸತ್ತಮ ।
ಲಕ್ಷಮಾನಂ ತು ಪುಷ್ಪಾಣಾಂ ಶೃಣು ಪ್ರೀತ್ಯಾ ಮುನೀಶ್ವರ ॥ ೫೯ ॥

ಪ್ರಸ್ಥಾನಾಂ ಚ ತಥಾ ಚೈಕಂ ಶಂಖಪುಷ್ಪಸಮುದ್ಭವಂ ।
ಪ್ರೋಕ್ತಂ ವ್ಯಾಸೇನ ಲಕ್ಷಂ ಹಿ ಸೂಕ್ಷ್ಮಮಾನಪ್ರದರ್ಶಿನಾ ॥ ೬೦ ॥

ಪ್ರಸ್ಥೈರೇಕಾದಶೈರ್ಜಾತಿಲಕ್ಷಮಾನಂ ಪ್ರಕೀರ್ತಿತಂ ।
ಯೂಥಿಕಾಯಾಸ್ತಥಾ ಮಾನಂ ರಾಜಿಕಾಯಾಸ್ತದರ್ಧಕಂ ॥ ೬೧ ॥

---

೫೭-೫೮. ಮೆಣಸಿನಕಾಯಿಗಳಿಂದ ಶಿವನನ್ನರ್ಚಿಸಿದರೆ ಶತ್ರುಗಳು ನಾಶವಾಗುವರು. ಮೆಣಸಿನ ಪತ್ರಗಳಿಂದ ಶಿವನನ್ನಲಂಕರಿಸಿ ಪೂಜಿಸಿದರೆ ಸಕಲ ಇಷ್ಟಾರ್ಥಗಳನ್ನೂ ಸುಖಗಳನ್ನೂ ಪಡೆಯಬಹುದು.

೫೯. ಎಲೈ ನಾರದ, ಲಕ್ಷಧಾನ್ಯಪೂಜೆಯ ಕ್ರಮವನ್ನು ಹೇಳಿರುವೆನು. ಈಗ ಲಕ್ಷಪುಷ್ಪ ಪೂಜೆಯ ಕ್ರಮವನ್ನು ಹೇಳುವೆನು ಶ್ರದ್ಧೆಯಿಂದ ಕೇಳು.

೬೦. ಒಂದು ಪ್ರಸ್ಥಶಂಖ ಪುಷ್ಪಗಳನ್ನು ಶಿವನಿಗೆ ಅರ್ಪಿಸಿದರೆ ಲಕ್ಷ ಪೂಜೆಯನ್ನು ಮಾಡಿದಂತಾಗುವುದು ಎಂದು ಸೂಕ್ಷ್ಮವಾದ ಅಳತೆಯನ್ನು ವ್ಯಾಸಮುನಿಯು ಪ್ರದರ್ಶಿಸಿರುವನು.

೬೧. ಹನ್ನೊಂದು ಪ್ರಸ್ಥ ಜಾಜೀಹೂವುಗಳಿಂದರ್ಚಿಸಿದರೆ ಲಕ್ಷಜಾಜೀ ಪೂಜೆಯು ಆಗುವುದು. ಅದರಂತೆ ಯೂಥಿಕಾ ಪುಷ್ಪಗಳನ್ನೂ ಹನ್ನೊಂದು ಪ್ರಸ್ಥದಷ್ಟು ಅರ್ಚಿಸಬೇಕು. ಅರ್ಧ ಪ್ರಸ್ಥದಷ್ಟು ರಾಜಿಕಾಪುಷ್ಪಗಳನ್ನರ್ಚಿಸಬೇಕು.

ಪ್ರಸ್ಥೈರ್ವಿಂಶತಿಕೈಶ್ಚೈವ ಮಲ್ಲಿಕಾಮಾನಮುತ್ತಮಂ ।
ತಿಲಪುಷ್ಪೈಸ್ತಥಾ ಮಾನಂ ಪ್ರಸ್ಥಾನ್ನ್ಯೂನಂ ತಥೈವ ಚ ॥ ೬೨ ॥

ತತಶ್ಚ ತ್ರಿಗುಣಂ ಮಾನಂ ಕರವೀರಭವೇ ಸ್ಮೃತಂ ।
ನಿರ್ಗುಂಡೀಕುಸುಮೇ ಮಾನಂ ತಥೈವ ಕಥಿತಂ ಬುಧೈಃ ॥ ೬೩ ॥

ಕರ್ಣಿಕಾರೇ ತಥಾ ಮಾನಂ ಶಿರೀಷಕುಸುಮೇ ಪುನಃ ।
ಬಂಧುಜೀವೇ ತಥಾ ಮಾನಂ ಪ್ರಸ್ಥಾನಂ ದಶಕೇನ ಚ ॥ ೬೪ ॥

ಇತ್ಯಾದ್ಯೈರ್ವಿವಿಧೈರ್ಮಾನಂ ದೃಷ್ಟ್ವಾ ಕುರ್ಯಾಚ್ಛಿವಾರ್ಚನಂ ।
ಸರ್ವಕಾಮಸಮೃದ್ಧ್ಯರ್ಥಂ ಮುಕ್ತ್ಯರ್ಥಂ ಕಾಮನೋಜ್ಝಿತಃ ॥ ೬೫ ॥

ಅತಃಪರಂ ಪ್ರವಕ್ಷ್ಯಾಮಿ ಧಾರಾಪೂಜಾಫಲಂ ಮಹತ್ ।
ಯಸ್ಯ ಶ್ರವಣಮಾತ್ರೇಣ ಕಲ್ಯಾಣಂ ಜಾಯತೇ ನೃಣಾಂ ॥ ೬೬ ॥

---

೬೨-೬೩. ಮಲ್ಲಿಗೆ ಹೂವುಗಳನ್ನು ಇಪ್ಪತ್ತು ಪ್ರಸ್ಥಗಳಷ್ಟು ಶಿವನಿಗೆ ಅರ್ಚಿಸಬೇಕು. ಹತ್ತೊಂಭತ್ತು ಪ್ರಸ್ಥಗಳಷ್ಟು ತಿಲಪುಷ್ಪಗಳನ್ನರ್ಚಿಸಬೇಕು. ಮೂವತ್ತೆಂಟು ಪ್ರಸ್ಥಗಳಷ್ಟು ಕರವೀರ ಪುಷ್ಪಗಳನ್ನೂ ನಿರ್ಗುಂಡೀಕುಸುಮಗಳನ್ನೂ ಶಿವನಿಗೆ ಅರ್ಪಿಸಬೇಕು.

೬೪. ಮೂವತ್ತೆಂಟು ಪ್ರಸ್ಥಗಳಷ್ಟು ಕರ್ಣಿಕಾರ ಪುಷ್ಪಗಳನ್ನರ್ಚಿಸಬೇಕು. ಬಾಗೇ ಹೂವು ಮತ್ತು ದಾಸವಾಳ ಹೂವುಗಳನ್ನು ಹತ್ತು ಪ್ರಸ್ಥಗಳಷ್ಟು ಅರ್ಪಿಸಬೇಕು.

೬೫. ಹೀಗೆ ಹಿಂದೆ ಹೇಳಿದ ಪರಿಮಾಣದಿಂದ ಶಿವನಿಗೆ ಪುಷ್ಪಗಳನ್ನರ್ಚಿಸಬೇಕು. ಹಾಗೆ ಮಾಡಿದರೆ ಸಕಲೇಷ್ಟಸಿದ್ಧಿಯು ಆಗುವುದು ಫಲಲೇಚ್ಛೆಯಿಲ್ಲದೆ ಮಾಡಿದರೆ ಮುಕ್ತಿಯು ಲಭಿಸುವುದು.

೬೬. ಎಲೈ ನಾರದ, ಈಗ ಧಾರಾ (ಅಭಿಷೇಕ) ಪೂಜೆಯ ಫಲವನ್ನು ಹೇಳುವೆನು. ಅದನ್ನು ಕೇಳಿದಮಾತ್ರದಿಂದಲೇ' ಮಂಗಳವು ಲಭಿಸುವುದು.

ವಿಧಾನಪೂರ್ವಕಂ ಪೂಜಾಂ ಕೃತ್ವಾ ಭಕ್ತ್ಯಾ ಶಿವಸ್ಯ ವೈ ।
ಪಶ್ಚಾಚ್ಚ ಜಲಧಾರಾ ಹಿ ಕರ್ತವ್ಯಾ ಭಕ್ತಿತತ್ಪರೈಃ ॥ ೬೭ ॥

ಜ್ವರಪ್ರಲಾಪಶಾಂತ್ಯರ್ಥಂ ಜಲಾಧಾರಾ ಶುಭಾವಹಾ ।
ಶತರುದ್ರಿಯಮಂತ್ರೇಣ ರುದ್ರಸ್ಯೈಕಾದಶೇನ ತು ॥ ೬೮ ॥

ರುದ್ರಜಾಪ್ಯೇನ ವಾ ತತ್ರ ಸೂಕ್ತೇನ ಪೌರುಷೇಣ ವಾ ।
ಷಡಂಗೇನಾಥ ವಾ ತತ್ರ ಮಹಾಮೃತ್ಯುಂಜಯೇನ ಚ ॥ ೬೯ ॥

ಗಾಯತ್ರ್ಯಾ ವಾ ನಮೋಂತೈಶ್ಚ ನಾಮಭಿಃ ಪ್ರಣವಾದಿಭಿಃ ।
ಮಂತ್ರೈರ್ವಾಥಾಗಮೋಕ್ತೈಶ್ಚ ಜಲಧಾರಾದಿಕಂ ತಥಾ ॥ ೭೦ ॥

ಸುಖಸಂತಾನವೃದ್ಧ್ಯರ್ಥಂ ಧಾರಾಪೂಜನಮುತ್ತಮಂ ।
ನಾನಾದ್ರವ್ಯೈಃ ಶುಭೈರ್ದಿವ್ಯೈಃ ಪ್ರೀತ್ಯಾ ಸದ್ಭಸ್ಮಧಾರಿಣಾ ॥ ೭೧ ॥

ಘೃತಧಾರಾ ಶಿವೇ ಕಾರ್ಯಾ ಯಾವನ್ಮಂತ್ರಸಹಸ್ರಕಂ ।
ತದಾ ವಂಶಸ್ಯ ವಿಸ್ತಾರೋ ಜಾಯತೇ ನಾತ್ರ ಸಂಶಯಃ ॥ ೭೨ ॥

---

೬೭. ಮೊದಲು ಶಿವನಿಗೆ ವಿಧಿವತ್ತಾಗಿ ಪೂಜೆಯನ್ನು ಮಾಡಿ ಬಳಿಕ ಭಕ್ತಿಯಿಂದ ಜಲಾಭಿಷೇಕವನ್ನು ಮಾಡಬೇಕು.

೬೮. ಜ್ವರಬಾಧೆಯು ಹೋಗಲು ಏಕಾದಶವಾರ ರುದ್ರಾಭಿಷೇಕವನ್ನು ಶಿವನಿಗೆ ಮಾಡಿಸಿದರೆ ಆ ಜ್ವರಬಾಧೆಯು ನಾಶವಾಗುವುದು.

೬೯-೭೦. ಅಥವಾ, ರುದ್ರಸೂಕ್ತ, ಪುರುಷಸೂಕ್ತ ಮೃತ್ಯುಂಜಯಮಂತ್ರ, ಗಾಯತ್ರೀ, ಆದಿ ಮತ್ತು ಕೊನೆಯಲ್ಲಿ ಓಂಕಾರದೊಡನೆ ಶಿವನಾಮಗಳು, ಅಥವಾ ಆಗಮದಲ್ಲಿ ಹೇಳಿರುವ ಮಂತ್ರಗಳು, ಇವುಗಳಿಂದ ಶಿವನಿಗೆ ಜಲಾಭಿಷೇಕವನ್ನು ಮಾಡಿಸಬೇಕು. ಹಾಗೆ ಮಾಡಿದರೆ ಸುಖವೃದ್ಧಿಯೂ ಪ್ರಜಾವೃದ್ಧಿಯೂ ಆಗುವುದು.

೭೧-೭೨. ಶಿವಭಕ್ತನು ಭಸ್ಮವನ್ನು ಧರಿಸಿ ಅನೇಕ ಬಗೆಯಾದ ಮಂಗಳ ಮತ್ತು ದಿವ್ಯವಾದ ದ್ರವ್ಯಗಳಿಂದ ಧಾರಾಭಿಷೇಕವನ್ನು ಸಹಸ್ರನಾಮ ಮಂತ್ರಗಳಿಂದ ಮಾಡಬೇಕು. ಹಾಗೆ ಮಾಡಿದರೆ ವಂಶವು ಅಭಿವೃದ್ಧಿಯಾಗುವುದು.

ಏವಂ ಮದುಕ್ತಮಂತ್ರೇಣ ಕಾರ್ಯಂ ವೈ ಶಿವಪೂಜನಂ ।
ಬ್ರಹ್ಮಭೋಜ್ಯಂ ತಥಾ ಪ್ರೋಕ್ತಂ ಪ್ರಾಜಾಪತ್ಯಂ ಮುನೀಶ್ವರೈಃ ॥ ೭೩ ॥

ಕೇವಲಂ ದುಗ್ಧಧಾರಾ ಚ ತದಾ ಕಾರ್ಯಾ ವಿಶೇಷತಃ ।
ಶರ್ಕರಾಮಿಶ್ರಿತಾ ತತ್ರ ಯದಾ ಬುದ್ಧಿಜಡೋ ಭವೇತ್ ॥ ೭೪ ॥

ತಸ್ಯ ಸಂಜಾಯತೇ ಜೀವಸದೃಶೀ ಬುದ್ಧಿರುತ್ತಮಾ ।
ಯಾವನ್ಮಂತ್ರಾಯುತಂ ನ ಸ್ಯಾತಾವದ್ಧಾರಾಪ್ರಪೂಜನಂ ॥ ೭೫ ॥

ಯದಾ ಚೋಚ್ಚಾಟನಂ ದೇಹೇ ಜಾಯತೇ ಕಾರಣಂ ವಿನಾ ।
ಯತ್ರ ಕುತ್ರಾಪಿ ವಾ ಪ್ರೇಮ ದುಃಖಂ ಚ ಪರಿವರ್ಧಿತಂ ॥ ೭೬ ॥

ಸ್ವಗೃಹೇ ಕಲಹೋ ನಿತ್ಯಂ ಯದಾ ಚೈವ ಪ್ರಜಾಯತೇ ।
ತದ್ಧಾರಾಯಾಂ ಕೃತಾಯಾಂ ವೈ ಸರ್ವಂ ದುಃಖಂ ವಿಲೀಯತೇ ॥ ೭೭ ॥

---

೭೩. ಹೀಗೆ ನಾನು ಹೇಳಿದ ಮಂತ್ರಗಳಿಂದ ಶಿವನನ್ನು ಪೂಜಿಸಬೇಕು. ಒಂಭತ್ತು ಜನ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನವನ್ನು ಮಾಡಿಸಬೇಕು.

೭೪. ಬುದ್ಧಿಯು ಜಡವಾದರೆ ಸಕ್ಕರೆಯನ್ನು ಮಿಶ್ರಮಾಡಿ ಹಾಲಿನಿಂದ ಶಿವನಿಗೆ ಅಭಿಷೇಕವನ್ನು ಮಾಡಿಸಬೇಕು. ಆಗ ಬುದ್ಧಿಯು ಚುರುಕಾಗುವುದು.

೭೫. ಹತ್ತುಸಾವಿರಬಾರಿ ರುದ್ರಮಂತ್ರದಿಂದ ಕ್ಷೀರಾಭಿಷೇಕವನ್ನು ಮಾಡಿಸಬೇಕು. ಹಾಗೆ ಮಾಡಿದರೆ ಆ ಮನುಷ್ಯನಿಗೆ ಬೃಹಸ್ಪತಿಯಂತೆ ಬುದ್ಧಿಯು ಚುರುಕಾಗುವುದು.

೭೬-೭೭. ಅಕಸ್ಮಾತ್ತಾಗಿ ಕಾರಣವಿಲ್ಲದೆ, ಶರೀರದಲ್ಲಿ ಉಚ್ಚಾಟನೆ, ಚಂಚಲತೆ, ವಾಯುಪ್ರಕೋಪ, ಅಯುಕ್ತಸ್ಥಳದಲ್ಲಿ ಪ್ರೇಮ, ಹೆಚ್ಚಾಗಿ ದುಃಖ, ಮನೆಯಲ್ಲಿ ನಿತ್ಯವೂ ಕಲಹ, ಇವುಗಳೆಲ್ಲವೂ ಆಗುತ್ತಿದ್ದರೆ ಈ ದುಗ್ಧಾಭಿಷೇಕವನ್ನು ಮಾಡಿ ಶಿವನನ್ನರ್ಚಿಸಿದರೆ ಆ ಕಷ್ಟವೆಲ್ಲವೂ ಪರಿಹಾರವಾಗುವುದು.

ಶತ್ರೂಣಾಂ ತಾಪನಾರ್ಥಂ ವೈ ತೈಲಧಾರಾ ಶಿವೋಪರಿ ।
ಕರ್ತವ್ಯಾ ಸುಪ್ರಯತ್ನೇನ ಕಾರ್ಯಸಿದ್ಧಿರ್ಧ್ರುವಂ ಭವೇತ್ ॥ ೭೮ ॥

ವಾಸಿತೇನೈವ ತೈಲೇನ ಭೋಗವೃದ್ಧಿಃ ಪ್ರಜಾಯತೇ ।
ಸಾರ್ಷಪೇಣೈವ ತೈಲೇನ ಶತ್ರುನಾಶೋ ಭವೇದ್ಧ್ರುವಂ ॥ ೭೯ ॥

ಮಧುನಾ ಯಕ್ಷರಾಜೋ ವೈ ಗಚ್ಛೇಚ್ಚ ಶಿವಪೂಜನಾತ್ ।
ಧಾರಾ ಚೇಕ್ಷುರಸಸ್ಯಾಪಿ ಸರ್ವಾನಂದಕರೀ ಶಿವೇ ॥ ೮೦ ॥

ಧಾರಾ ಗಂಗಾಜಲಸ್ಯೈವ ಭುಕ್ತಿಮುಕ್ತಿಫಲಪ್ರದಾ ।
ಏತಾಸ್ಸರ್ವಾಶ್ಚ ಯಾಃ ಪ್ರೋಕ್ತಾ ಮೃತ್ಯುಂಜಯಸಮುದ್ಭವಾಃ ॥ ೮೧ ॥

ತತ್ರಾಯುತಪ್ರಮಾಣಂ ಹಿ ಕರ್ತವ್ಯಂ ತದ್ವಿಧಾನತಃ ।
ಕರ್ತವ್ಯಂ ಬ್ರಾಹ್ಮಣಾನಾಂ ಚ ಭೋಜ್ಯಂ ವೈ ರುದ್ರಸಂಖ್ಯಯಾ ॥ ೮೨ ॥

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಹಂ ಮುನೀಶ್ವರ ।
ಏತದ್ವೈ ಸಕಲಂ ಲೋಕೇ ಸರ್ವಕಾಮಹಿತಾವಹಂ ॥ ೮೩ ॥

---

೭೮. ಶತ್ರುಗಳಿಗೆ ಕಷ್ಟವುಂಟಾಗುವುದಕ್ಕಾಗಿ ಶಿವನಿಗೆ ತೈಲಾಭಿಷೇಕವನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು. ಅದರಿಂದ ನಿಶ್ಚಯವಾಗಿ ಕಾರ್ಯಸಿದ್ಧಿಯಾಗುವುದು.

೭೯. ಸುವಾಸನೆಯುಳ್ಳ ತೈಲಾಭಿಷೇಕವನ್ನು ಮಾಡಿಸಿದರೆ ಹೆಚ್ಚಾದ ಸುಖ ಭೋಗವು ಲಭಿಸುವುದು. ಸಾರ್ಷಪತೈಲ (ಕಸುವೆ ಅಥವಾ ನಾಸವೆಎಣ್ಣೆ) ದಿಂದ ಅಭಿಷೇಕಮಾಡಿಸಿದರೆ ಶತ್ರುಗಳು ನಿಶ್ಚಯವಾಗಿ ನಾಶವಾಗುವರು.

೮೦-೮೨. ಜೇನುತುಪ್ಪದಿಂದ ಅಭಿಷೇಕಮಾಡಿಸಿ ಶಿವನನ್ನರ್ಚಿಸಿದರೆ ಯಕ್ಷರಾಜ (ಕುಬೇರ) ನಾಗಿ ಶಿವನ ಸಾನ್ನಿಧ್ಯವನ್ನು ಪಡೆಯುವನು. ಕಬ್ಬಿನ ಹಾಲಿನಿಂದ ಅಭಿಷೇಕಮಾಡಿಸಿದರೆ ಸಕಲ ಆನಂದವೂ ಲಭಿಸುವುದು. ಗಂಗಾಜಲದಿಂದ ಅಭಿಷೇಕಮಾಡಿಸಿದರೆ ಭೋಗಮುಕ್ತಿಗಳೆರಡೂ ಲಭಿಸುವುವು. ಈ ಎಲ್ಲಾ ಅಭಿಷೇಕಗಳನ್ನು ಹತ್ತುಸಾವಿರ ಬಾರಿ ಮೃತ್ಯುಂಜಯಮಂತ್ರದಿಂದ ಮಾಡಬೇಕು. ಆಮೇಲೆ ಹನ್ನೊಂದು ಜನ ಬ್ರಾಹ್ಮಣರ ಸುಖಭೋಜನವನ್ನು ಮಾಡಿಸಬೇಕು

೮೩. ಎಲೈ ನಾರದ, ಹೀಗೆ ನೀನು ಕೇಳಿದುದೆಲ್ಲವನ್ನೂ ಹೇಳಿರುವೆನು. ಈ ಶಿವಾರ್ಚನೆಯು ಲೋಕದಲ್ಲಿ ಸಕಲ ಇಷ್ಟಾರ್ಥಗಳನ್ನೂ ಕೊಡುವಂತಹುದು.

ಸ್ಕಂದೋಮಾಸಹಿತಂ ಶಂಭುಂ ಸಂಪೂಜ್ಯ ವಿಧಿನಾ ಸಹ ।
ರ್ಯತ್ಫಲಂ ಲಭತೇ ಭಕ್ತ್ಯಾ ತದ್ವದಾಮಿ ಯಥಾ ಶ್ರುತಂ ॥ ೮೪ ॥

ಅತ್ರ ಭುಕ್ತ್ವಾಖಿಲಂ ಸೌಖ್ಯಂ ಪುತ್ರಪೌತ್ರಾದಿಭಿಃ ಶುಭಂ ।
ತತೋ ಯಾತಿ ಮಹೇಶಸ್ಯ ಲೋಕಂ ಸರ್ವಸುಖಾವಹಂ ॥ ೮೫ ॥

ಸೂರ್ಯಕೋಟಿಪ್ರತಿಕಾಶೈರ್ವಿಮಾನೈಃ ಸರ್ವಕಾಮಗೈಃ ।
ರುದ್ರಕನ್ಯಾಸಮಾಕೀರ್ಣೈರ್ಗೇಯವಾದ್ಯಸಮನ್ವಿತಃ ॥ ೮೬ ॥

ಕ್ರೀಡತೇ ಶಿವಭೂತಶ್ಚ ಯಾವದಾಭೂತಸಂಪ್ಲವಂ ।
ತತೋ ಮೋಕ್ಷಮವಾಪ್ನೋತಿ ವಿಜ್ಞಾನಂ ಪ್ರಾಪ್ಯ ಚಾವ್ಯಯಂ ॥ ೮೭ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಶಿವಪೂಜಾವಿಧಾನವರ್ಣನೋ
ನಾಮ ಚತುರ್ದಶೋಽಧ್ಯಾಯಃ

---

೮೪. ಈಗ ಷಣ್ಮುಖ ಪಾರ್ವತಿಯರೊಡನಿರುವ ಶಿವನನ್ನರ್ಚಿಸಿದರೆ ಲಭಿಸುವ ಫಲವನ್ನು ಹೇಳುವೆನು ಕೇಳು.

೮೫. ಹಾಗೆ ಶಿವನನ್ನರ್ಚಿಸದವನು ಇಹಲೋಕದಲ್ಲಿ ಪುತ್ರ ಮತ್ತು ಪೌತ್ರರೊಡನೆ ಸಕಲ ಸೌಖ್ಯವನ್ನೂ ಪಡೆದು ಕೊನೆಗೆ ಸಕಲ ಸುಖಗಳಿಗೆ ಆಶ್ರಯವಾದ ಶಿವಲೋಕವನ್ನು ಪಡೆಯುವನು.

೮೬-೮೭. ಭಕ್ತಿಯಿಂದ ಶಿವಾರ್ಚನೆಯನ್ನು ಮಾಡಿದ ಪುರುಷನು, ಕೋಟಿ ಸೂರ್ಯರಂತೆ ಪ್ರಕಾಶಮಾನವಾದುದೂ, ಎಲ್ಲಿಗೆಂದರೆ ಅಲ್ಲಿಗೆ ಹೋಗಲು ಸಾಮರ್ಥ್ಯವುಳ್ಳದೂ ಆದ ದಿವ್ಯವಾದ ವಿಮಾನದಲ್ಲಿ ಸುರಸುಂದರಿಯರೊಡನೆ ಕುಳಿತು, ಸೊಗಸಾದ ಗಾನವನ್ನು ಕೇಳುತ್ತಾ ರುದ್ರಲೋಕಕ್ಕೆ ಹೋಗಿ ಅಲ್ಲಿ ಒಂದು ಕಲ್ಪಪರ್ಯಂತರ ಬಗೆಬಗೆಯ ಸುಖಗಳನ್ನು ಅನುಭವಿಸಿ ಕೊನೆಗೆ ಬ್ರಹ್ಮಜ್ಞಾನವನ್ನು ಪಡೆದು ಮುಕ್ತಿಯನ್ನು ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯ ಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಶಿವಪೂಜಾವಿಧಾನವರ್ಣನವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಸೃಷ್ಟಿಖಂಡೇ
# ಪಂಚದಶೋಽಧ್ಯಾಯಃ

---

॥ ನಾರದ ಉವಾಚ ॥

**ವಿಧೇ ವಿಧೇ ಮಹಾಭಾಗ ಧನ್ಯಸ್ತ್ವಂ ಸುರಸತ್ತಮ ।**
**ಶ್ರಾವಿತಾದ್ಯಾದ್ಭುತಾ ಶೈವಕಥಾ ಪರಮಪಾವನೀ ॥ ೧ ॥**

**ತತ್ರಾದ್ಭುತಾ ಮಹಾದಿವ್ಯಾ ಲಿಂಗೋತ್ಪತ್ತಿಃ ಶ್ರುತಾ ಶುಭಾ ।**
**ಶ್ರುತ್ವಾ ಯಸ್ಯಾಃ ಪ್ರಭಾವಂ ಚ ದುಃಖನಾಶೋ ಭವೇದಿಹ ॥ ೨ ॥**

## ಹದಿನೈದನೆಯ ಅಧ್ಯಾಯವು

೧. ನಾರದನು ಕೇಳಿದನು :—ದೇವೋತ್ತಮನೂ ಮಹಾಮಹಿಮನೂ ಆದ ಓ ಬ್ರಹ್ಮನೇ, ಶಿವಭಕ್ತನಾದ ನೀನು ಧನ್ಯನು, ನೀನು ಈಗ ಅದ್ಭುತವೂ ಪರಮಪವಿತ್ರವೂ ಆದಂತಹ ಶಿವಕಥೆಯನ್ನು ನನಗೆ ಹೇಳಿರುವೆಯಷ್ಟೆ?

೨. ಲಿಂಗೋತ್ಪತ್ತಿ ಕಥೆಯನ್ನು ಶ್ರವಣಮಾಡಿದರೆ ಸಕಲ ದುಃಖವೂ ನಾಶವಾಗುವುದು. ಅಂತಹ ಮಂಗಳಕರವೂ ಅದ್ಭುತವೂ ದಿವ್ಯವೂ ಆದ ಲಿಂಗೋತ್ಪತ್ತಿಯನ್ನೂ ಹೇಳಿರುವೆ.

ಅನಂತರಂ ಚ ಯಜ್ಜಾತಂ ಮಾಹಾತ್ಮ್ಯಂ ಚರಿತಂ ತಥಾ ।
ಸೃಷ್ಟೇಶ್ಚೈವ ಪ್ರಕಾರಂ ಚ ಕಥಯ ತ್ವಂ ವಿಶೇಷತಃ ॥ ೩ ॥

॥ ಬ್ರಹ್ಮೋವಾಚ ॥

ಸಮ್ಯಕ್ಪೃಷ್ಟಂ ಚ ಭವತಾ ಯಜ್ಜಾತಂ ತದನಂತರಂ ।
ಕಥಯಿಷ್ಯಾಮಿ ಸಂಕ್ಷೇಪಾದ್ಯಥಾ ಪೂರ್ವಂ ಶ್ರುತಂ ಮಯಾ ॥ ೪ ॥

ಅಂತರ್ಹಿತೇ ತದಾ ದೇವೇ ಶಿವರೂಪೇ ಸನಾತನೇ ।
ಅಹಂ ವಿಷ್ಣುಶ್ಚ ವಿಪ್ರೇಂದ್ರ ಅಧಿಕಂ ಸುಖಮಾಪ್ತವಾನ್ ॥ ೫ ॥

ಮಯಾ ಚ ವಿಷ್ಣುನಾ ರೂಪಂ ಹಂಸವಾರಾಹಯೋಸ್ತದಾ ।
ಸಂವೃತಂ ತು ತತಸ್ತಾಭ್ಯಾಂ ಲೋಕಸರ್ಗಾವನೇಚ್ಛಯಾ ॥ ೬ ॥

॥ ನಾರದ ಉವಾಚ ॥

ವಿಧೇ ಬ್ರಹ್ಮನ್ಮಹಾಪ್ರಾಜ್ಞ ಸಂಶಯೋ ಹೃದಿ ಮೇ ಮಹಾನ್ ।
ಕೃಪಾಂ ಕೃತ್ವಾತುಲಾಂ ಶೀಘ್ರಂ ತಂ ನಾಶಯಿತುಮರ್ಹಸಿ ॥ ೭ ॥

---

೩. ಮುಂದೆ ನಡೆದ ಚರಿತ್ರೆಯ ವಿವರವೇನು? ಅದರ ಮಹಾತ್ಮೆಯ ಸ್ವರೂಪವೆಂತಹುದು! ಸೃಷ್ಟಿಯ ಕ್ರಮವೇನು? ಇವೆಲ್ಲವನ್ನೂ ಈಗ ವಿಶೇಷವಾಗಿ ನನಗೆ ವಿವರಿಸಿ ಹೇಳು ಎಂದನು.

೪. ಬ್ರಹ್ಮನು ಹೇಳಿದನು:—ಎಲೈ ನಾರದನೇ, ನೀನು ಒಳ್ಳೆಯ ವಿಷಯಗಳನ್ನೇ ಪ್ರಶ್ನಿಸಿರುವೆ. ಲಿಂಗೋತ್ಪತ್ತಿಯಾದನಂತರ ಏನಾಯಿತೆಂಬುದನ್ನು ಸಂಕ್ಷೇಪವಾಗಿ ಹಿಂದೆ ನಾನು ಕೇಳಿರುವಂತೆ ಹೇಳುವೆನು.

೫-೬. ಹಿಂದೆ ಹೇಳಿದಂತೆ ಶಿವಸ್ವರೂಪನೂ, ಆದ್ಯಂತರಹಿತನೂ ಆದ ಆ ದೇವನು ಅಂತರ್ಧಾನನಾಗಲು ಆಗ ನಾನೂ ವಿಷ್ಣುವೂ ತುಂಬಾ ಸಂತೋಷಗೊಂಡು ನಾವು ಮಾಡಬೇಕಾದ ಲೋಕದ ಸೃಷ್ಟಿ ಮತ್ತು ಪಾಲನೆಗಳಿಗಾಗಿ ನಮ್ಮ ಹಂಸ ಮತ್ತು ವರಾಹರೂಪಗಳನ್ನು ಉಪಸಂಹರಿ (ತ್ಯಜಿ) ಸಿದೆವು, ಎಂದು ಬ್ರಹ್ಮನು ಹೇಳುತ್ತಿರಲು,

೭-೮. ನಾರದನು ಪುನಃ ಕೇಳಿದನು:—ಮಹಾ ಪ್ರಾಜ್ಞನಾದ ಎಲೈ ಬ್ರಹ್ಮನೆ! ಈಗ ನನ್ನ ಮನಸ್ಸಿನಲ್ಲಿ ದೊಡ್ಡನಾದ ಸಂಶಯವೊಂದುಂಟಾಗಿರುವುದು.

**ಹಂಸವಾರಾಹಯೋಃ ರೂಪಂ ಯುವಾಭ್ಯಾಂ ಚ ಧೃತಂ ಕಥಂ ।**
**ಅನ್ಯದ್ರೂಪಂ ವಿಹಾಯ್ಯೈವ ಕಿಮತ್ರ ವದ ಕಾರಣಂ ॥ ೮ ॥**

**॥ ಸೂತ ಉವಾಚ ॥**

**ಇತ್ಯೇತದ್ವಚನಂ ಶ್ರುತ್ವಾ ನಾರದಸ್ಯ ಮಹಾತ್ಮನಃ ।**
**ಸ್ಮೃತ್ವಾ ಶಿವಪದಾಂಭೋಜಂ ಬ್ರಹ್ಮಾ ನಾರದಮಬ್ರವೀತ್ ॥ ೯ ॥**

**॥ ಬ್ರಹ್ಮೋವಾಚ ॥**

**ಹಂಸಸ್ಯ ಚೋರ್ಧ್ವಗಮನೇ ಗತಿರ್ಭವತಿ ನಿಶ್ಚಲಾ ।**
**ತತ್ತ್ವಾತತ್ತ್ವವಿವೇಕೋಽಸ್ತಿ ಜಲದುಗ್ಧವಿಭಾಗವತ್ ॥ ೧೦ ॥**

**ಅಜ್ಞಾನಜ್ಞಾನಯೋಸ್ತತ್ತ್ವಂ ವಿವೇಚಯತಿ ಹಂಸಕಃ ।**
**ಹಂಸರೂಪಂ ಧೃತಂ ತೇನ ಬ್ರಹ್ಮಣಾ ಸೃಷ್ಟಿಕಾರಿಣಾ ॥ ೧೧ ॥**

---

ನೀನೂ ವಿಷ್ಣುವೂ ಮಿಕ್ಕ ಪ್ರಾಣಿಗಳ ರೂಪವನ್ನು ಬಿಟ್ಟು ಹಂಸ ಮತ್ತು ವರಾಹಗಳ ರೂಪವನ್ನೇ ಧರಿಸಲು ಕಾರಣವೇನು? ದಯವಿಟ್ಟು ಈ ಸಂಶಯವನ್ನು ಹೋಗಲಾಡಿಸಬೇಕೆಂದು ಬೇಡುವೆನು ಎಂದನು.

೯. ಸೂತಮುನಿಯು ಹೇಳಿದನು:—ಹೀಗೆ ಮಹಾತ್ಮನಾದ ನಾರದ ಮುನಿಯು ಹೇಳಿದ ಮಾತುಗಳನ್ನು ಕೇಳಿ ಬ್ರಹ್ಮನು ಶಿವನ ಪಾದಕಮಲವನ್ನು ಭಕ್ತಿಯಿಂದ ಸ್ಮರಿಸಿ ಹೇಳಲುಪಕ್ರಮಿಸಿದನು.

೧೦-೧೧. ಬ್ರಹ್ಮನು ಹೇಳಿದನು:—ಎಲೈ ನಾರದ, ಹಂಸವು ನಿಶ್ಚಲವಾಗಿ ಮೇಲಗಡೆ ಹಾರುವುದು. ಅದಕ್ಕೆ ಊರ್ಧ್ವ (ಉನ್ನತ) ಗತಿಯಿರುವುದು ಮತ್ತು ಹಾಲು ನೀರುಗಳನ್ನು ಬೇರೆಮಾಡುವಂತೆ ಆ ಹಂಸಕ್ಕೆ ಇದು ತತ್ವ ಇದು ಅತತ್ವವೆಂಬ ವಿವೇಕಜ್ಞಾನವಿರುವುದು. ಮತ್ತು ಅದರಂತೆ ಜ್ಞಾನ ಮತ್ತು ಅಜ್ಞಾನಗಳ ತತ್ವವನ್ನೂ ತಿಳಿಯಬಲ್ಲದು. ಈ ಎಲ್ಲಾ ಕಾರಣಗಳಿಂದ ಹಂಸವು ಉತ್ತಮವಾದ ಪಕ್ಷಿಯು. ಅದಕ್ಕಾಗಿಯೇ ಬ್ರಹ್ಮನಾದ ನಾನು ಹಂಸರೂಪವನ್ನು ಧರಿಸಿದೆನು.

ವಿವೇಕೋ ನೈವ ಲಬ್ಧಶ್ಚ ಯತೋ ಹಂಸೋ ವ್ಯಲೀಯತ ।
ಶಿವಸ್ವರೂಪತತ್ತ್ವಸ್ಯ ಜ್ಯೋತೀರೂಪಸ್ಯ ನಾರದ ॥ ೧೨ ॥

ಸೃಷ್ಟಿಪ್ರವೃತ್ತಿಕಾಮಸ್ಯ ಕಥಂ ಜ್ಞಾನಂ ಪ್ರಜಾಯತೇ ।
ಯತೋ ಲಬ್ಧೋ ವಿವೇಕೋಽಪಿ ನ ಮಯಾ ಹಂಸರೂಪಿಣಾ ॥ ೧೩ ॥

ಗಮನೇಽಧೋ ವರಾಹಸ್ಯ ಗತಿರ್ಭವತಿ ನಿಶ್ಚಲಾ ।
ಧೃತಂ ವಾರಾಹರೂಪಂ ಹಿ ವಿಷ್ಣುನಾ ವನಚಾರಿಣಾ ॥ ೧೪ ॥

ಅಥವಾ ಭವಕಲ್ಪಾರ್ಥಂ ತದ್ರೂಪಂ ಹಿ ಪ್ರಕಲ್ಪಿತಂ ।
ವಿಷ್ಣುನಾ ಚ ವರಾಹಸ್ಯ ಭುವನಾವನಕಾರಿಣಾ ॥ ೧೫ ॥

ಯದ್ದಿನಂ ಹಿ ಸಮಾರಭ್ಯ ತದ್ರೂಪಂ ಧೃತವಾನ್ಹರಿಃ ।
ತದ್ದಿನಂ ಪ್ರತಿ ಕಲ್ಪೋಽಸೌ ಕಲ್ಪೋ ವಾರಹಸಂಜ್ಞಕಃ ॥ ೧೬ ॥

---

೧೨. ಆದರೆ ಆ ಹಂಸರೂಪವನ್ನು ಧರಿಸಿದ ನನಗೆ ಜೋತಿಸ್ವರೂಪವಾದ ಪರಮೇಶ್ವರತತ್ವದ ವಿವೇಕವು ಮಾತ್ರ ತಿಳಿಯಲಿಲ್ಲ. ಆದುದರಿಂದ ಪ್ರಯೋಜನ ವಿಲ್ಲದ ಹಂಸರೂಪವನ್ನು ತ್ಯಜಿಸಿದೆನು.

೧೩. ಪ್ರಪಂಚಸೃಷ್ಟಿಯಲ್ಲಿ ಅಪೇಕ್ಷೆಯುಳ್ಳ ನನಗೆ ಶಿವತತ್ವಜ್ಞಾನವು ಉಂಟಾಗುವುದು ಹೇಗೆ? ಹಂಸರೂಪವನ್ನು ಧರಿಸಿದರೂ ನನಗೆ ಶಿವಸ್ವರೂಪತತ್ವವು ತಿಳಿಯಲೇ ಇಲ್ಲವಲ್ಲಾ ಎಂದು ಯೋಚಿಸಿ ಆ ಹಂಸರೂಪವನ್ನು ಆಗಲೇ ತ್ಯಜಿಸಿದೆನು.

೧೪. ಭೂಮಿಯ ಒಳಗೆ ವ್ಯಾಪಿಸಿರುವ ಲಿಂಗದ ಮೂಲವನ್ನು ನೋಡಲು ಭೂಮಿಯನ್ನು ಕೊರೆದುಕೊಂಡು ಹೋಗಬೇಕಷ್ಟೆ? ವರಾಹವು ಭೂಮಿಯನ್ನು ಕೊರೆದುಕೊಂಡು ಹೋಗಬಲ್ಲುದು ಎಂದು ಯೋಚಿಸಿ ಅದಕ್ಕಾಗಿ ವಿಷ್ಣುವು ಕಾಡು ವರಾಹದ ರೂಪವನ್ನು ಧರಿಸಿದನು.

೧೫. ಅಥವಾ ಆ ವರಾಹರೂಪವು ಭೂಮಿಯನ್ನು ಕಲ್ಪಿಸುವುದು. ಅದ ರಿಂದ ವಿಷ್ಣುವು ಜಗತ್ತನ್ನು ರಕ್ಷಿಸಲೋಸುಗ ವರಾಹರೂಪವನ್ನು ಧರಿಸಿದನು.

೧೬. ಯಾವದಿನ ಹರಿಯು ಆ ವರಾಹರೂಪವನ್ನು ಧರಿಸಿದನೋ ಅಂದು ಮೊದಲುಗೊಂಡು ಆ ಕಲ್ಪಕ್ಕೆ ವಾರಾಹ ಕಲ್ಪವೆಂದು ಹೆಸರಾಯಿತು.

ತದಿಚ್ಛಾ ವಾ ಯದಾ ಜಾತಾ ಚಾಭ್ಯಾಂ ರೂಪಂ ಹಿ ಧಾರಣೇ ।
ತದ್ದಿನಂ ಪ್ರತಿ ಕಲ್ಪೋಽಸೌ ಕಲ್ಪೋ ವಾರಾಹಸಂಜ್ಞಕಃ ॥ ೧೭ ॥

ಇತಿ ಪ್ರಶ್ನೋತ್ತರಂ ದತ್ತಂ ಪ್ರಸ್ತುತಂ ಶೃಣು ನಾರದ ।
ಸ್ಮೃತ್ವಾ ಶಿವಪದಾಂಭೋಜಂ ವಕ್ಷ್ಯೇ ಸೃಷ್ಟಿವಿಧಿಂ ಮುನೇ ॥ ೧೮ ॥

ಅಂರ್ಹಿತೇ ಮಹಾದೇವೇ ತ್ವಹಂ ಲೋಕಪಿತಾಮಹಃ ।
ತದೀಯಂ ವಚನಂ ಕರ್ತುಮಧ್ಯಾಯನ್ಧ್ಯಾನತತ್ಪರಃ ॥ ೧೯ ॥

ನಮಸ್ಕೃತ್ಯ ತದಾ ಶಂಭುಂ ಜ್ಞಾನಂ ಪ್ರಾಪ್ಯ ಹರೇಸ್ತದಾ ।
ಆನಂದಂ ಪರಮಂ ಗತ್ವಾ ಸೃಷ್ಟಿಂ ಕರ್ತುಂ ಮನೋ ದಧೇ ॥ ೨೦ ॥

ವಿಷ್ಣುಶ್ಚಾಪಿ ತದಾ ತತ್ರ ಪ್ರಣಿಪತ್ಯ ಸದಾಶಿವಂ ।
ಉಪದಿಶ್ಯ ಚ ಮಾಂ ತಾತ ಹ್ಯಂತರ್ಧಾನಮುಪಾಗತಃ ॥ ೨೧ ॥

---

೧೭. ಅಥವಾ ನಾವೀರ್ವರಿಗೆ ಯಾವದಿನದಿಂದ ವಾರಾಹಹಂಸರೂಪಗಳನ್ನು ಧರಿಸಲಿಚ್ಛಿಸಿದೆವೋ ಆದಿನ ಮೊದಲುಗೊಂಡು ವಾರಾಹವೆಂಬ ಕಲ್ಪಭೇದವಾಯಿತು.

೧೮. ಎಲೈ ನಾರದ, ಹೀಗೆ ನೀನು ಮಧ್ಯೆ ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಿರುವೆನು. ಈಗ ಶಿವನ ಪಾದಕಮಲವನ್ನು ಸ್ಮರಿಸಿ ಸೃಷ್ಟಿಕ್ರಮವನ್ನು ಹೇಳುವೆನು, ಶ್ರದ್ಧೆಯಿಂದ ಕೇಳು.

೧೯. ಹಿಂದೆ ಹೇಳಿದಂತೆ ಶಿವನು ಅಂತರ್ಧಾನನಾಗಲು ಲೋಕಪಿತಾಮಹನೆನಿಸಿದ ನಾನು ಆ ಶಿವನ ಆಜ್ಞೆಯನ್ನು ನಡೆಸಲು ಶಿವನನ್ನು ಧ್ಯಾನಿಸಿದೆನು.

೨೦-೨೧. ಮುಂದೆ ನಾನು ಶಿವನನ್ನು ನಮಸ್ಕರಿಸಿ ಹರಿಯಿಂದ ಸೃಷ್ಟಿಸುವ ಕ್ರಮವನ್ನು ತಿಳಿದು ಸಂತೋಷದಿಂದ ಸೃಷ್ಟಿಕರ್ಮವನ್ನಾರಂಭಿಸಬೇಕೆಂದು ಯೋಚಿಸಲು ವಿಷ್ಣುವೂ ಸಹ ಆಗ ಅಲ್ಲಿ ಸದಾಶಿವನನ್ನು ನಮಸ್ಕರಿಸಿ ನನಗೆ ಸೃಷ್ಟಿಕ್ರಮವನ್ನು ಉಪದೇಶಿಸಿ ಅಂತರ್ಧಾನವನ್ನು ಹೊಂದಿದನು.

ಬ್ರಹ್ಮಾಂಡಾಚ್ಚ ಬಹಿರ್ಗತ್ವಾ ಪ್ರಾಪ್ಯ ಶಂಭೋರನುಗ್ರಹಂ ।
ವೈಕುಂಠನಗರಂ ಗತ್ವಾ ತತ್ರೈವಾಸ ಹರಿಸ್ಸದಾ ॥ ೨೨ ॥

ಅಹಂ ಸ್ಮೃತ್ವಾ ಶಿವಂ ತತ್ರ ವಿಷ್ಣುಂ ವೈ ಸೃಷ್ಟಿಕಾಮ್ಯಯಾ ।
ಪೂರ್ವಂ ಸೃಷ್ಟ ಜಲಂ ಯಚ್ಚ ತತ್ರಾಂಜಲಿಮುದಾಕ್ಷಿಪಂ ॥ ೨೩ ॥

ಅತೋಽಂಡಮಭವತ್ತತ್ರ ಚತುರ್ವಿಂಶತಿಸಂಜ್ಞಕಂ ।
ವಿರಾಡ್ರೂಪಮಭೂದ್ವಿಪ್ರ ಜಲರೂಪಮಪಶ್ಯತಃ ॥ ೨೪ ॥

ತತಸ್ಸಂಶಯಮಾಪನ್ನಸ್ತಪಸ್ತೇಪೇ ಸುದಾರುಣಂ ।
ದ್ವಾದಶಾಬ್ದಮಹಂ ತತ್ರ ವಿಷ್ಣುಧ್ಯಾನಪರಾಯಣಃ ॥ ೨೫ ॥

ತಸ್ಮಿಂಶ್ಚ ಸಮಯೇ ತಾತ ಪ್ರಾದುರ್ಭೂತೋ ಹರಿಸ್ಸ್ವಯಂ ।
ಮಾಮುವಾಚ ಮಹಾಪ್ರೀತ್ಯಾ ಮದಂಗಂ ಸಂಸ್ಪೃಶನ್ಮುದಾ ॥ ೨೬ ॥

---

೨೨. ಅಂತರ್ಧಾನನಾದಮೇಲೆ ಆ ಹರಿಯು ಬ್ರಹ್ಮಾಂಡದ ಹೊರಗೆ ಹೋಗಿ ಅಲ್ಲಿ ಶಂಕರನ ಅನುಗ್ರಹವನ್ನು ಪಡೆದು ಮುಂದೆ ವೈಕುಂಠವೆಂಬ ನಗರಕ್ಕೆ ಹೋಗಿ ಅಲ್ಲಿ ವಾಸಮಾಡತೊಡಗಿದನು

೨೩. ಮುಂದೆ ನಾನು (ಬ್ರಹ್ಮನು) ಸೃಷ್ಟಿಸಲೋಸುಗ ಮೊದಲು ಶಿವನನ್ನೂ ವಿಷ್ಣುವನ್ನೂ ಸ್ಮರಿಸಿ ಹಿಂದೆ ಸೃಷ್ಟಿಸಿದ ಜಲರಾಶಿಯಲ್ಲಿ ಅಂಜಲಿಯ (ನನ್ನ ವೀರ್ಯವ) ನ್ನು ಹಾಕಿದೆನು.

೨೪. ಆ ಅಂಜಲಿ (ವೀರ್ಯ) ಯಿಂದ "ಚತುರ್ವಿಂಶತಿ" ಎಂದು ಸಂಜ್ಞೆಯುಳ್ಳ ವಿರಾಡ್ರೂಪವೆಂದು ಪ್ರಸಿದ್ಧವಾದ ಜಲ (ಡ) ರೂಪವಾದ ಗೋಳವಾಯಿತು.

೨೫. ಆಗ ನನಗೆ ಏನು ಮಾಡಬೇಕೆಂದು ತೋಚದೆ ಸಂಶಯಗ್ರಸ್ತನಾಗಿ ವಿಷ್ಣುವನ್ನು ಧ್ಯಾನಿಸುತ್ತಾ ಹನ್ನೆರಡು ವರ್ಷಗಳ ಪರ್ಯಂತ ಘೋರವಾದ ತಪಸ್ಸನ್ನಾಚರಿಸಿದೆನು.

೨೬. ಆಗ ವಿಷ್ಣುವು ನನ್ನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಬಂದು ನನ್ನ ಶರೀರವನ್ನು ನೇವರಿಸುತ್ತಾ ಪ್ರೀತಿಯಿಂದ ಹೀಗೆ ಹೇಳಿದನು.

॥ ವಿಷ್ಣುರುವಾಚ ॥

ವರಂ ಬ್ರೂಹಿ ಪ್ರಸನ್ನೋಽಸ್ಮಿ ನಾದೇಯೋ ವಿದ್ಯತೇ ತವ ।
ಬ್ರಹ್ಮಂಛಂಭುಪ್ರಸಾದೇನ ಸರ್ವಂ ದಾತುಂ ಸಮರ್ಥಕಃ ॥ ೨೭ ॥

॥ ಬ್ರಹ್ಮೋವಾಚ ॥

ಯುಕ್ತಮೇತನ್ಮಹಾಭಾಗ ದತ್ತೋಽಹಂ ಶಂಭುನಾ ಚ ತೇ ।
ತದುಕ್ತಂ ಯಾಚತೇ ಮೇಽದ್ಯ ದೇಹಿ ವಿಷ್ಣೋ ನಮೋಽಸ್ತು ತೇ ॥ ೨೮ ॥

ವಿರಾಡ್ರೂಪಮಿದಂ ಹ್ಯಂಡಂ ಚತುರ್ವಿಂಶತಿಸಂಜ್ಞಕಂ ।
ನ ಚೈತನ್ಯಂ ಭವತ್ಯಾದೌ ಜಡೀಭೂತಂ ಪ್ರದೃಶ್ಯತೇ ॥ ೨೯ ॥

ಪ್ರಾದುರ್ಭೂತೋ ಭವಾನದ್ಯ ಶಿವಾನುಗ್ರಹತೋ ಹರೇ ।
ಪ್ರಾಪ್ತಂ ಶಂಕರಸಂಭೂತ್ಯಾ ಹ್ಯಂಡಂ ಚೈತನ್ಯಮಾವಹ ॥ ೩೦ ॥

ಇತ್ಯುಕ್ತೇ ಚ ಮಹಾವಿಷ್ಣುಶ್ಶಂಭೋರಾಜ್ಞಾಪರಾಯಣಃ ।
ಅನಂತರೂಪಮಾಸ್ಥಾಯ ಪ್ರವಿವೇಶ ತದಂಡಕಂ ॥ ೩೧ ॥

---

೨೭. ವಿಷ್ಣುವು ಹೇಳಿದನು:—ಎಲೈ ಬ್ರಹ್ಮನೆ, ನಿನಗೆ ನಾನು ಪ್ರಸನ್ನನಾಗಿರುವೆನು. ವರವನ್ನು ಕೇಳಿಕೋ, ನಿನಗೆ ಯಾವ ವರವನ್ನು ಬೇಕಾದರೂ ಕೊಡುವೆನು. ಶಂಕರನ ಅನುಗ್ರಹದಿಂದ ಎಲ್ಲ ವರಗಳನ್ನೂ ಕೊಡಬಲ್ಲೆನು, ಎನ್ನಲು,

೨೮. ಬ್ರಹ್ಮನು ಹೇಳಿದನು:—ಮಹಾಮಹಿಮನಾದ ಓ ವಿಷ್ಣುವೇ ಶಂಕರನು ನನ್ನನ್ನು ನಿನ್ನ ವಶಕ್ಕೆ ಕೊಟ್ಟಿರುವನು. ಆದುದರಿಂದ ಈಗ ನಾನು ಕೇಳುವುದನ್ನು ಕೊಡು. ನಿನಗೆ ನಮಸ್ಕರಿಸುವೆನು.

೨೯. ಚತುರ್ವಿಂಶತಿಸಂಜ್ಞವಾದ ಈ ವಿರಾಡ್ರೂಪ (ಮಹತ್ತಾದ) ವಾದ ಗೋಳವು ಚೈತನ್ಯವುಳ್ಳದ್ದಾಗಿಲ್ಲ, ಜಡವಾಗಿರುವುದು.

೩೦. ಈಗ ಶಿವನ ಅನುಗ್ರಹದಿಂದ ಆವಿರ್ಭವಿಸಿದ ನೀನು ಈ ಅಂಡವನ್ನು (ಗೋಳವನ್ನು) ಪ್ರವೇಶಿಸಿ ಶಂಕರನ ಮಹಿಮೆಯಿಂದ ಈ ಗೋಳಕ್ಕೆ ಚೈತನ್ಯವುಂಟಾಗುವಂತೆ ಮಾಡಬೇಕು ಎಂದೆನು.

೩೧. ಹೀಗೆ ಬ್ರಹ್ಮನು ಹೇಳಲು ಶಂಕರ ಆಜ್ಞೆಯಂತೆ ನಡೆಯುವ ಹರಿಯು ಮಹಾರೂಪವನ್ನು ಧರಿಸಿ ಆ ಅಂಡವನ್ನು ಪ್ರವೇಶಿಸಿದನು.

**ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷಃ ಸಹಸ್ರಪಾತ್ ।**
**ಸ ಭೂಮಿಂ ಸರ್ವತಸ್ಸ್ಪೃತ್ವಾ ತದಂಡಂ ವ್ಯಾಪ್ತವಾನಿತಿ ॥ ೩೨ ॥**

**ಪ್ರವೃಷ್ಟೇ ವಿಷ್ಣುನಾ ತಸ್ಮಿನ್ನಂಡೇ ಸಮ್ಯಕ್ಸ್ತುತೇನ ಮೇ ।**
**ಸಚೇತನಮಭೂದಂಡಂ ಚತುರ್ವಿಂಶತಿಸಂಜ್ಞಕಂ ॥ ೩೩ ॥**

**ಪಾತಾಲಾದಿ ಸಮಾರಭ್ಯ ಸಪ್ತಲೋಕಾಧಿಪಃ ಸ್ವಯಂ ।**
**ರಾಜತೇ ಸ್ಮ ಹರಿಸ್ತತ್ರ ವೈರಾಜಃ ಪುರುಷಃ ಪ್ರಭುಃ ॥ ೩೪ ॥**

**ಕೈಲಾಸನಗರಂ ರಮ್ಯಂ ಸರ್ವೋಪರಿವಿರಾಜಿತಂ ।**
**ನಿವಾಸಾರ್ಥಂ ನಿಜಸ್ಯೈವ ಪಂಚವಕ್ತ್ರಶ್ಚಕಾರ ಹ ॥ ೩೫ ॥**

**ಬ್ರಹ್ಮಾಂಡಸ್ಯ ತಥಾ ನಾಶೇ ವೈಕುಂಠಸ್ಯ ಚ ತಸ್ಯ ಚ ।**
**ಕದಾಚಿದೇವ ದೇವರ್ಷೇ ನಾಶೋ ನಾಸ್ತಿ ತಯೋರಿಹ ॥ ೩೬ ॥**

---

೩೨. ಎಂದರೆ ಆ ವಿಷ್ಣುವು ಸಾವಿರಾರು ತಲೆಗಳುಳ್ಳವನೂ ಸಾವಿರಾರು ಕಣ್ಣುಗಳುಳ್ಳವನೂ ಸಾವಿರಾರು ಕಾಲುಗಳುಳ್ಳವನೂ ಆಗಿ ವಿರಾಡ್ರೂಪವನ್ನು ಧರಿಸಿ, ಆ ಅಂಡದಲ್ಲಿ ಪ್ರವೇಶಿಸಿ ಅದನ್ನು ಸಂಪೂರ್ಣವಾಗಿ ವ್ಯಾಪಿಸಿದನು.

೩೩. ಹೀಗೆ ನಾನು ಕೇಳಿಕೊಂಡಮೇಲೆ ಹರಿಯು ಆ ಅಂಡದಲ್ಲಿ ವಿರಾಟ್ಸ್ವರೂಪದಿಂದ ಪ್ರವೇಶಿಸಲು ಚತುರ್ವಿಂಶತಿಯೆಂದು ಹೆಸರುಳ್ಳ ಆ ಅಂಡವು ಸಚೇತನವು ಅಂದರೆ ಚೇತನವುಳ್ಳದ್ದಾಯಿತು.

೩೪. ಆ ಅಂಡದಲ್ಲಿ ಹರಿಯು ಪಾತಾಳ ಮೊದಲುಗೊಂಡು ಏಳು ಲೋಕಗಳಿಗೆ ಅಧಿಪತಿಯಾಗಿ ವಿರಾಟ್ಪುರುಷರೂಪದಿಂದ ಪ್ರಕಾಶಿಸಿದನು.

೩೫. ಎಲ್ಲ ಲೋಕಗಳಿಗೂ ಮೇಲ್ಭಾಗದಲ್ಲಿ ಕೈಲಾಸವೆಂಬ ಸುಂದರವಾದ ನಗರವನ್ನು ಶಂಕರನು ತನ್ನ ವಾಸಕ್ಕಾಗಿ ಕಲ್ಪಿಸಿಕೊಂಡನು.

೩೬. ಎಲೈ ದೇವಮುನಿಯಾದ ನಾರದನೇ, ಕೇಳು. ಬ್ರಹ್ಮಾಂಡವೆಲ್ಲ ನಾಶವಾದರೂ ಆ ವೈಕುಂಠ ಕೈಲಾಸಲೋಕಗಳಿಗೆ ಮಾತ್ರ ನಾಶವಿಲ್ಲ.

ಸತ್ಯಂ ಪದಮುಪಾಶ್ರಿತ್ಯ ಸ್ಥಿತೋಽಹಂ ಮುನಿಸತ್ತಮ ।
ಸೃಷ್ಟಿಕಾಮೋಽಭವಂ ತಾತ ಮಹಾದೇವಾಜ್ಞಯಾ ಹ್ಯಹಂ ॥ ೩೭ ॥

ಸಿಸೃಕ್ಷೋರಥ ಮೇ ಪ್ರಾದುರಭವತ್ಪಾಪಸರ್ಗಕಃ ।
ಅವಿದ್ಯಾಪಂಚಕಸ್ತಾತ ಬುದ್ಧಿಪೂರ್ವಸ್ತಮೋಪಮಃ ॥ ೩೮ ॥

ತತಃ ಪ್ರಸನ್ನಚಿತ್ತೋಽಹಮಸೃಜಂ ಸ್ಥಾವರಾಭಿದಂ ।
ಮುಖ್ಯಸರ್ಗಂ ಚ ನಿಸ್ಸಂಗಮಧ್ಯಾಯಂ ಶಂಭುಶಾಸನಾತ್ ॥ ೩೯ ॥

ತಂ ದೃಷ್ಟ್ವಾ ಮೇ ಸಿಸೃಕ್ಷೋಶ್ಚ ಜ್ಞಾತ್ವಾ ಸಾಧಕಮಾತ್ಮನಃ ।
ಸರ್ಗೋಽವರ್ತತ ದುಃಖಾಢ್ಯಸ್ತಿರ್ಯಕ್ಸ್ರೋತಾ ನ ಸಾಧಕಃ ॥ ೪೦ ॥

ತಂ ಚಾಸಾಧಕಮಾಜ್ಞಾಯ ಪುನಶ್ಚಿಂತಯತಶ್ಚ ಮೇ ।
ಅಭವತ್ಸಾತ್ತ್ವಿಕಸ್ಸರ್ಗ ಊರ್ಧ್ವಸ್ರೋತಾ ಇತಿ ದ್ರುತಂ ॥ ೪೧ ॥

---

೩೭-೩೮. ನಾನು ಸತ್ಯವನ್ನಾಶ್ರಯಿಸಿ ಅಲ್ಲಿರುತ್ತಾ ಶಂಕರನ ಆಜ್ಞೆಯಂತೆ ಸೃಷ್ಟಿಸಲುದ್ಯುಕ್ತನಾಗಲು, ನನ್ನಿಂದ ಅಂಧಕಾರಸದೃಶವಾದ ಮತ್ತು ಪಾಪವನ್ನು ಬೆಳೆಸುವಂತಹ ಅವಿದ್ಯಾ, ಅಸ್ಮಿತ, ರಾಗ, ದ್ವೇಷ, ಮೋಹ ಎಂಬ ಐದು ವಸ್ತುಗಳು ಜನಿಸಿದುವು.

೩೯. ಆಗ ನಾನು ಸಂತುಷ್ಟನಾಗಿ ಆ ಅವಿದ್ಯಾ ಮೊದಲಾದ ಐದು ಸಾಧನಗಳಿಂದ ಸ್ಥಾವರ ಸೃಷ್ಟಿಯನ್ನು ಎಂದರೆ ಅಚಲವಾದ ಪರ್ವತ ಮೊದಲಾದ ಸುಖದುಃಖಾದಿಗಳನ್ನು ತಿಳಿಯಲಾರದ ಜಡವಸ್ತುಗಳ ಮುಖ್ಯಸೃಷ್ಟಿಯನ್ನು ಶಂಕರನ ಆಜ್ಞೆಯಂತೆ ಮಾಡಿದೆನು.

೪೦. ಎಲೈ ನಾರದ, ಅವಿದ್ಯೆ ಮೊದಲಾದ ಐದು ಪದಾರ್ಥಗಳು ಸೃಷ್ಟಿಗೆ ಸಾಧಕಗಳಾದರೂ ಅವುಗಳಿಂದ ಮುಂದೆ ದುಃಖಮಯವಾದ ಸೃಷ್ಟಿಯೇ ಆಗತೊಡಗಿತು. ಸುಖಮಯವಾದ ಸೃಷ್ಟಿಯು ಅವುಗಳಿಂದ ಆಗಲೇ ಇಲ್ಲ.

೪೧. ಹೀಗೆ ಆ ಅವಿದ್ಯೆ ಮುಂತಾದುವುಗಳಿಂದ ಸರಿಯಾಗಿ ಸೃಷ್ಟಿಯಾಗದಿರುವುದನ್ನು ನೋಡಿ ನಾನು ತಿರುಗಿ ಚಿಂತೆಗೊಳಗಾಗಲು, ಆಗ ನನ್ನಿಂದ ಸತ್ತ್ವಗುಣ ಪ್ರಧಾನವಾದ ಮತ್ತು ಸುಖಮಯವಾದ ಸೃಷ್ಟಿಯು ಆಯಿತು.

ದೇವಸರ್ಗಃ ಪ್ರತಿಖ್ಯಾತಃ ಸತ್ಯೋಽತೀವ ಸುಖಾವಹಃ ।
ತಮುಪ್ಯಸಾಧಕಂ ಮತ್ವಾಽಚಿಂತಯಂ ಪ್ರಭುಮಾತ್ಮನಃ ॥ ೪೨ ॥

ಪ್ರಾದುರಾಸೀತ್ತತಸ್ಸರ್ಗೋ ರಾಜಸಃ ಶಂಕರಾಜ್ಞಯಾ ।
ಅರ್ವಾಕ್ಸ್ರೋತಾ ಇತಿ ಖ್ಯಾತೋ ಮಾನುಷಃ ಪರಸಾಧಕಃ ॥ ೪೩ ॥

ಮಹಾದೇವಾಜ್ಞಯಾ ಸರ್ಗಸ್ತತೋ ಭೂತಾದಿಕೋಽಭವತ್ ।
ಇತಿ ಪಂಚವಿಧಾ ಸೃಷ್ಟಿಃ ಪ್ರವೃತ್ತಾ ವೈ ಕೃತಾ ಮಯಾ ॥ ೪೪ ॥

ತ್ರಯಸ್ಸರ್ಗಾಃ ಪ್ರಕೃತ್ಯಾಶ್ಚ ಬ್ರಹ್ಮಣಃ ಪರಿಕೀರ್ತಿತಾಃ ।
ತತ್ರಾದ್ಯೋ ಮಹತಸ್ಸರ್ಗೋ ದ್ವಿತೀಯಃ ಸೂಕ್ಷ್ಮಭೌತಿಕಃ ॥ ೪೫ ॥

ವೈಕಾರಿಕಸ್ತೃತೀಯಶ್ಚ ಇತ್ಯೇತೇ ಪ್ರಾಕೃತಾಸ್ತ್ರಯಃ ।
ಏವಂ ಚಾಷ್ಟವಿಧಾಸ್ಸರ್ಗಾಃ ಪ್ರಾಕೃತೈರ್ವೈಕೃತೈಃ ಸಹ ॥ ೪೬ ॥

---

೪೨-೪೩. ಆ ಸೃಷ್ಟಿಯೇ ದೇವಸರ್ಗವು. ಅದು ತುಂಬಾ ಸುಖಮಯವಾದುದು. ಅದೂ ಸಾಲದೆಂದು ನಾನು ತಿರುಗಿ ಪ್ರಭುವಾದ ಶಂಕರನನ್ನು ಚಿಂತಿಸಲು ಮುಂದೆ ರಜೋಗುಣಪ್ರಧಾನವಾದ ಸೃಷ್ಟಿಯು ಆಯಿತು. ಇದೇ ಮನುಷ್ಯಸರ್ಗವು, ಇದರ ಪ್ರವೃತ್ತಿ ಕೆಳಮುಖವಾಗಿರುವುದಾದರೂ ಕರ್ಮಾನುಷ್ಠಾನ ಮತ್ತು ಜ್ಞಾನಾಭ್ಯಾಸಗಳಿಂದ ಈ ಮನುಷ್ಯ ಶರೀರದಿಂದಲೇ ಸ್ವರ್ಗ ಮತ್ತು ಮುಕ್ತಿಗಳನ್ನು ಪಡೆಯಬಹುದು.

೪೪. ಆಮೇಲೆ ಮಹಾದೇವನ ಆಜ್ಞೆಯಂತೆ ಮಹಾಭೂತಗಳ ಸೃಷ್ಟಿಯಾಯಿತು. ಹೀಗೆ ನನ್ನಿಂದ ಐದು ವಿಧವಾದ ಸೃಷ್ಟಿಯು ಆಯಿತು.

೪೫-೪೬. ಬ್ರಹ್ಮನ ಪ್ರೇರಣೆಯಿಂದ ಪ್ರಕೃತಿಯಿಂದ ಮಹತ್ತತ್ವ, ಸೂಕ್ಷ್ಮಭೂತಗಳು ವೈಕಾರಿಕ (ಸೂಕ್ಷ್ಮಭೂತಗಳಿಂದಾದ ಮಹಾಭೂತ ಸೃಷ್ಟಿ) ಎಂದು ಮೂರು ಪ್ರಾಕೃತ ಸೃಷ್ಟಿಗಳಾದುವು ; ಹೀಗೆ ಪ್ರಾಕೃತಿಸರ್ಗ ವಿಕೃತಿಸರ್ಗಗಳು ಸೇರಿ ಎಂಟು ವಿಧವಾದ ಸೃಷ್ಟಿಗಳು ಆದುವು.

ಕೌಮಾರೋ ನವಮಃ ಪ್ರೋಕ್ತಃ ಪ್ರಾಕೃತೋ ವೈಕೃತಶ್ಚ ಸಃ ।
ಏಷಾಮವಾಂತರೋ ಭೇದೋ ಮಯಾ ವಕ್ತುಂ ನ ಶಕ್ಯತೇ ॥ ೪೭ ॥

ಅಲ್ಪತ್ವಾದುಪಯೋಗಸ್ಯ ವಚ್ಮಿ ಸರ್ಗಂ ದ್ವಿಜಾತ್ಮಕಂ ।
ಕೌಮಾರಃ ಸನಕಾದೀನಾಂ ಯತ್ರ ಸರ್ಗೋ ಮಹಾನಭೂತ್ ॥ ೪೮ ॥

ಸನಕಾದ್ಯಾಃ ಸುತಾ ಮೇ ಹಿ ಮಾನಸಾ ಬ್ರಹ್ಮಸಂಮಿತಾಃ ।
ಮಹಾವೈರಾಗ್ಯಸಂಪನ್ನಾ ಅಭವನ್ಪಂಚ ಸುವ್ರತಾಃ ॥ ೪೯ ॥

ಮಯಾಜ್ಞಪ್ತಾ ಅಪಿ ಚ ತೇ ಸಂಸಾರವಿಮುಖಾ ಬುಧಾಃ ।
ಶಿವಧ್ಯಾನೈಕಮನಸೋ ನ ಸೃಷ್ಟೌ ಚಕ್ರಿರೇ ಮತಿಂ ॥ ೫೦ ॥

ಪ್ರತ್ಯುತ್ತರಂ ಚ ತೈರ್ದತ್ತಂ ಶ್ರುತ್ವಾಹಂ ಮುನಿಸತ್ತಮ ।
ಅಕಾರ್ಷಂ ಕ್ರೋಧಮತ್ಯುಗ್ರಂ ಮೋಹಮಾಪ್ತಶ್ಚ ನಾರದ ॥ ೫೧ ॥

---

೪೭. ಮುಂದೆ ಕೌಮಾರವೆಂಬ ಒಂಭತ್ತನೆಯ ಸರ್ಗವೂ ಆಯಿತು. ಅದು ಪ್ರಾಕೃತ ಸರ್ಗವೂ ವೈಕೃತಸರ್ಗವೂ ಆಗಿರುವುದು. ಈ ಒಂಭತ್ತು ಸರ್ಗಗಳಿಂದ ಭೇದಪ್ರಭೇದಗಳನ್ನೊಳಗೊಂಡ ಅನೇಕ ವಿಧವಾದ ಸೃಷ್ಟಿಗಳಾದವು. ಅವುಗಳನ್ನೆಲ್ಲ ವನ್ನೂ ಹೇಳಲು ಸಾಧ್ಯವಿಲ್ಲ.

೪೮. ಆದರೆ ದ್ವಿಜ (ಬ್ರಾಹ್ಮಣ) ಸರ್ಗವು ಚಿಕ್ಕದಾದುದರಿಂದ ಅದನ್ನು ಮಾತ್ರ ಹೇಳುವೆನು, ಅದೇ ಕೌಮಾರಸರ್ಗವು. ಅದರಿಂದಲೇ ಮುಂದೆ ಸನತ್ಕು ಮಾರ ಮುಂತಾದವರ ಸರ್ಗವು ಆಗಿ ವೃದ್ಧಿಗೊಂಡಿತು.

೪೯. ಸನತ್ಕುಮಾರನೇ ಮೊದಲಾದ ಐದು ಜನ ಕುಮಾರರು ನನ್ನ ಮಾನಸ ಪುತ್ರರು. ನನ್ನಂತೆ ಪೂಜ್ಯರು, ಮಹಾವಿರಕ್ತರು, ಮಹಾತಪಸ್ವಿಗಳು.

೫೦. ನಾನು ಸೃಷ್ಟಿಯನ್ನು ಮಾಡಿರಿ ಎಂದು ಆಜ್ಞೆಮಾಡಿದರೂ, ಅವರು ಸಂಸಾರದಲ್ಲಿ ಆಸಕ್ತಿಯಿಲ್ಲದೆ ಶಿವಧ್ಯಾನತತ್ಪರರಾಗಿ ಸೃಷ್ಟಿಯನ್ನು ಮಾಡಲೇ ಇಲ್ಲ.

೫೧-೫೨. ಆ ಕುಮಾರರು ಸೃಷ್ಟಿಯನ್ನು ಮಾಡುವುದಿಲ್ಲವೆಂದು ಪ್ರತ್ಯುತ್ತರ ವನ್ನೂ ಕೊಟ್ಟರು. ಎಲೈ ನಾರದನೇ, ಅದನ್ನು ಕೇಳಿ ನಾನು ತುಂಬಾ ಕೋಪ

ಕ್ರುದ್ಧಸ್ಯ ಮೋಹಿತಸ್ಯಾಥ ವಿಹ್ವಲಸ್ಯ ಮುನೇ ಮಮ ।
ಕ್ರೋಧೇನ ಖಲು ನೇತ್ರಾಭ್ಯಾಂ ಪ್ರಾಪತನ್ನಶ್ರುಬಿಂದವಃ ॥ ೫೨ ॥

ತಸ್ಮಿನ್ನವಸರೇ ತತ್ರ ಸ್ಮೃತೇನ ಮನಸಾ ಮಯಾ ।
ಪ್ರಬೋಧಿತೋಽಹಂ ತ್ವರಿತಮಾಗತೇನ ಹಿ ವಿಷ್ಣುನಾ ॥ ೫೩ ॥

ತಪಃ ಕುರು ಶಿವಸ್ಯೇತಿ ಹರಿಣಾ ಶಿಕ್ಷಿತೋಽಪ್ಯಹಂ ।
ತಪೋಽಕಾರಿ ಮಹದ್ಘೋರಂ ಪರಮಂ ಮುನಿಸತ್ತಮ ॥ ೫೪ ॥

ತಪಸ್ಯತಶ್ಚ ಸೃಷ್ಟ್ಯರ್ಥಂ ಭ್ರುವೋರ್ಘ್ರಾಣಸ್ಯ ಮಧ್ಯತಃ ।
ಅವಿಮುಕ್ತಾಭಿಧಾದ್ದೇಶಾತ್ಸ್ವಕೀಯಾನ್ಮೇ ವಿಶೇಷತಃ ॥ ೫೫ ॥

ತ್ರಿಮೂರ್ತೀನಾಂ ಮಹೇಶಸ್ಯ ಪ್ರಾದುರಾಸೀದ್ಘೃಣಾನಿಧಿಃ ।
ಅರ್ಧನಾರೀಶ್ವರೋ ಭೂತ್ವಾ ಪೂರ್ಣಾಂಶಸ್ಸಕಲೇಶ್ವರಃ ॥ ೫೬ ॥

ತಮಜಂ ಶಂಕರಂ ಸಾಕ್ಷಾತ್ತೇಜೋರಾಶಿಮುಮಾಪತಿಂ ।
ಸರ್ವಜ್ಞಂ ಸರ್ವಕರ್ತಾರಂ ನೀಲಲೋಹಿತಸಂಜ್ಞಕಂ ॥ ೫೭ ॥

---

ಗೊಂಡು ಮೋಹಾವಿಷ್ಟನಾಗಿರಲು ನನ್ನ ಕಣ್ಣುಗಳಿಂದ, ಬಿಸಿಯಾದ ಕಣ್ಣೀರುಗಳು ಉದುರಿದುವು.

೫೩ ಆ ಸಮಯದಲ್ಲಿ ನಾನು ವಿಷ್ಣುವನ್ನು ಸ್ಮರಿಸಲು ಅವನು ತ್ವರಿತವಾಗಿ ನನ್ನ ಬಳಿಗೆ ಬಂದು

೫೪. ಶಿವನನ್ನು ಕುರಿತು ತಪವನ್ನಾಚರಿಸು ಎಂದು ನನಗೆ ಉಪದೇಶ ಮಾಡಲು ನಾನು ಘೋರವೂ ಮಹತ್ತಾದುದೂ ಆದ ತಪಸ್ಸನ್ನಾಚರಿಸಿದೆನು.

೫೫-೫೬, ಹೀಗೆ ಸೃಷ್ಟಿಗಾಗಿ ಶಿವನನ್ನು ಕುರಿತು ತಪಸ್ಸನ್ನಾಚರಿಸುತ್ತಿರುವ ನನ್ನ ಅವಿಮುಕ್ತವೆಂಬ ಲಲಾಟದೇಶದಿಂದ ತ್ರಿಮೂರ್ತಿಗಳಲ್ಲಿ ಶ್ರೇಷ್ಠನೂ, ಪರಮೇಶ್ವರನ ಪೂರ್ಣಾಂಶನೂ, ಅರ್ಧನಾರೀಶ್ವರನೂ ಆದಂತಹ ರುದ್ರನು ಜನಿಸಿದನು.

೫೭-೫೮. ಸಾಕ್ಷಾತ್ಪರಮೇಶ್ವರಸ್ವರೂಪನೂ, ತೇಜಸ್ವಿಯೂ ಪಾರ್ವತೀ ಪತಿಯೂ,. ಸರ್ವಜ್ಞನೂ, ಸರ್ವಕರ್ತೃವೂ, ನೀಲಲೋಹಿತನೆಂಬ ಹೆಸರುಳ್ಳವನೂ

**ದೃಷ್ಟ್ವಾ ನತ್ವಾ ಮಹಾಭಕ್ತ್ಯಾ ಸ್ತುತ್ವಾಽಹಂ ತು ಪ್ರಹರ್ಷಿತಃ ।**
**ಅವೋಚಂ ದೇವದೇವೇಶಂ ಸೃಜ ತ್ವಂ ವಿವಿಧಾಃ ಪ್ರಜಾಃ ॥ ೫೮ ॥**

**ಶ್ರುತ್ವಾ ಮಮ ವಚಸ್ಸೋಽಥ ದೇವದೇವೋ ಮಹೇಶ್ವರಃ ।**
**ಸಸರ್ಜ ಸ್ವಾತ್ಮನಸ್ತುಲ್ಯಾನ್ನುದ್ರೋ ರುದ್ರಗಣಾನ್ಬಹೂನ್ ॥ ೫೯ ॥**

**ಅವೋಚಂ ಪುನರೇವೇಶಂ ಮಹಾರುದ್ರಂ ಮಹೇಶ್ವರಂ ।**
**ಜನ್ಮಮೃತ್ಯುಭಯಾವಿಷ್ಟಾಸ್ಸೃಜ ದೇವ ಪ್ರಜಾ ಇತಿ ॥ ೬೦ ॥**

**ಏವಂ ಶ್ರುತ್ವಾ ಮಹಾದೇವೋ ಮದ್ವಚಃ ಕರುಣಾನಿಧಿಃ ।**
**ಪ್ರಹಸ್ಯೋವಾಚ ಮಾಂ ಸದ್ಯಃ ಪ್ರಹಸ್ಯ ಮುನಿಸತ್ತಮ ॥ ೬೧ ॥**

**॥ ಮಹಾದೇವ ಉವಾಚ ॥**

**ಜನ್ಮಮೃತ್ಯುಭಯಾವಿಷ್ಟಾ ನಾಹಂ ಸ್ರಕ್ಷ್ಯೇ ಪ್ರಜಾ ವಿಧೇ ।**
**ಅಶೋಭನಾಃ ಕರ್ಮವಶಾ ವಿಮಗ್ನಾ ದುಃಖವಾರಿಧೌ ॥ ೬೨ ॥**

---

ಆದಂತಹ ಆ ರುದ್ರನನ್ನು ನೋಡಿ ನಾನು ಹರ್ಷಗೊಂಡು ಮಹಾಭಕ್ತಿಯಿಂದ ನಮಸ್ಕರಿಸಿ ದೇವದೇವನಾದ ಅವನನ್ನು ಕುರಿತು ನೀನು ಅನೇಕ ಪ್ರಜೆಗಳನ್ನು ಸೃಷ್ಟಿಸು ಎಂದು ಹೇಳಿದೆನು.

೫೯. ನನ್ನ ಮಾತುಗಳನ್ನು ಕೇಳಿ ದೇವದೇವನಾದ ಆ ಮಹೇಶ್ವರನು ತನ್ನಂತೇ ಇರುವ ಅನೇಕ ರುದ್ರಗಣಗಳನ್ನು ಸೃಷ್ಟಿಸಿದನು.

೬೦. ಅಲ್ಲದೆ ಆ ಶಿವನನ್ನು ಕುರಿತು ಓ ದೇವ, ಜನ್ಮ ಮತ್ತು ಮರಣಗಳಿಂದ ಕೂಡಿರುವ ಪ್ರಜೆಗಳನ್ನು ಸೃಷ್ಟಿಸು ಎಂದು ಹೇಳಿದೆನು.

೬೧. ಎಲೈ ನಾರದ, ಈ ರೀತಿಯಾದ ನನ್ನ ಮಾತುಗಳನ್ನು ಕೇಳಿ ದಯಾಳುವಾದ ಮಹಾದೇವನು ಆಗ ತುಂಬಾ ನಕ್ಕು ನನ್ನನ್ನು ಕುರಿತು ಹೀಗೆ ಹೇಳಿದನು.

೬೨. ಮಹಾದೇವನು ಹೇಳಿದನು :—ಎಲೈ ಬ್ರಹ್ಮನೇ, ನಾನು ಜನ್ಮ ಮತ್ತು ಮರಣಗಳುಳ್ಳವರೂ, (ದುಃಖಮಯರೂ) ಪ್ರಾರಬ್ಧಕರ್ಮಕ್ಕೆ ಒಳಪಟ್ಟವರೂ, ದುಃಖ ಸಮುದ್ರದಲ್ಲಿ ಮುಳುಗಿರುವವರೂ ಆದಂತಹ ಪ್ರಜೆಗಳನ್ನು ಸೃಷ್ಟಿಸಲಾರೆನು.

**ಅಹಂ ದುಃಖೋದಧೌ ಮಗ್ನಾ ಉದ್ಧರಿಷ್ಯಾಮಿ ಚ ಪ್ರಜಾಃ ।**
**ಸಮ್ಯಗ್ಜ್ಞಾನಪ್ರದಾನೇನ ಗುರುಮೂರ್ತಿಪರಿಗ್ರಹಃ ॥ ೬೩ ॥**

**ತ್ವಮೇವ ಸೃಜ ದುಃಖಾಢ್ಯಾಃ ಪ್ರಜಾಸ್ಸರ್ವಾಃ ಪ್ರಜಾಪತೇ ।**
**ಮದಾಜ್ಞಯಾ ನ ಬದ್ಧಸ್ತ್ವಂ ಮಾಯಯಾ ಸಂಭವಿಷ್ಯತಿ ॥ ೬೪ ॥**

**॥ ಬ್ರಹ್ಮೋವಾಚ ॥**

**ಇತ್ಯುಕ್ತ್ವಾ ಮಾಂ ಸ ಭಗವಾನ್ಸುಶ್ರೀಮಾನ್ನೀಲಲೋಹಿತಃ ।**
**ಸಗಣಃ ಪಶ್ಯತೋ ಮೇ ಹಿ ದ್ರುತಮಂತರ್ದಧೇ ಹರಃ ॥ ೬೫ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ರುದ್ರಾವತಾರಾವಿರ್ಭಾವ ವರ್ಣನೋ ನಾಮ ಪಂಚದಶೋऽಧ್ಯಾಯಃ**



---

೬೩. ಅಷ್ಟೇ ಅಲ್ಲ. ನಾನು ಗುರುರೂಪವನ್ನು ಧರಿಸಿ ದುಃಖಸಮುದ್ರದಲ್ಲಿ ಮುಳುಗುತ್ತಲಿರುವ ಪ್ರಜೆಗಳಿಗೆ ಒಳ್ಳೆಯ ಜ್ಞಾನವನ್ನುಪದೇಶಿಸಿ ಅವರನ್ನು ಉದ್ಧರಿಸುವೆನು.

೬೪. ಆದುದರಿಂದ ನೀನೇ ದುಃಖಮಯರಾದ ಪ್ರಜೆಗಳನ್ನು ಸೃಷ್ಟಿಸು. ನನ್ನ ಅನುಗ್ರಹದಿಂದ ನಿನಗೆ ಮಾಯೆಯ ಬಂಧವು ಆಗುವುದಿಲ್ಲ ಎಂದನು.

೬೫. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಹೇಳಿ ಭಗವಂತನೂ ಮಹಾಮಹಿಮನೂ ಆದ ಮಹಾದೇವನು ನಾನು ನೋಡುತ್ತಿರುವಂತೆಯೇ ತನ್ನ ಗಣಗಳೊಡನೆ ಅಂತರ್ಧಾನವಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ರುದ್ರಾವತಾರವರ್ಣನವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸೃಷ್ಟಿಖಂಡೇ

## ಷೋಡಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

**ಶಬ್ದಾದೀನಿ ಚ ಭೂತಾನಿ ಪಂಚೀಕೃತ್ವಾಹಮಾತ್ಮನಾ ।**
**ತೇಭ್ಯಃ ಸ್ಥೂಲಂ ನಭೋ ವಾಯುಂ ವಹ್ನಿಂ ಚೈವ ಜಲಂ ಮಹೀಂ ॥ ೧ ॥**

**ಪರ್ವತಾಂಶ್ಚ ಸಮುದ್ರಾಂಶ್ಚ ಕ್ಷಾದೀನಪಿ ಚ ನಾರದ ।**
**ಕಲಾದಿಯುಗಪರ್ಯಂತಾನ್ಕಾಲಾನನ್ಯಾನವಾಸೃಜಂ ॥ ೨ ॥**

**ಸೃಷ್ಟ್ಯಂತಾನಪರಾಂಶ್ಚಾಪಿ ನಾಹಂ ತುಷ್ಟೋಽಭವಂ ಮುನೇ ।**
**ತತೋ ಧ್ಯಾತ್ವಾ ಶಿವಂ ಸಾಂಬಂ ಸಾಧಕಾನಸೃಜಂ ಮುನೇ ॥ ೩ ॥**

---

### ಹದಿನಾರನೆಯ ಅಧ್ಯಾಯವು

೧-೨. ಬ್ರಹ್ಮನು ಹೇಳಿದನು:— ಓ ನಾರದ, ನಾನು ಸೂಕ್ಷ್ಮವಾದ ಶಬ್ದಾದಿ ಪಂಚತನ್ಮಾತ್ರಗಳನ್ನು ಪಂಚೀಕರಿಸಿ ಅವುಗಳಿಂದ ಸ್ಥೂಲವಾದ ಆಕಾಶವನ್ನೂ, ವಾಯುವನ್ನೂ, ತೇಜಸ್ಸನ್ನೂ, ಜಲವನ್ನೂ ಪೃಥ್ವಿಯನ್ನೂ ಸೃಷ್ಟಿಸಿ, ಬಳಿಕ ಪರ್ವತಗಳನ್ನೂ, ಸಮುದ್ರಗಳನ್ನೂ, ಮರಗಿಡಗಳನ್ನೂ, ಕಲಾ, ಕಾಷ್ಠಾ, ಮುಹೂರ್ತಗಳು ಮೊದಲುಗೊಂಡು ಚತುರ್ಯುಗಗಳವರೆಗೆ ಕಾಲಗಳನ್ನೂ ಸೃಷ್ಟಿಸಿದೆನು.

೩. ಇದಲ್ಲದೆ ಇನ್ನೂ ಕೆಲವನ್ನು ಸೃಷ್ಟಿಸುತ್ತಿದ್ದರೂ ನನಗೆ ಸಂತೋಷವಾಗಲಿಲ್ಲ. ಬಳಿಕ ಪಾರ್ವತೀ ಸಮೇತನಾದ ಶಿವನನ್ನು ನೆನೆದು ಈ ಸೃಷ್ಟಿಗೆ ಸಾಧಕರಾದ ಮರೀಚಿ ಮುಂತಾದವರನ್ನು ಸೃಷ್ಟಿಸಿದೆನು.

**ಮರೀಚಿಂ ಚ ಸ್ವನೇತ್ರಾಭ್ಯಾಂ ಹೃದಯಾದ್ಭೃಗುಮೇವ ಚ ।**
**ಶಿರಸೋಽಂಗಿರಸಂ ವ್ಯಾನಾತ್ಪುಲಹಂ ಮುನಿಸತ್ತಮಂ ॥ ೪ ॥**

**ಉದನಾಚ್ಚ ಪುಲಸ್ತ್ಯಂ ಹಿ ವಸಿಷ್ಠಂ ಚ ಸಮಾನತಃ ।**
**ಕ್ರತುಂ ತ್ವಪಾನಾಚ್ಛ್ರೋತ್ರಾಭ್ಯಾಮತ್ರಿಂ ದಕ್ಷಂ ಚ ಪ್ರಾಣತಃ ॥ ೫ ॥**

**ಅಸೃಜಂ ತ್ವಾಂ ತದೋತ್ಸಂಗಾಚ್ಛಾಯಾಯಾಃ ಕರ್ದಮಂ ಮುನಿಂ ।**
**ಸಂಕಲ್ಪಾದಸೃಜಂ ಧರ್ಮಂ ಸರ್ವಸಾಧನಸಾಧನಂ ॥ ೬ ॥**

**ಏವಮೇತಾನಹಂ ಸೃಷ್ಟ್ವಾ ಕೃತಾರ್ಥಸ್ಸಾಧಕೋತ್ತಮಾನ್ ।**
**ಅಭವಂ ಮುನಿಶಾರ್ದೂಲ ಮಹಾದೇವಪ್ರಸಾದತಃ ॥ ೭ ॥**

**ತತೋ ಮದಾಜ್ಞಯಾ ತಾತ ಧರ್ಮಃ ಸಂಕಲ್ಪಸಂಭವಃ ।**
**ಮಾನವಂ ರೂಪಮಾಪನ್ನಸ್ಸಾಧಕೈಸ್ತು ಪ್ರವರ್ತಿತಃ ॥ ೮ ॥**

---

೪-೬. ನನ್ನ ಕಣ್ಣುಗಳಿಂದ ಮರೀಚಿಯನ್ನೂ, ಹೃದಯದಿಂದ ಭೃಗುವನ್ನೂ, ಶಿರಸ್ಸಿನಿಂದ ಅಂಗಿರಸ್ಸನ್ನೂ, ವ್ಯಾನವೆಂಬ ವಾಯುವಿನಿಂದ ಮುನಿಶ್ರೇಷ್ಠನಾದ ಪುಲಹನನ್ನೂ, ಉದಾನವಾಯುವಿನಿಂದ ಪುಲಸ್ತ್ಯನನ್ನೂ, ಸಮಾನವಾಯುವಿನಿಂದ ವಸಿಷ್ಠನನ್ನೂ, ಅಪಾನವಾಯುವಿನಿಂದ ಕ್ರತುವನ್ನೂ ಸೃಷ್ಟಿಸಿದೆನು. ಹಾಗೆಯೇ, ಕಿವಿಗಳಿಂದ ಅತ್ರಿಯನ್ನೂ, ಪ್ರಾಣವಾಯುವಿನಿಂದ ದಕ್ಷನನ್ನೂ ತೊಡೆಯಿಂದ ನಿನ್ನನ್ನೂ ನೆರಳಿನಿಂದ ಕರ್ದಮನನ್ನೂ ಇಚ್ಛಾಮಾತ್ರದಿಂದ, ಸರ್ವಸಾಧನಗಳಿಗೂ ಸಾಧನವಾದ ಧರ್ಮಪುರುಷನನ್ನೂ ಸೃಷ್ಟಿಸಿದೆನು.

೭. ಈರೀತಿ ಸೃಷ್ಟಿಗೆ ಸಾಧಕರಾದ ಮರೀಚ್ಯಾದಿಗಳನ್ನು ಸೃಷ್ಟಿಸಿ ಆ ಮಹಾದೇವನ ಅನುಗ್ರಹದಿಂದ ಕೃತಕೃತ್ಯನಾದೆನು.

೮. ಆಮೇಲೆ, ನನ್ನ ಅಪ್ಪಣೆಯಂತೆ, ಸೃಷ್ಟಿಸಾಧಕವಾದ ಮರೀಚ್ಯಾದಿಗಳು, ನನ್ನ ಸಂಕಲ್ಪಸಂಭವನಾದ, ಮನುಷ್ಯರೂಪಧಾರಿಯಾದ ಧರ್ಮಪುರುಷನನ್ನು ಬೆಳೆಸಿಕೊಂಡುಬಂದರು ಎಂದರೆ ಧರ್ಮವನ್ನು ಅಭಿವೃದ್ಧಿಮಾಡಿದರು.

ತತೋಽಸೃಜಂ ಸ್ವಗಾತ್ರೇಭ್ಯೋ ವಿವಿಧೇಭ್ಯೋಽಮಿತಾನ್ಸುತಾನ್ ।
ಸುರಾಸುರಾದಿಕಾಂಸ್ತೇಭ್ಯೋ ದತ್ವಾ ತಾಂ ತಾಂ ತನುಂ ಮುನೇ ॥ ೯ ॥

ತತೋಽಹಂ ಶಂಕರೇಣಾಥ ಪ್ರೇರಿತೋಽಂತರ್ಗತೇನ ಹಿ ।
ದ್ವಿಧಾ ಕೃತ್ವಾತ್ಮನೋ ದೇಹಂ ದ್ವಿರೂಪಶ್ಚಾಭವಂ ಮುನೇ ॥ ೧೦ ॥

ಅರ್ಧೇನ ನಾರೀ ಪುರುಷಶ್ಚಾರ್ಧೇನ ಸಂತತೋ ಮುನೇ ।
ಸ ತಸ್ಯಾಮಸೃಜದ್ದ್ವಂದ್ವಂ ಸರ್ವಸಾಧನಮುತ್ತಮಂ ॥ ೧೧ ॥

ಸ್ವಾಯಂಭುವೋ ಮನುಸ್ತತ್ರ ಪುರುಷಃ ಪರಸಾಧನಂ ।
ಶತರೂಪಾಭಿಧಾ ನಾರೀ ಯೋಗಿನೀ ಸಾ ತಪಸ್ವಿನೀ ॥ ೧೨ ॥

ಸಾ ಪುನರ್ಮನುನಾ ತೇನ ಗೃಹೀತಾತೀವ ಶೋಭನಾ ।
ವಿವಾಹವಿಧಿನಾ ತಾತಾಸೃಜತ್ಸರ್ಗಂ ಸಮೈಥುನಂ ॥ ೧೩ ॥

---

೯. ಎಲೈ ಮುನಿಯೆ, ನನ್ನ ವಿವಿಧ ಅಂಗಗಳಿಂದ ಲೆಕ್ಕವಿಲ್ಲದಷ್ಟು, ದೇವತೆಗಳನ್ನೂ ರಾಕ್ಷಸರನ್ನೂ, ಅವರವರಿಗೆ ಉಚಿತವಾದ ಆಯಾ ದೇಹಗಳೊಡನೆ ಸೃಷ್ಟಿಸಿದೆನು.

೧೦. ಬಳಿಕ ನನ್ನ ಅಂತರಂಗದಲ್ಲಿಯೇ ನೆಲಸಿರುವ ಶಂಕರನಿಂದ ಪ್ರೇರಿತನಾಗಿ ನನ್ನ ದೇಹವನ್ನೇ ಎರಡಾಗಿ ಭಾಗಿಸಿಕೊಂಡು, ಎರಡು ರೂಪವನ್ನು ಧರಿಸಿದೆನು.

೧೧. ನನ್ನ ದೇಹದ ಒಂದು ಅರ್ಧಭಾಗವು ಸ್ತ್ರೀರೂಪವಾಗಿಯೂ, ಇನ್ನೊಂದರ್ಧಭಾಗವು ಪುರುಷರೂಪವಾಗಿಯೂ ಪರಿಣಮಿಸಿತು. ಆ ಸ್ತ್ರೀಪುರುಷರಿಬ್ಬರೂ ಕಲೆತು, ಈ ಸೃಷ್ಟಿಗೆ ಶ್ರೇಷ್ಠಕಾರಣವಾದ ಮಿಥುನವೊಂದನ್ನು ಸೃಷ್ಟಿಸಿದರು.

೧೨. ಆ ಸ್ತ್ರೀಪುರುಷರಲ್ಲಿ ಮಾನವ ಸೃಷ್ಟಿಗೆ ಮುಖ್ಯಕಾರಣನಾದ ಸ್ವಾಯಂಭುವಮನುವೇ ಪುರುಷನೆಂದೂ ಯೋಗನಿಷ್ಠಳೂ, ಮಹಾತಪಸ್ವಿನಿಯೂ ಆದ ಶತರೂಪೆಯೆಂಬುವಳೇ ಸ್ತ್ರೀಯೆಂದೂ ತಿಳಿ.

೧೩. ಮಿಗಿಲಾದ ಲಾವಣ್ಯದಿಂದ ಶೋಭಿಸುತ್ತಿರುವ ಆ ಶತರೂಪೆಯನ್ನು ಆ ಸ್ವಾಯಂಭುವಮನುವು ವಿವಾಹವಿಧಿಯಿಂದ ಪರಿಗ್ರಹಿಸಿ, ಸೃಷ್ಟಿಕಾರ್ಯದಲ್ಲಿ ತೊಡಗಿದನು. ಅದು ಮೊದಲುಗೊಂಡು ಸೃಷ್ಟಿಯು ಸ್ತ್ರೀಪುರುಷಸಂಯೋಗಕ್ರಮದಿಂದ ಆರಂಭವಾಯಿತು.

**ತಸ್ಯಾಂ ತೇನ ಸಮುತ್ಪನ್ನಾಸ್ತನಯಶ್ಚ ಪ್ರಿಯವ್ರತಃ ।**
**ತಥೈವೋತ್ತಾನಪಾದಶ್ಚ ತಥಾ ಕನ್ಯಾತ್ರಯಂ ಪುನಃ ॥ ೧೪ ॥**

**ಆಕೂತಿರ್ದೇವಹೂತಿಶ್ಚ ಪ್ರಸೂತಿರಿತಿ ವಿಶ್ರುತಾಃ ।**
**ಆಕೂತಿಂ ರುಚಯೇ ಪ್ರಾದಾತ್ಕರ್ದಮಾಯ ತು ಮಧ್ಯಮಾಂ ॥ ೧೫ ॥**

**ದದೌ ಪ್ರಸೂತಿಂ ದಕ್ಷಾಯೋತ್ತಾನಪಾದಾನುಜಾಂ ಸುತಾಂ ।**
**ತಾಸಾಂ ಪ್ರಸೂತಿಪ್ರಸವೈಸ್ಸರ್ವಂ ವ್ಯಾಪ್ತಂ ಚರಾಚರಂ ॥ ೧೬ ॥**

**ಆಕೂತ್ಯಾಂ ಚ ರುಚೇಶ್ಚಾಭೂದ್ದ್ವಂದ್ವಂ ಯಜ್ಞಶ್ಚ ದಕ್ಷಿಣಾ ।**
**ಯಜ್ಞಸ್ಯ ಜಜ್ಞಿರೇ ಪುತ್ರಾ ದಕ್ಷಿಣಾಯಾಂ ಚ ದ್ವಾದಶ ॥ ೧೭ ॥**

**ದೇವಹೂತ್ಯಾಂ ಕರ್ದಮಾಚ್ಚ ಬಹ್ವ್ಯೋ ಜಾತಾಸ್ಸುತಾ ಮುನೇ ।**
**ದಕ್ಷಾಜ್ಜಾತಾಶ್ಚತಸ್ರಶ್ಚ ತಥಾ ಪುತ್ರ್ಯಶ್ಚ ವಿಶಂತಿಃ ॥ ೧೮ ॥**

---

೧೪. ಆ ಸ್ವಾಯಂಭುವಮನುವಿಗೆ ಶತರೂಪೆಯಲ್ಲಿ ಪ್ರಿಯವ್ರತ, ಉತ್ತಾನಪಾದರೆಂಬ ಇಬ್ಬರು ಗಂಡು ಮಕ್ಕಳೂ, ಆಕೂತಿ, ದೇವಹೂತಿ, ಪ್ರಸೂತಿ ಎಂದು ಪ್ರಖ್ಯಾತರಾದ ಮೂರು ಮಂದಿ ಹೆಣ್ಣು ಮಕ್ಕಳೂ ಹುಟ್ಟಿದರು.

೧೫-೧೬. ಅವರಲ್ಲಿ ಆಕೂತಿಯನ್ನು ರುಚಿಯೆಂಬುವನಿಗೂ, ಮಧ್ಯಮಳಾದ ದೇವಹೂತಿಯನ್ನು ಕರ್ದಮಪ್ರಜಾಪತಿಗೂ, ಉತ್ತಾನಪಾದನ ತಂಗಿಯೂ ಕೊನೆಯವಳೂ ಆದ ಪ್ರಸೂತಿಯನ್ನು ದಕ್ಷನಿಗೂ, ಆ ಮನುವು ಮದುವೆಮಾಡಿಕೊಟ್ಟನು. ಅವರಲ್ಲಿ ಪ್ರಸೂತಿಯ ಸಂತಾನದಿಂದಲೇ ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ವ್ಯಾಪ್ತವಾಯಿತು.

೧೭. ರುಚಿಯೆಂಬುವನಿಗೆ ಆಕೂತಿಯಲ್ಲಿ ಯಜ್ಞ ಮತ್ತು ದಕ್ಷಿಣೆ ಎಂಬ ಅವಳಿಜವಳಿ ಮಕ್ಕಳು ಹುಟ್ಟಿದರು. ಆ ಯಜ್ಞನು ದಕ್ಷಿಣೆಯನ್ನು ಕೈಹಿಡಿದು ಆಕೆಯಲ್ಲಿ ಹನ್ನೆರಡು ಮಂದಿ ಗಂಡು ಮಕ್ಕಳನ್ನು ಪಡೆದನು.

೧೮. ದೇವಹೂತಿಯೆಂಬವಳಲ್ಲಿ ಕರ್ದಮಪ್ರಜಾಪತಿಗೆ ಅನೇಕ ಮಂದಿ ಹೆಣ್ಣು ಮಕ್ಕಳಾದರು. ದಕ್ಷನಿಗೂ ಪ್ರಸೂತಿಯಲ್ಲಿ ಇಪ್ಪತ್ತನಾಲ್ಕು ಮಂದಿ ಹೆಣ್ಣುಮಕ್ಕಳು ಹುಟ್ಟಿದರು.

ಧರ್ಮಾಯ ದತ್ತಾ ದಕ್ಷೇಣ ಶ್ರದ್ಧಾದ್ಯಾಸ್ತು ತ್ರಯೋದಶ ।
ಶೃಣು ತಾಸಾಂ ಚ ನಾಮಾನಿ ಧರ್ಮಸ್ತ್ರೀಣಾಂ ಮುನೀಶ್ವರ ॥ ೧೯ ॥

ಶ್ರದ್ಧಾ ಲಕ್ಷ್ಮೀರ್ಧೃತಿಸ್ತುಷ್ಟಿಃ ಪುಷ್ಟಿರ್ಮೇಧಾ ತಥಾ ಕ್ರಿಯಾ ।
ಬುದ್ಧಿರ್ಲಜ್ಜಾ ವಸುಃ ಶಾಂತಿಃ ಸಿದ್ಧಿಃ ಕೀರ್ತಿಸ್ತ್ರಯೋದಶ ॥ ೨೦ ॥

ತಾಭ್ಯಾಂ ಶಿಷ್ಟಾ ಯವೀಯಸ್ಯಾ ಏಕಾದಶ ಸುಲೋಚನಾಃ ।
ಖ್ಯಾತಿಸ್ಸತ್ಪಥಸಂಭೂತಿಃ ಸ್ಮೃತಿಃ ಪ್ರೀತಿಃ ಕ್ಷಮಾ ತಥಾ ॥ ೨೧ ॥

ಸನ್ನತಿಶ್ಚಾನುರೂಪಾ ಚ ಊರ್ಜಾ ಸ್ವಾಹಾ ಸ್ವಧಾ ತಥಾ ।
ಭೃಗುರ್ಭವೋ ಮರೀಚಿಶ್ಚ ತಥಾ ಚೈವಾಂಗಿರಾ ಮುನಿಃ ॥ ೨೨ ॥

ಪುಲಸ್ತ್ಯಃ ಪುಲಹಶ್ಚೈವ ಕ್ರತುಶ್ಚರ್ಷಿವರಸ್ತಥಾ ।
ಅತ್ರಿರ್ವಸಿಷ್ಠೋ ವಹ್ನಿಶ್ಚ ಪಿತರಶ್ಚ ಯಥಾಕ್ರಮಂ ॥ ೨೩ ॥

ಖ್ಯಾತಾಸ್ತಾ ಜಗೃಹುಃ ಕನ್ಯಾ ಭೃಗ್ವಾದ್ಯಾಸ್ಸಾಧಕಾ ವರಾಃ ।
ತತಸ್ಸಂಪೂರಿತಂ ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೨೪ ॥

---

೧೯-೨೦. ದಕ್ಷಪ್ರಜಾಪತಿಯು ಶ್ರದ್ಧೆಯೇ ಮೊದಲಾದ ಹದಿಮೂರು ಮಂದಿ ಹೆಣ್ಣು ಮಕ್ಕಳನ್ನು ನನ್ನ ಸಂಕಲ್ಪಮಾತ್ರದಿಂದ ಹುಟ್ಟಿದ ಧರ್ಮನಿಗೆ ಧಾರೆಯೆರೆದು ಕೊಟ್ಟನು. ಓ ನಾರದ, ಆ ಧರ್ಮನ ಹೆಂಡತಿಯರ ಹೆಸರುಗಳನ್ನು ಕೇಳು. ಶ್ರದ್ಧೆ, ಲಕ್ಷ್ಮಿ, ಧೃತಿ, ತುಷ್ಟಿ, ಪುಷ್ಟಿ, ಮೇಧೆ, ಕ್ರಿಯೆ, ಬುದ್ಧಿ, ಲಜ್ಜೆ, ವಸು, ಶಾಂತಿ, ಸಿದ್ಧಿ, ಕೀರ್ತಿ, ಎಂದು ಕ್ರಮವಾಗಿ ಅವರ ಹೆಸರುಗಳು.

೨೧-೨೪. ಅವರಿಗಿಂತಲೂ ಚಿಕ್ಕವರಾದ ಮನೋಹರವಾದ ಕಂಗಳಿಂದ ಕಂಗೊಳಿಸುತ್ತಿರುವ, ಖ್ಯಾತಿ, ಸತ್ಪಥಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮೆ, ಸನ್ನತಿ, ಅನುರೂಪೆ, ಊರ್ಜೆ, ಸ್ವಾಹೆ, ಸ್ವಧೆ ಎಂಬ ಉಳಿದ ಕನ್ಯೆಯರನ್ನು, ಕ್ರಮವಾಗಿ, ಭೃಗು, ಭವ, ಮರೀಚಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಋಷಿಶ್ರೇಷ್ಠನಾದ ಕ್ರತು, ಅತ್ರಿ, ವಸಿಷ್ಠ, ಅಗ್ನಿ ಪಿತೃಗಳು ಎಂಬ ಸೃಷ್ಟಿಯ ಮೂಲಪುರುಷರು ಪರಿಗ್ರಹಿಸಿದರು. ಚರಾಚರವಸ್ತುಗಳಿಂದ ನಿಬಿಡವಾದ ಮೂರು ಲೋಕಗಳೆಲ್ಲವೂ ಇವರ ಸಂತತಿಯವರಿಂದಲೇ ತುಂಬಿಹೋದುವು.

**ಏವಂ ಕರ್ಮಾನುರೂಪೇಣ ಪ್ರಾಣಿನಾಮಂಬಿಕಾಪತೇಃ ।**
**ಆಜ್ಞಯಾ ಬಹವೋ ಜಾತಾ ಅಸಂಖ್ಯಾತಾ ದ್ವಿಜರ್ಷಭಾಃ　　॥ ೨೫ ॥**

**ಕಲ್ಪಭೇದೇನ ದಕ್ಷಸ್ಯ ಷಷ್ಟಿಃ ಕನ್ಯಾಃ ಪ್ರಕೀರ್ತಿತಾಃ ।**
**ತಾಸಾಂ ದಶ ಚ ಧರ್ಮಾಯ ಶಶಿನೇ ಸಪ್ತವಿಂಶತಿಂ　　॥ ೨೬ ॥**

**ವಿಧಿನಾ ದತ್ತವಾನ್ದಕ್ಷಃ ಕಶ್ಯಪಾಯ ತ್ರಯೋದಶ ।**
**ಚತಸ್ರಃ ಪರರೂಪಾಯ ದದೌ ತಾರ್ಕ್ಷ್ಯಾಯ ನಾರದ　　॥ ೨೭ ॥**

**ಭೃಗ್ವಂಗಿರಃಕೃಶಾಶ್ವೇಭ್ಯೋ ದ್ವೇ ದ್ವೇ ಕನ್ಯೇ ಚ ದತ್ತವಾನ್ ।**
**ತಾಭ್ಯಸ್ತೇಭ್ಯಸ್ತು ಸಂಜಾತಾ ಬಹ್ವೀ ಸೃಷ್ಟಿಶ್ಚರಾಚರಾ　　॥ ೨೮ ॥**

**ತ್ರಯೋದಶಮಿತಾಸ್ತಸ್ಮೈ ಕಶ್ಯಪಾಯ ಮಹಾತ್ಮನೇ ।**
**ದತ್ತಾ ದಕ್ಷೇಣ ಯಾಃ ಕನ್ಯಾ ವಿಧಿವನ್ಮುನಿಸತ್ತಮ　　॥ ೨೯ ॥**

---

೨೫. ಈರೀತಿ ಪ್ರಾಣಿಗಳ ಕರ್ಮಾನುಗುಣವಾಗಿ ಶಿವನ ಆಜ್ಞೆಯಿಂದ ಲೆಕ್ಕವಿಲ್ಲದಷ್ಟು ಮಂದಿ ಅನೇಕ ದ್ವಿಜೋತ್ತಮರು ಹುಟ್ಟಿದರು.

೨೬-೨೭. ಎಲೈ ನಾರದನೇ, ಆ ದಕ್ಷನಿಗೆ ಕಲ್ಪಭೇಧದಿಂದ ಅರವತ್ತು ಮಂದಿ ಹೆಣ್ಣು ಮಕ್ಕಳು ಎಂದು ತಿಳಿ. ಅವರಲ್ಲಿ ಹತ್ತು ಮಂದಿಯನ್ನು ಧರ್ಮನಿಗೂ, ಚಂದ್ರನಿಗೆ ಇಪ್ಪತ್ತೇಳು ಮಂದಿಯನ್ನೂ, ಕಶ್ಯಪನಿಗೆ ಹದಿಮೂರು ಮಂದಿ ಹೆಣ್ಣು ಮಕ್ಕಳನ್ನೂ ವಿಧ್ಯುಕ್ತವಾಗಿ ಧಾರೆಯೆರೆದುಕೊಟ್ಟು ಪುನಃ ನಾಲ್ಕು ಮಂದಿ ಕನ್ಯೆಯರನ್ನು ಅತಿಶಯರೂಪಶಾಲಿಯಾದ ಗರುಡನಿಗೆ ಇತ್ತು ಮದುವೆಮಾಡಿಕೊಟ್ಟನು.

೨೮. ಭೃಗು, ಅಂಗಿರಸ್ಸು, ಕೃಶಾಶ್ವ ಎಂಬುವರಿಗೆ, ಇಬ್ಬಿಬ್ಬರಂತೆ ಒಟ್ಟು ಆರು ಮಂದಿ ಕನ್ಯೆಯರನ್ನು ಮದುವೆಮಾಡಿಕೊಟ್ಟನು, ಆ ದಕ್ಷನ ಹೆಣ್ಣುಮಕ್ಕಳಿಂದಲೂ, ಅಳಿಯಂದಿರಿಂದಲೂ ಚರಾಚರಾತ್ಮಕವಾದ ಬಹಳ ಸೃಷ್ಟಿಯು ನಡೆಯಿತು.

೨೯-೩೦. ದಕ್ಷನು, ಮಹಾತ್ಮನಾದ ಕಶ್ಯಪಪ್ರಜಾಪತಿಗೆ ಇತ್ತ ಹದಿಮೂರು ಮಂದಿ ಹೆಣ್ಣು ಮಕ್ಕಳ ಸಂತತಿಯಿಂದಲೇ ಸ್ಥಾವರ ಜಂಗಮಾತ್ಮಕವಾದ ಮೂರು

**ತಾಸಾಂ ಪ್ರಸೂತಿಭಿರ್ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಂ ।**
**ಸ್ಥಾವರಂ ಜಗಮಂ ಚೈವ ಶೂನ್ಯಂ ನೈವ ತು ಕಿಂಚನ ॥ ೩೦ ॥**

**ದೇವಾಶ್ಚ ಋಷಯಶ್ಚೈವ ದೈತ್ಯಾಶ್ಚೈವ ಪ್ರಜಜ್ಞಿರೇ ।**
**ವೃಕ್ಷಾಶ್ಚ ಪಕ್ಷಿಣಶ್ಚೈವ ಸರ್ವೇ ಪರ್ವತವೀರುಧಃ ॥ ೩೧ ॥**

**ದಕ್ಷಕನ್ಯಾಪ್ರಸೂತೈಶ್ಚ ವ್ಯಾಪ್ತಮೇವಂ ಚರಾಚರಂ ।**
**ಪಾತಾಲತಲಮಾರಭ್ಯ ಸತ್ಯಲೋಕಾವಧಿ ಧ್ರುವಂ ॥ ೩೨ ॥**

**ಬ್ರಹ್ಮಾಂಡಂ ಸಕಲಂ ವ್ಯಾಪ್ತಂ ಶೂನ್ಯಂ ನೈವ ಕದಾಚನ ।**
**ಏವಂ ಸೃಷ್ಟಿಃ ಕೃತಾ ಸಮ್ಯಗ್ಬ್ರಹ್ಮಣಾ ಶಂಭುಶಾಸನಾತ್ ॥ ೩೩ ॥**

**ಸತೀ ನಾಮ ತ್ರಿಶೂಲಾಗ್ರೇ ಸದಾ ರುದ್ರೇಣ ರಕ್ಷಿತಾ ।**
**ತಪೋಽರ್ಥ ನಿರ್ಮಿತಾ ಪೂರ್ವಂ ಶಂಭುನಾಂ ಸರ್ವವಿಷ್ಣುನಾ ॥ ೩೪ ॥**

---

ಲೋಕವೂ ವ್ಯಾಪಿಸಿಬಿಟ್ಟಿತು. ಚರಾಚರಾತ್ಮಕವಾದ ಯಾವುದೊಂದು ವಸ್ತುವೂ ಇದಲ್ಲದೆ ಬೇರೆಯಿಲ್ಲ.

೩೧-೩೩. ದೇವತೆಗಳೂ, ಋಷಿಗಳೂ, ದೈತ್ಯರೂ, ಮರಗಿಡಗಳೂ, ಪಕ್ಷಿಗಳೂ, ಬೆಟ್ಟಗುಡ್ಡಗಳೂ, ಬಳ್ಳಿಗಳೂ, ಆ ಕಶ್ಯಪನಿಗೆ ಆ ದಕ್ಷಪುತ್ರಿಯರಲ್ಲಿ ಹುಟ್ಟಿದರು. ಈರೀತಿ, ಪಾತಾಳದಿಂದ ಬ್ರಹ್ಮನಿವಾಸವಾದ ಸತ್ಯಲೋಕದವರೆಗೂ ಸಕಲ ಬ್ರಹ್ಮಾಂಡವೂ, ದಕ್ಷಕನ್ಯೆಯರ ಮಕ್ಕಳಿಂದ ತುಂಬಿಹೋಯಿತು. ಯಾವಾಗಲೂ, ಆ ಸಂತತಿಯವರಿಂದ ಈ ಚರಾಚರಾತ್ಮಕವಾದ ಪ್ರಪಂಚವು ಶೂನ್ಯವಾಗಿರುವುದನ್ನು ನಾನು ಕಾಣೆನು. ಹೀಗೆ ಬ್ರಹ್ಮನು ಶಿವನ ಶಾಸನದಂತೆ ತನ್ನ ಸೃಷ್ಟಿಕಾರ್ಯವನ್ನು ಚೆನ್ನಾಗಿ ನಿರ್ವಹಿಸಿದನು.

೩೪. ರುದ್ರನು ಯಾವಾಗಲೂ, ತ್ರಿಶೂಲಾಗ್ರದಲ್ಲಿ ಇಟ್ಟು ರಕ್ಷಿಸುತ್ತಿರುವ ಸತಿಯೆಂಬುವಳನ್ನು, ಸರ್ವವ್ಯಾಪಕನಾದ ಆ ಶಂಭುವು ತಪಸ್ಸನ್ನು ಮಾಡುತ್ತಿರಲೆಂದು ಮೊದಲೇ ನಿರ್ಮಿಸಿದ್ದನು.

**ಸೈವ ದಕ್ಷಾತ್ಸಮುದ್ಭೂತಾ ಲೋಕಕಾರ್ಯಾರ್ಥಮೇವ ಚ ।**
**ಲೀಲಾಂ ಚಕಾರ ಬಹುಶೋ ಭಕ್ತೋದ್ಧರಣಹೇತವೇ ॥ ೩೫ ॥**

**ವಾಮಾಂಗೋ ಯಸ್ಯ ವೈಕುಂಠೋ ದಕ್ಷಿಣಾಂಗೋಽಹಮೇವ ಚ ।**
**ರುದ್ರೋ ಹೃದಯಜೋ ಯಸ್ಯ ತ್ರಿವಿಧಸ್ತು ಶಿವಃ ಸ್ಮೃತಃ ॥ ೩೬ ॥**

**ಅಹಂ ವಿಷ್ಣುಶ್ಚ ರುದ್ರಶ್ಚ ಗುಣಾಸ್ತ್ರಯ ಉದಾಹೃತಾಃ ।**
**ಸ್ವಯಂ ಸದಾ ನಿರ್ಗುಣಶ್ಚ ಪರಬ್ರಹ್ಮಾವ್ಯಯಶ್ಶಿವಃ ॥ ೩೭ ॥**

**ವಿಷ್ಣುಸ್ಸತ್ವಂ ರಜೋಽಹಂ ಚ ತಮೋ ರುದ್ರ ಉದಾಹೃತಃ ।**
**ಲೋಕಾಚಾರತ ಇತ್ಯೇವಂ ನಾಮತೋ ವಸ್ತುತೋಽನ್ಯಥಾ ॥ ೩೮ ॥**

**ಅಂತಸ್ತಮೋ ಬಹಿಸ್ಸತ್ತ್ವೋ ವಿಷ್ಣೂರುದ್ರಸ್ತಥಾ ಮತಃ ।**
**ಅಂತಸ್ಸತ್ತ್ವಸ್ತಮೋಬಾಹ್ಯೋ ರಜೋಽಹಂ ಸರ್ವಥಾ ಮುನೇ ॥ ೩೯ ॥**

---

೩೫. ಅವಳೇ ಪ್ರಜೆಗಳಕಾರ್ಯದ ಸಲುವಾಗಿ ದಕ್ಷನ ಮಗಳಾಗಿ ಹುಟ್ಟಿದಳು ಭಕ್ತರನ್ನು ಉದ್ಧರಿಸಲೋಸುಗವೇ ಬಗೆಬಗೆಯಾದ ಲೀಲೆಗಳನ್ನು ವಹಿಸಿದಳು.

೩೬. ಶ್ರೀಹರಿಯು ಎಡಭಾಗವೂ, ನಾನು ಬಲಭಾಗವೂ, ರುದ್ರನು ಹೃದಯವೂ ಆಗಿರುವ ಆ ಶಿವನು ಮೂರು ಬಗೆಯಾಗಿರುವನೆಂದು ತಿಳಿ.

೩೭. ನಾನೂ ವಿಷ್ಣುವೂ ರುದ್ರನೂ ಮೂವರೂ ಗುಣಾತ್ಮಕರೆಂದು ತಿಳಿ. ಪರಬ್ರಹ್ಮಸ್ವರೂಪನೂ ನಾಶರಹಿತನೂ ಆದ ಶಿವನು ಯಾವಾಗಲೂ ನಿರ್ಗುಣನೆಂದೇ ತಿಳಿ.

೩೮. ವಿಷ್ಣುವು ಸತ್ತ್ವಗುಣವೆಂದೂ, ನಾನು ರಜೋಗುಣವೆಂದೂ ರುದ್ರನು ತಮೋಗುಣವೆಂದೂ ಉದಾಹರಿಸಲ್ಪಟ್ಟಿರುವೆವು. ಲೋಕವ್ಯವಹಾರ ಕ್ರಮದಿಂದ ಹೀಗೆ ಹೆಸರುಗಳು ಆದರೆ ವಸ್ತುಸ್ಥಿತಿ ಬೇರೆ.

೩೯. ವಿಷ್ಣುವು ಒಳಗೆ ತಮೋಮಯನಾಗಿಯೂ ಹೊರಗೆ ಸತ್ವಮಯನಾಗಿಯೂ ತೋರುವನು. ನಾನು ಒಳಗೂ ಹೊರಗೂ ಕೇವಲ ರಜೋಮಯನೇ,

ರಾಜಸೀ ಚ ಸ್ವರಾ ದೇವೀ ಸತ್ತ್ವರೂಪಾ ತು ಸಾ ಸತೀ ।
ಲಕ್ಷ್ಮೀಸ್ತಮೋಮಯೀ ಜ್ಞೇಯಾ ತ್ರಿರೂಪಾ ಚ ಶಿವಾ ಪರಾ ॥ ೪೦ ॥

ಏವಂ ಶಿವಾ ಸತೀ ಭೂತ್ವಾ ಶಂಕರೇಣ ವಿವಾಹಿತಾ ।
ಪಿತುರ್ಯಜ್ಞೇ ತನುಂ ತ್ಯಕ್ತ್ವಾ ನಾದಾತ್ತಾಂ ಸ್ವಪದಂ ಯಯೌ ॥ ೪೧ ॥

ಪುನಶ್ಚ ಪಾರ್ವತೀ ಜಾತಾ ದೇವಪ್ರಾರ್ಥನಯಾ ಶಿವಾ ।
ತಪಃ ಕೃತ್ವಾ ಸುವಿಪುಲಂ ಪುನಶ್ಶಿವಮುಪಾಗತಾ ॥ ೪೨ ॥

ತಸ್ಯಾ ನಾಮಾನ್ಯನೇಕಾನಿ ಜಾತಾನಿ ಚ ಮುನೀಶ್ವರ ।
ಕಾಲಿಕಾ ಚಂಡಿಕಾ ಭದ್ರಾ ಚಾಮುಂಡಾ ವಿಜಯಾ ಜಯಾ ॥ ೪೩ ॥

ಜಯಂತೀ ಭದ್ರಕಾಲೀ ಚ ದುರ್ಗಾ ಭಗವತೀತಿ ಚ ।
ಕಾಮಾಖ್ಯಾ ಕಾಮದಾ ಹ್ಯಂಬಾ ಮೃಡಾನೀ ಸರ್ವಮಂಗಲಾ ॥ ೪೪ ॥

---

೪೦. ಅದರಂತೆಯೇ ಸರಸ್ವತಿಯು ರಜೋಗುಣವುಳ್ಳವಳೆಂತಲೂ, ಸತೀದೇವಿಯು ಸತ್ತ್ವಮಯಿಯೆಂದೂ, ಲಕ್ಷ್ಮಿಯು ತಮೋಗುಣವುಳ್ಳವಳೆಂದೂ, ಪರಮೇಶ್ವರಿಯಾದ ಶಿವೆಯು ಈ ಮೂವರ ರೂಪವುಳ್ಳವಳೆಂತಲೂ ತಿಳಿ.

೪೧. ಈರೀತಿ ಶಿವೆಯೇ ಸತಿಯೆನಿಸಿ ಶಂಕರನ ಅರ್ಧಾಂಗಿಯಾದಳು. ತನ್ನ ತಂದೆಯಾದ ದಕ್ಷನ ಯಜ್ಞದಲ್ಲಿ ಆ ದೇಹವನ್ನು ತೊರೆದುಬಿಟ್ಟು ಮತ್ತೆ ಅದನ್ನು ಸ್ವೀಕರಿಸದೆ ತನ್ನ ಸ್ಥಾನಕ್ಕೆ ತೆರಳಿದಳು.

೪೨. ದೇವತೆಗಳ ಪ್ರಾರ್ಥನೆಯಂತೆ ಆ ಶಿವಯೇ ಪರ್ವತರಾಜನ ಪುತ್ರಿಯಾಗಿ ಅವತರಿಸಿ, ಬಹು ದೊಡ್ಡ ತಪಸ್ಸನ್ನು ಮಾಡಿ ಮರಳಿ ಶಿವನನ್ನೇ ಪತಿಯನ್ನಾಗಿ ಹೊಂದಿದಳು.

೪೩-೪೪. ಅವಳಿಗೆ ಅನೇಕ ಹೆಸರುಗಳಾದುವು. ಅವು ಯಾವುವೆಂದರೆ ಕಾಲಿಕಾ, ಚಂಡಿಕಾ, ಭದ್ರಾ, ಚಾಮುಂಡಾ, ವಿಜಯಾ, ಜಯಾ, ಜಯಂತೀ, ಭದ್ರಕಾಲೀ, ದುರ್ಗಾ, ಭಗವತೀ, ಕಾಮಾಖ್ಯಾ, ಕಾಮದಾ, ಅಂಬಾ, ಮೃಡಾಣೀ, ಸರ್ವಮಂಗಳಾ ಮುಂತಾದುವುಗಳು.

**ನಾಮಧೇಯಾನ್ಯನೇಕಾನಿ ಭುಕ್ತಿಮುಕ್ತಿಪ್ರದಾನಿ ಚ ।**
**ಗುಣಕರ್ಮಾನುರೂಪಾಣಿ ಪ್ರಾಯಶಸ್ತತ್ರ ಪಾರ್ವತೀ ॥ ೪೫ ॥**

**ಗುಣಮಯ್ಯಸ್ತಥಾ ದೇವ್ಯೋ ದೇವಾ ಗುಣಮಯಾಸ್ತ್ರಯಃ ।**
**ಮಿಲಿತ್ವಾ ವಿವಿಧಂ ಸೃಷ್ಟೇಶ್ಚಕ್ರುಸ್ತೇ ಕಾರ್ಯಮುತ್ತಮಂ ॥ ೪೬ ॥**

**ಏವಂ ಸೃಷ್ಟಿಪ್ರಕಾರಾಸ್ತೇ ವರ್ಣಿತೋ ಮುನಿಸತ್ತಮ ।**
**ಶಿವಾಜ್ಞಯಾ ವಿರಚಿತೋ ಬ್ರಹ್ಮಾಂಡಸ್ಯ ಮಯಾಽಖಿಲಃ ॥ ೪೭ ॥**

**ಪರಂ ಬ್ರಹ್ಮ ಶಿವಃ ಪ್ರೋಕ್ತಸ್ತಸ್ಯ ರೂಪಾಸ್ತ್ರಯಃ ಸುರಾಃ ।**
**ಅಹಂ ವಿಷ್ಣುಶ್ಚ ರುದ್ರಶ್ಚ ಗುಣಭೇದಾನುರೂಪತಃ ॥ ೪೮ ॥**

**ಶಿವಯಾ ರಮತೇ ಸ್ವೈರಂ ಶಿವಲೋಕೇ ಮನೋರಮೇ ।**
**ಸ್ವತಂತ್ರಃ ಪರಮಾತ್ಮಾ ಹಿ ನಿರ್ಗುಣಸ್ಸಗುಣೋಽಪಿ ವೈ ॥ ೪೯ ॥**

---

೪೫. ಭುಕ್ತಿಯನ್ನೂ ಮುಕ್ತಿಯನ್ನೂ ನೀಡುವ ಇಂತಹ ಹೆಸರುಗಳು, ಆಕೆಯ ಗುಣಗಳಿಗೂ ಅನುರೂಪವಾಗಿ ಅನೇಕವಾಗಿವೆ. ಮುಕ್ಕಾಲುಪಾಲು ಪಾರ್ವತೀ ಎಂಬ ಹೆಸರೇ ಹೆಚ್ಚು ಬಳಕೆ.

೪೬. ಸತ್ತ್ವರಜಸ್ತಮೋಗುಣಮಯರಾದ ಈ ಮೂವರು ದೇವಿಯರೂ, ಬ್ರಹ್ಮ ವಿಷ್ಣು ಮಹೇಶ್ವರರೂ ಸೇರಿ ಸೃಷ್ಟಿಕಾರ್ಯವನ್ನು ಚೆನ್ನಾಗಿ ನಡೆಸಿದರು.

೪೭. ಓ ಮುನಿಶ್ರೇಷ್ಠ, ಶಿವನ ಅಪ್ಪಣೆಯಂತೆ ನಾನು ಬ್ರಹ್ಮಾಂಡವೆಲ್ಲವನ್ನೂ ಸೃಷ್ಟಿಸಿದ ಕ್ರಮವನ್ನು ಈಗ ನಿನಗೆ ತಿಳಿಸಿದೆನು.

೪೮. ಶಿವನೇ ಪರಬ್ರಹ್ಮನೆಂದು ಹೇಳಲ್ಪಟ್ಟಿರುವನು. ಈ ಮೂವರು ತ್ರಿಮೂರ್ತಿಗಳೂ ಆತನ ರೂಪಗಳೆಂದು ತಿಳಿ. ಗುಣಭೇದದಿಂದ ನಾನೂ, ವಿಷ್ಣುವೂ, ಮಹೇಶ್ವರನೂ ಎನಿಸಿದೆವು ಎಂದು ಭಾವಿಸು.

೪೯-೫೦. ಸ್ವತಂತ್ರನೂ, ಪರಮಪುರುಷನೂ, ಗುಣಾತೀತನೂ, ಆದ ಶಿವನು ಶಿವೆಯೊಡನೆ ಶಿವಲೋಕದಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತಿರುವನು. ಸಗುಣನಾದರೂ, ರುದ್ರನು ಶಿವನ ಪೂರ್ಣಾವತಾರವಾದುದರಿಂದ ಆತನನ್ನು ಸಾಕ್ಷಾಚ್ಛಿವ

ತಸ್ಯ ಪೂರ್ಣಾವತಾರೋ ಹಿ ರುದ್ರಸ್ಸಾಕ್ಷಾಚ್ಛಿವಃ ಸ್ಮೃತಃ ।
ಕೈಲಾಸೇ ಭವನಂ ರಮ್ಯಂ ಪಂಚವಕ್ತ್ರಶ್ಚಕಾರ ಹ ॥
ಬ್ರಹ್ಮಾಂಡಸ್ಯ ತಥಾ ನಾಶೇ ತಸ್ಯ ನಾಶೋಽಸ್ತಿ ನೈ ನ ಹಿ ॥ ೫೦ ॥

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಬ್ರಹ್ಮನಾರದಸಂವಾದೇ ಸೃಷ್ಟಿವರ್ಣನೋ ನಾಮ ಷೋಡಶೋಽಧ್ಯಾಯಃ**



---

ನೆಂದೇ ಭಾವಿಸಬೇಕು. ಐದು ಮುಖಗಳುಳ್ಳ ಆ ಮಹೇಶ್ವರನಿಗೆ ಕೈಲಾಸದಲ್ಲಿ ಬಹು ಮನೋಹರವಾದ ವಾಸಸ್ಥಾನವಿರುವುದು. ಬ್ರಹ್ಮಾಂಡಹೆಲ್ಲವೂ ಹಾಳಾಗಿ ಹೋದರೂ ಅದಕ್ಕೆ ನಾಶವೆಂಬುದೇ ಇಲ್ಲ.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯ ಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಬ್ರಹ್ಮನಾರದಸಂವಾದದಲ್ಲಿ ಸೃಷ್ಟಿವರ್ಣನವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸೃಷ್ಟಿಖಂಡೇ

## ಸಪ್ತದಶೋಽಧ್ಯಾಯಃ

---

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಬ್ರಹ್ಮಣಸ್ಸ ತು ನಾರದಃ ।
ಪುನಃ ಪಪ್ರಚ್ಛ ತಂ ನತ್ವಾ ವಿನಯೇನ ಮುನೀಶ್ವರಾಃ ॥ ೧ ॥

॥ ನಾರದ ಉವಾಚ ॥

ಕದಾ ಗತೋ ಹಿ ಕೈಲಾಸಂ ಶಂಕರೋ ಭಕ್ತವತ್ಸಲಃ ।
ಕ್ವ ವಾ ಸಖಿತ್ವಂ ತಸ್ಯಾಸೀತ್ಕುಬೇರೇಣ ಮಹಾತ್ಮನಾ ॥ ೨ ॥

---

## ಹದಿನೇಳನೆಯ ಅಧ್ಯಾಯವು

೧. ಸೂತಪುರಾಣಿಕನು ಶೌನಕಾದಿಗಳನ್ನು ಕುರಿತು ಇಂತೆಂದನು. ಈರೀತಿ ಬ್ರಹ್ಮನು ಆಡಿದ ಮಾತನ್ನು ಕೇಳಿ ನಾರದನು ಬ್ರಹ್ಮನನ್ನು ವಿನಯದಿಂದ ಮತ್ತೊಮ್ಮೆ ನಮಸ್ಕರಿಸಿ ಕೇಳಿದನು.

೨-೩. ಭಕ್ತವತ್ಸಲನಾದ ಶಂಕರನು ಕೈಲಾಸಕ್ಕೆ ಹೋದುದಾವಾಗ? ಮಹಾತ್ಮನಾದ ಕುಬೇರನೊಡನೆ ಆತನಿಗೆ ಸ್ನೇಹವು ಎಲ್ಲಿ ಉಂಟಾಯಿತು? ಪರಿಪೂರ್ಣ

**ಕಿಂ ಚಕಾರ ಹರಸ್ತತ್ರ ಪರಿಪೂರ್ಣಃ ಶಿವಾಕೃತಿಃ ।**
**ಏತತ್ಸರ್ವಂ ಸಮಾಚಕ್ಷ್ವ ಪರಂ ಕೌತೂಹಲಂ ಮಮ ॥ ೩ ॥**

**॥ ಬ್ರಹ್ಮೋವಾಚ ॥**

**ಶೃಣು ನಾರದ ವಕ್ಷ್ಯಾಮಿ ಚರಿತಂ ಶಶಿಮೌಲಿನಃ ।**
**ಯಥಾ ಜಗಾಮ ಕೈಲಾಸಂ ಸಖಿತ್ವಂ ಧನದಸ್ಯ ಚ ॥ ೪ ॥**

**ಆಸೀತ್ಕಾಂಪಿಲ್ಯನಗರೇ ಸೋಮಯಾಜಿಕುಲೋದ್ಭವಃ ।**
**ದೀಕ್ಷಿತೋ ಯಜ್ಞದತ್ತಾಖ್ಯೋ ಯಜ್ಞವಿದ್ಯಾವಿಶಾರದಃ ॥ ೫ ॥**

**ವೇದವೇದಾಂಗವಿತ್ಪ್ರಾಜ್ಞೋ ವೇದಾಂತಾದಿಷು ದಕ್ಷಿಣಃ ।**
**ರಾಜಮಾನ್ಯೋऽಥ ಬಹುಧಾ ವದಾನ್ಯಃ ಕೀರ್ತಿಭಾಜನಃ ॥ ೬ ॥**

---

ಶಿವಸ್ವರೂಪನಾದ ಹರನು ಅಲ್ಲಿ ಏನುಮಾಡಿದನು ? ಇದೆಲ್ಲವನ್ನೂ ಕೇಳಬೇಕೆಂದು ನನಗೆ ಬಹಳ ಕುತೂಹಲವಾಗಿದೆ. ಇದೆಲ್ಲವನ್ನೂ ನನಗೆ ತಿಳಿಯಪಡಿಸು ಎಂದನು.

೪. ನಾರದನ ಮಾತನ್ನು ಕೇಳಿ ಬ್ರಹ್ಮನಿಂತೆಂದನು—ನಾರದ, ಕೇಳು, ಶಿರಸ್ಸಿನಲ್ಲಿ ಚಂದ್ರಲೇಖೆಯನ್ನು ತಳೆದ ಆ ಶಿವನ ಚರಿತ್ರವನ್ನು ಹೇಳುತ್ತೇನೆ. ಆತನು ಕೈಲಾಸಕ್ಕೆ ಹೋದ ಬಗೆಯನ್ನೂ ಕುಬೇರನೊಡನೆ ಆತನಿಗೆ ಸಖ್ಯವಾದ ರೀತಿಯನ್ನೂ ನಿನಗೆ ವಿವರಿಸುವೆನು.

೫. ಕಾಂಪಿಲ್ಯವೆಂಬ ಪಟ್ಟಣದಲ್ಲಿ ಸೋಮಯಾಜಿಗಳ ವಂಶದಲ್ಲಿ ಹುಟ್ಟಿದ ಯಜ್ಞದತ್ತನೆಂಬ ಒಬ್ಬ ದೀಕ್ಷಿತನಿದ್ದನು. ಆತನು ಯಜ್ಞವಿದ್ಯೆ (ಶ್ರೌತಶಾಸ್ತ್ರ) ಯಲ್ಲಿ ಪಾರಂಗತನಾಗಿದ್ದನು.

೬. ಆತನು ಚತುರ್ವೇದಗಳನ್ನೂ ಶಿಕ್ಷಾದಿ ವೇದಾಂಗಗಳನ್ನೂ ಚೆನ್ನಾಗಿ ಬಲ್ಲವನಾಗಿದ್ದನು. ವೇದಾಂತ ಮೊದಲಾದ ತತ್ತ್ವಶಾಸ್ತ್ರಗಳಲ್ಲಿ ಬಹು ಸಮರ್ಥನು. ಅಲ್ಲದೆ ಆತನು ರಾಜಮಾನ್ಯನೂ ಬಹಳವಾಗಿ ದಾನಮಾಡುವವನೂ ಆಗಿದ್ದನು. ಆತನ ಕೀರ್ತಿಯು ಎಲ್ಲೆಲ್ಲಿಯೂ ಹರಡಿತ್ತು. ಆತನು ಅಗ್ನಿಶುಶ್ರೂಷೆಯಲ್ಲೂ ವೇದಾಧ್ಯಯನದಲ್ಲೂ ಬಹುವಾಗಿ ಆಸಕ್ತಿಯನ್ನು ವಹಿಸಿದ್ದನು.

ಅಗ್ನಿಶುಶ್ರೂಷಣರತೋ ವೇದಾಧ್ಯಯನತತ್ಪರಃ ।
ಸುಂದರೋ ರಮಣೀಯಾಂಗಶ್ಚಂದ್ರಬಿಂಬಸಮಾಕೃತಿಃ ॥ ೭ ॥

ಕೃತೋಪನಯನಸ್ಸೋಽಷ್ಟೌ ವಿದ್ಯಾಂ ಜಗ್ರಾಹ ಭೂರಿಶಃ ।
ಅಥ ಪಿತ್ರಾನಭಿಜ್ಞಾತೋ ದ್ಯೂತಕರ್ಮರತೋಽಭವತ್ ॥ ೮ ॥

ಆದಾಯಾದಾಯ ಬಹುಶೋ ಧನಂ ಮಾತುಸ್ಸಕಾಶತಃ ।
ಸಮುದಾದ್ಯೂತಕಾರೇಭ್ಯೋ ಮೈತ್ರೀಂ ತೈಶ್ಚ ಚಕಾರ ಸಃ ॥ ೯ ॥

ಸಂತ್ಯಕ್ತಬ್ರಾಹ್ಮಣಾಚಾರಃ ಸಂಧ್ಯಾಸ್ನಾನಪರಾಙ್ಮುಖಃ ।
ನಿಂದಕೋ ವೇದಶಾಸ್ತ್ರಾಣಾಂ ದೇವಬ್ರಾಹ್ಮಣನಿಂದಕಃ ॥ ೧೦ ॥

ಸ್ಮೃತ್ಯಾಚಾರವಿಹೀನಸ್ತು ಗೀತಾವಾದ್ಯವಿನೋದಭಾಕ್ ।
ನಟಪಾಖಂಡಭಾಂಡೈಸ್ತು ಬದ್ಧಪ್ರೇಮಪರಂಪರಃ ॥ ೧೧ ॥

---

೭. ಆತನಿಗೆ ಸುಂದರನೂ, ಮನೋಹರವಾದ ಅವಯವಗಳುಳ್ಳವನೂ, ಚಂದ್ರಬಿಂಬವನ್ನು ಹೋಲುವವನೂ ಆದ ಗುಣನಿಧಿಯೆಂಬ ಮಗನಿದ್ದನು.

೮. ಅವನು ಉಪನಯನ ಸಂಸ್ಕಾರವನ್ನು ಪಡೆದಮೇಲೆ ಎಂಟು ವಿದ್ಯೆಗಳನ್ನೂ ಚೆನ್ನಾಗಿ ಕಲಿತನು. ಆಮೇಲೆ ತಂದೆಗೆ ತಿಳಿಯದಂತೆಯೇ ಜೂಜಿಗಾರಿಕೆಯಲ್ಲಿ ನಿಸ್ಸೀಮನಾದನು.

೯. ಅವನು ತಾಯಿಯ ಬಳಿಯಿಂದ ಹೆಚ್ಚು ಹೆಚ್ಚು ಹಣವನ್ನು ತೆಗೆದುಕೊಂಡುಹೋಗಿ ಜೂಜುಗಾರರಿಗೆ ಕೊಡುತ್ತಾ ಅವರೊಡನೆ ಸ್ನೇಹವನ್ನು ಬೆಳಸಿದನು.

೧೦-೧೧. ಅವನು ಸಂಧ್ಯಾವಂದನೆಗಳೊಂದನ್ನೂ ಮಾಡದೆ ಬ್ರಾಹ್ಮಣರಿಗುಚಿತವಾದ ಆಚಾರಗಳನ್ನು ಬಿಟ್ಟುಬಿಟ್ಟು, ವೇದಶಾಸ್ತ್ರಗಳನ್ನೂ ದೇವಬ್ರಾಹ್ಮಣರನ್ನೂ ಅಲ್ಲಗಳೆಯುತ್ತಾ, ಸ್ಮೃತಿವಿಹಿತವಾದ ನಡೆವಳಿಕೆಯನ್ನು ನಿರ್ಲಕ್ಷಿಸಿ, ಯಾವಾಗಲೂ ಸಂಗೀತವನ್ನು ಹಾಡುತ್ತಲೂ, ವಾದ್ಯಗಳನ್ನು ನುಡಿಸುತ್ತಲೂ, ಕೋಲಾಹಲ ಮುಂತಾದ ವಿನೋದಗಳಲ್ಲಿ ಭಾಗವಹಿಸುತ್ತಲೂ, ನಟರು ಪಾಷಂಡರು ಇವರೊಡನೆಯೂ, ಪುಂಡುಪೋಕರಿಗಳೊಂದಿಗೂ, ಬಲವಾಗಿ ಸ್ನೇಹವನ್ನು ಗಳಿಸುತ್ತಾ, ತಾಯಿಯು ಎಷ್ಟು ಹೇಳಿದರೂ ಕಿವಿಯ ಮೇಲೆಯೇ ಹಾಕಿಕೊಳ್ಳದೆ, ತಂದೆಗೆ ಮುಖವನ್ನೂ ತೋರಿಸದೆ ಇದ್ದನು.

ಪ್ರೇರಿತೋಽಪಿ ಜನನ್ಯಾ ಸ ನ ಯಯೌ ಪಿತುರಂತಿಕಂ ।
ಗೃಹಕಾರ್ಯಾಂತರವ್ಯಾಪ್ತೋ ದೀಕ್ಷಿತೋ ದೀಕ್ಷಿತಾಯಿನೀಂ ॥ ೧೨ ॥

ಯದಾ ಯದೈವ ತಾಂ ಪೃಚ್ಛೇದಯಂ ಗುಣನಿಧಿಸ್ಸುತಃ ।
ನ ದೃಶ್ಯತೇ ಮಯಾ ಗೇಹೇ ಕಲ್ಯಾಣಿ ವಿದಧಾತಿ ಕಿಂ ॥ ೧೩ ॥

ತದಾ ತದೇತಿ ಸಾ ಬ್ರೂಯಾದಿದಾನೀಂ ಸ ಬಹಿರ್ಗತಃ ।
ಸ್ನಾತ್ವಾ ಸಮರ್ಚ್ಯ ವೈ ದೇವಾನೇತಾವಂತಮನೇಹಸಂ ॥ ೧೪ ॥

ಅಧೀತ್ಯಾಧ್ಯಯನಾರ್ಥಂ ಸ ದ್ವಿತ್ರೈರ್ಮಿತ್ರೈಸ್ಸಮಂ ಯಯೌ ।
ಏಕಪುತ್ರೇತಿ ತನ್ಮಾತಾ ಪ್ರತಾರಯತಿ ದೀಕ್ಷಿತಂ ॥ ೧೫ ॥

ನ ತತ್ಕರ್ಮ ಚ ತದ್ವೃತ್ತಂ ಕಿಂಚಿದ್ವೇತ್ತಿ ಸ ದೀಕ್ಷಿತಃ ।
ಸರ್ವಂ ಕೇಶಾಂತಕರ್ಮಾಸ್ಯ ಚಕ್ರೇ ವರ್ಷೇಽಥ ಷೋಡಶೇ ॥ ೧೬ ॥

ಅಥೋ ಸ ದೀಕ್ಷಿತೋ ಯಜ್ಞದತ್ತಃ ಪುತ್ರಸ್ಯ ತಸ್ಯ ಚ ।
ಗೃಹೋಕ್ತೇನ ವಿಧಾನೇನ ಪಾಣಿಗ್ರಾಹಮಕಾರಯತ್ ॥ ೧೭ ॥

---

೧೨-೧೫. ಇತರ ಗೃಹಕೃತ್ಯಗಳಲ್ಲೇ ಮಗ್ನನಾಗಿರುತ್ತಿದ್ದ ಆ ದೀಕ್ಷಿತನು ಒಂದು ದಿನ ತನ್ನ ಪತ್ನಿಯನ್ನು ಕುರಿತು ಎಲೈ ಮಂಗಳಾಂಗಿ, ನಮ್ಮ ಮಗು ಗುಣನಿಧಿಯೆಲ್ಲಿ? ನಾನು ಅವನನ್ನು ಮನೆಯಲ್ಲೇ ಕಾಣೆನಲ್ಲಾ? ಏನು ಮಾಡುತ್ತಿದಾನೆ ಎಂದು ಕೇಳಿದಾಗಲೆಲ್ಲಾ ಆ ದೀಕ್ಷಿತಪತ್ನಿಯು ಎಲೈ ನಾಥನೇ ಈಗತಾನೇ ಅವನು ಹೊರಗೆ ಹೋಗಿದ್ದಾನೆ. ಸ್ನಾನಮಾಡಿ, ದೇವರ ಪೂಜೆಯನ್ನು ನೆರವೇರಿಸಿ, ಇಲ್ಲಿಯವರೆಗೂ, ಆದ ಪಾಠಗಳನ್ನೆಲ್ಲಾ ಓದುತ್ತಿದ್ದು, ತನ್ನ ಇಬ್ಬರುಮೂವರು ಸ್ನೇಹಿತರೊಡನೆ ಈಗತಾನೇ ಹೋಗಿದಾನೆ ಎಂದು ಮುಂತಾಗಿ ಒಬ್ಬನೇ ಮಗನೆಂದು ಬಹು ಪ್ರೀತಿಯಿಂದ ಸಾಕುತ್ತಿದ್ದ ಅವನ ತಾಯಿಯು ದೀಕ್ಷಿತನಿಗೆ ಇಲ್ಲದುದನ್ನು ಹೇಳಿ ನಿಜವನ್ನು ಮರೆಮಾಚುತ್ತಿದ್ದಳು.

೧೬. ಪಾಪ, ಆ ದೀಕ್ಷಿತನಿಗೆ ತನ್ನ ಮಗನ ಕೆಲಸಗಳೂ, ನಡತೆಯೂ ಯಾವುದೊಂದೂ ಗೊತ್ತಾಗುತ್ತಿರಲಿಲ್ಲ. ಹೀಗಿರುತ್ತಿರಲು ಆ ಹುಡುಗನಿಗೆ ಹದಿನಾರನೇ ವರ್ಷದಲ್ಲಿ ಸ್ನಾತಕವೇ ಮೊದಲಾದ ಎಲ್ಲ ಕರ್ಮಗಳನ್ನೂ ಮಾಡಿದನು.

೧೭. ಅನಂತರ ಆ ಯಜ್ಞದತ್ತನೆಂಬ ದೀಕ್ಷಿತನು ತನ್ನ ಮಗನಿಗೆ ಗೃಹ್ಯಸೂತ್ರೋಕ್ತವಿಧಿಗನುಸಾರವಾಗಿ ಕನ್ಯೆಯೊಬ್ಬಳನ್ನು ತಂದು ಮದುವೆಯನ್ನೂ ಮಾಡಿದನು.

ಪ್ರತ್ಯಹಂ ತಸ್ಯ ಜನನೀ ಸುತಂ ಗುಣನಿಧಿಂ ಮೃದು ।
ಶಾಸ್ತಿ ಸ್ನೇಹಾದ್ರ್ರಹೃದಯಾ ಹ್ಯುಪವೇಶ್ಯ ಸ್ಮ ನಾರದ　　　॥ ೧೮ ॥

ಕ್ರೋಧನಸ್ತೇಽಸ್ತಿ ತನಯಃ ಸ ಮಹಾತ್ಮಾ ಪಿತೇತ್ಯಲಂ ।
ಯದಿ ಜ್ಞಾಸ್ಯತಿ ತೇ ವೃತ್ತಂ ತ್ವಾಂ ಚ ಮಾಂ ತಾಡಯಿಷ್ಯತಿ　　　॥ ೧೯ ॥

ಆಚ್ಛಾದಯಾಮಿ ತೇ ನಿತ್ಯಂ ಪಿತುರಗ್ರೇ ಕುಚೇಷ್ಟಿತಂ ।
ಲೋಕಮಾನ್ಯೋಽಸ್ತಿ ತೇ ತಾತಸ್ಸದಾಚಾರೈರ್ನವೈರ್ಧನೈಃ　　　॥ ೨೦ ॥

ಬ್ರಾಹ್ಮಣಾನಾಂ ಧನಂ ತಾತ ಸದ್ವಿದ್ಯಾ ಸಾಧುಸಂಗಮಃ ।
ಕಿಮರ್ಥಂ ನ ಕರೋಷಿ ತ್ವಂ ಸುರುಚಿಂ ಪ್ರೀತಮಾನಸಃ　　　॥ ೨೧ ॥

ಸಚ್ಛ್ರೋತ್ರಿಯಾಸ್ತೇಽನೂಚಾನಾ ದೀಕ್ಷಿತಾಸ್ಸೋಮಯಾಜಿನಃ ।
ಇತಿ ರೂಢಿಮಿಹ ಪ್ರಾಪ್ತಾಸ್ತವ ಪೂರ್ವಪಿತಾಮಹಾಃ　　　॥ ೨೨ ॥

---

೧೮. ಓ ನಾರದ, ಮಗನಮೇಲೆ ಮಿತಿಮೀರಿ ಮಮತೆಯುಳ್ಳ ಆ ಗುಣನಿಧಿಯ ತಾಯಿಯು ಮಗನನ್ನು ಹತ್ತಿರ ಕುಳ್ಳಿರಿಸಿಕೊಂಡು ಪ್ರತಿನಿತ್ಯವೂ ಒಳ್ಳೆಯ ಮಾತಿನಿಂದ ಬುದ್ಧಿ ಹೇಳುತ್ತಿದ್ದಳು.

೧೯. ಅಪ್ಪ, ಮಗು, ಮಹಾತ್ಮನಾದ ನಿನ್ನ ತಂದೆಯು ಮಹಾ ಕೋಪಿಷ್ಠನೆಂಬುದು ನಿನಗೆ ತಿಳಿಯದೇ? ಅವನಿಗೇನಾದರೂ ನಿನ್ನ ನಡತೆಯ ವಿಚಾರವು ಕಿವಿಗೆ ಬಿದ್ದರೆ ನಿನ್ನನ್ನೂ ನನ್ನನ್ನೂ ಚೆನ್ನಾಗಿ ಹೊಡೆಯುವನು.

೨೦. ನಾನು ನಿತ್ಯವೂ ನಿಮ್ಮ ತಂದೆಯೆದುರಿಗೆ ನಿನ್ನ ಕೆಟ್ಟ ನಡತೆಯೆಲ್ಲವನ್ನೂ ಮರೆಮಾಚುತ್ತಿದ್ದೇನೆ. ಆ ನಿನ್ನ ತಂದೆಯು ತನ್ನ ಶೀಲದಿಂದಲೂ ಐಶ್ವರ್ಯದಿಂದಲೂ ಜನರೆಲ್ಲರಿಗೂ ಮಾನ್ಯನಾಗಿದ್ದಾನೆ.

೨೧. ಮಗೂ, ಸದ್ವಿದ್ಯೆಯೂ ಸತ್ಸಹವಾಸವೂ ಬ್ರಾಹ್ಮಣರಿಗೆ ಐಶ್ವರ್ಯವಲ್ಲವೇ? ನಿನಗೇಕೆ ಈ ಸಂಪತ್ತಿನಲ್ಲಿ ಸಂತೋಷದಿಂದ ಅಭಿಲಾಷೆ ಹುಟ್ಟಲಿಲ್ಲ?

೨೨. ವಂಶಪಾರಂಪರ್ಯವಾಗಿ ಇವರೆಲ್ಲರೂ ಒಳ್ಳೆಯ ಶ್ರೋತ್ರಿಯರು, ದೀಕ್ಷಿತರು, ಸೋಮಯಾಗವನ್ನು ಮಾಡಿದವರು ಎಂದು ಇಲ್ಲಿ ನಿನ್ನ ಹಿರಿಯರೆಲ್ಲರೂ ಪ್ರಸಿದ್ಧಿಯನ್ನು ಪಡೆದಿಲ್ಲವೇ?

ತ್ಯಕ್ತ್ವಾ ದುರ್ವೃತ್ತಸಂಸರ್ಗಂ ಸಾಧುಸಂಗರತೋ ಭವ ।
ಸದ್ವಿದ್ಯಾಸು ಮನೋ ಧೇಹಿ ಬ್ರಾಹ್ಮಣಾಚಾರಮಾಚರ ॥ ೨೩ ॥

ತಾತಾನುರೂಪೋ ರೂಪೇಣ ಯಶಸಾ ಕುಲಶೀಲತಃ ।
ತತೋ ನ ತ್ರಪಸೇ ಕಿನ್ನಸ್ತ್ಯಜ ದುರ್ವೃತ್ತತಾಂ ಸ್ವಕಾಂ ॥ ೨೪ ॥

ಊನವಿಂಶತಿಕೋಽಸಿ ತ್ವಮೇಷಾ ಷೋಡಶವಾರ್ಷಿಕೀ ।
ಏತಾಂ ಸಂವೃಣು ಸದ್ವೃತ್ತಾಂ ಪಿತೃಭಕ್ತಿಯುತೋ ಭವ ॥ ೨೫ ॥

ಶ್ವಶುರೋಽಪಿ ಹಿ ತೇ ಮಾನ್ಯಸ್ಸರ್ವತ್ರ ಗುಣಶೀಲತಃ ।
ತತೋ ನ ತ್ರಪಸೇ ಕಿನ್ನಸ್ತ್ಯಜ ದುರ್ವೃತ್ತತಾಂ ಸುತ ॥ ೨೬ ॥

ಮಾತುಲಾಸ್ತೇಽತುಲಾಃ ಪುತ್ರ ವಿದ್ಯಾಶೀಲಕುಲಾದಿಭಿಃ ।
ತೇಭ್ಯೋಽಪಿ ನ ಬಿಭೇಷಿ ತ್ವಂ ಶುದ್ಧೋಽಸ್ಯುಭಯವಂಶತಃ ॥ ೨೭ ॥

---

೨೩. ಕೆಟ್ಟಜನರ ಸಹವಾಸವನ್ನು ಬಿಟ್ಟುಬಿಟ್ಟು ಒಳ್ಳೆಯ ಜನರ ಸಹವಾಸವನ್ನು ಮಾಡು. ಸದ್ವಿದ್ಯೆಗಳಲ್ಲಿ ನಿನ್ನ ಮನಸ್ಸನ್ನಿಡು, ಬ್ರಾಹ್ಮಣರ ಆಚರಣೆಗಳನ್ನು ಅನುಸರಿಸು.

೨೪. ರೂಪದಲ್ಲಿ ನಿಮ್ಮ ತಂದೆಗೆ ಸರಿಹೋಲುವಂತೆಯೇ ಯಶಸ್ಸಿನಲ್ಲಿಯೂ, ಕುಲಶೀಲಗಳಲ್ಲಿಯೂ ತಂದೆಯನ್ನು ಏಕೆ ಸರಿಗಟ್ಟಲಾರೆ? ನಿನಗೆ ನಾಚಿಕೆಯಾಗುವುದಿಲ್ಲವೇ? ನಿನ್ನ ಈ ಕೆಟ್ಟ ನಡತೆಯನ್ನು ಬಿಟ್ಟುಬಿಡು.

೨೫. ನಿನಗೂ ಹತ್ತೊಂಭತ್ತು ವರ್ಷಗಳು ತುಂಬಿದುವು. ಇವಳಿಗೂ ಹದಿನಾರು ವರ್ಷಗಳು, ಸುಶೀಲಳಾದ ಇವಳನ್ನು ಪರಿಗ್ರಹಿಸು. ತಂದೆಯಲ್ಲಿ ಭಕ್ತಿಯಿಟ್ಟು ಗೌರವದಿಂದ ನಡೆ.

೨೬. ಮಗು, ನಿನ್ನ ಮಾವನೂ ತನ್ನ ಗುಣಗಳಿಂದಲೂ, ನಡತೆಯಿಂದಲೂ ಎಲ್ಲಾ ಕಡೆಗಳಲ್ಲೂ ಗೌರವಕ್ಕೆ ಪಾತ್ರನಾಗಿರುವನು. ಅವನನ್ನು ನೋಡಿಯಾದರೂ ನಿನಗೆ ನಾಚಿಕೆಯಾಗಲಾರದೆ? ಈ ದುಷ್ಟವರ್ತನೆಯನ್ನು ಬಿಟ್ಟುಬಿಡು.

೨೭. ಮಗು, ನಿನ್ನ ಸೋದರಮಾವಂದಿರೆಲ್ಲರೂ, ವಿದ್ಯೆಯಿಂದಲೂ, ಶೀಲದಿಂದಲೂ, ಮನೆತನದಿಂದಲೂ, ಇವರಿಗೆ ಸಮಾನರಾರೂ ಇಲ್ಲವೆನಿಸಿದವರು. ನೀನು ಅವರಿಗೂ ಹೆದರುವುದಿಲ್ಲವೇ? ಮಾತಾಪಿತೃವಂಶಗಳೆರಡರಿಂದಲೂ ನೀನು ಶುದ್ಧನಾದವನಲ್ಲವೇ?

**ಪಶ್ಯೈತಾನ್ಪ್ರತಿವೇಶ್ಮಸ್ಥಾನ್ಬ್ರಾಹ್ಮಣಾನಾಂ ಕುಮಾರಕಾನ್ ।**
**ಗೃಹೇಽಪಿ ಶಿಷ್ಯಾನ್ಪಶ್ಯೈತಾನ್ಪಿತುಸ್ತೇ ವಿನಯೋಚಿತಾನ್ ॥ ೨೮ ॥**

**ರಾಜಾಽಪಿ ಶ್ರೋಷ್ಯತಿ ಯದಾ ತವ ದುಶ್ಚೇಷ್ಟಿತಂ ಸುತ ।**
**ಶ್ರದ್ಧಾಂ ವಿಹಾಯ ತೇ ತಾತೇ ವೃತ್ತಿಲೋಪಂ ಕರಿಷ್ಯತಿ ॥ ೨೯ ॥**

**ಬಾಲಚೇಷ್ಟಿತಮೇವೈತದ್ವದಂತ್ಯದ್ಯಾಪಿ ತೇ ಜನಾಃ ।**
**ಅನಂತರಂ ಹರಿಷ್ಯಂತಿ ಯುಕ್ತಾಂ ದೀಕ್ಷಿತತಾಮಿಹ ॥ ೩೦ ॥**

**ಸರ್ವೇಽಸ್ಯಾಕ್ಷಾರಯಿಷ್ಯಂತಿ ತವ ತಾತಂ ಚ ಮಾಮಪಿ ।**
**ಮಾತುಶ್ಚರಿತ್ರಂ ತನಯೋ ಧತ್ತೇ ದುರ್ಭಾಷಣೈರಿತಿ ॥ ೩೧ ॥**

**ಪಿತಾಽಪಿ ತೇ ನ ಪಾಪೀಯಾಂಛ್ರುತಿಸ್ಮೃತಿಪಥಾನುಗಃ ।**
**ತದಂಘ್ರಿಲೀನಮನಸೋ ಮಮ ಸಾಕ್ಷೀ ಮಹೇಶ್ವರಃ ॥ ೩೨ ॥**

---

೨೮. ನೆರೆಹೊರೆಯ ಮನೆಗಳಲ್ಲಿರುವ ಬ್ರಾಹ್ಮಣಕುಮಾರರನ್ನು ನೋಡು, ಅಷ್ಟೇಕೆ? ನಿಮ್ಮ ಮನೆಯಲ್ಲೇ ನಿಮ್ಮ ತಂದೆಯ ಬಳಿ ಓದುತ್ತಿರುವ ವಿನೀತರಾದ ಶಿಷ್ಯರನ್ನು ನೋಡು.

೨೯. ವತ್ಸ, ಅರಸನೇನಾದರೂ ನಿನ್ನ ಈ ಕೆಟ್ಟ ನಡತೆಯನ್ನು ಕೇಳಿದ ನೆಂದರೆ, ನಿನ್ನ ತಂದೆಯಲ್ಲಿ ನಂಬುಗೆಯೆಲ್ಲವನ್ನೂ ಬಿಟ್ಟುಬಿಟ್ಟು, ಆತನ ಮಾಸಾಶನ ಮುಂತಾದ ಜೀವನ ಮಾರ್ಗವನ್ನೇ ಕಸಿದುಕೊಳ್ಳುವನು.

೩೦. ಈಗಲೂ ಕೂಡ ಜನರು ಇನ್ನೂ ಹುಡುಗತನವೆಂದು ನಿನ್ನ ಅವಿವೇಕ ವರ್ತನೆಯನ್ನು ಸಹಿಸಿಕೊಂಡಿದ್ದಾರೆ. ಮುಂದೆಯೂ ಹೀಗೆಯೇ ಇದ್ದರೆ ನಿನ್ನ ದೀಕ್ಷಿತತನವನ್ನೇ ಅಪಹರಿಸುವರು.

೩೧. ಸಿಕ್ಕಿದವರೆಲ್ಲರೂ, ಬಾಯಿಗೆ ಬಂದಂತೆ ನಿನ್ನ ತಂದೆಯನ್ನೂ, ನನ್ನನ್ನೂ, ತಾಯಿಯ ಚಾಳಿಯನ್ನೇ ಮಗನೂ ಅವಲಂಬಿಸಿದನೆಂದು ಮುಂತಾಗಿ ಆಡಬಾರದ ಮಾತುಗಳನ್ನು ಆಡಿ ಹೀನಾಯಗೊಳಿಸುವರು.

೩೨. ಶ್ರುತಿಸ್ಮೃತಿವಿಹಿತವಾದ ಧರ್ಮಮಾರ್ಗದಲ್ಲೇ ನಡೆಯುವ ನಿನ್ನ ತಂದೆಯು ಸ್ವಲ್ಪವೂ ಪಾಪವನ್ನು ಮಾಡಿದವನಲ್ಲ. ಆತನ ಪಾದಗಳೊಂದಲ್ಲದೆ ಮತ್ತೆಲ್ಲಿಯೂ ಮನಸ್ಸಿಡದ ನನ್ನ ವಿಷಯದಲ್ಲಿ ಆ ಭಗವಂತನೇ ಸಾಕ್ಷಿ.

ನ ಚತುರ್ಸ್ನಾತಯಾಪೀಹ ಮುಖಂ ದುಷ್ಟಸ್ಯ ವೀಕ್ಷಿತಂ ।
ಅಹೋ ಬಲೀಯಾನ್ಸ ವಿಧಿರ್ಯೇನ ಜಾತೋ ಭವಾನಿತಿ ॥ ೩೩ ॥

ಪ್ರತಿಕ್ಷಣಂ ಜನನ್ಯೇತಿ ಶಿಕ್ಷ್ಯಮಾಣೋऽತಿದುರ್ಮತಿಃ ।
ನ ತತ್ಯಾಜ ಚ ತದ್ಧರ್ಮಂ ದುರ್ಬೋಧೋ ವ್ಯಸನೀ ಯತಃ ॥ ೩೪ ॥

ಮೃಗಯಾಮದ್ಯಪೈಶೂನ್ಯಾನೃತಚೌರ್ಯದುರೋದರೈಃ ।
ಸವಾರದಾರೈರ್ವ್ಯಸನೈರೇಭಿಃ ಕೋऽತ್ರ ನ ಖಂಡಿತಃ ॥ ೩೫ ॥

ಯದ್ಯನ್ಮಧ್ಯಗೃಹೇ ಪಶ್ಯೇತ್ತತ್ತನ್ನೀತ್ವಾ ಸುದುರ್ಮತಿಃ ।
ಅರ್ಪಯೇದ್ದ್ಯೂತಕಾರಾಣಾಂ ಸಕುಪ್ಯಂ ವಸನಾದಿಕಂ ॥ ೩೬ ॥

ನ್ಯಸ್ತಾಂ ರತ್ನಮಯೀಂ ಗೇಹೇ ಕರಸ್ಯ ಪಿತುರೂರ್ಮಿಕಾಂ ।
ಚೋರಯಿತ್ವೈಕದಾದಾಯ ದುರೋದರಕರೇऽರ್ಪಯತ್ ॥ ೩೭ ॥

---

೩೩. ಋತುಸ್ನಾನದ ದಿವಸವೂ ಸಹ ದುಷ್ಟನ ಮುಖವನ್ನು ನಾನು ಕಂಡವಳಲ್ಲ. ಅಯ್ಯೋ! ವಿಧಿಯ ಬಲವೇ ಬಲ, ಅದನ್ನು ಮೀರಿದವರಾರು? ಹೀಗಿದ್ದರೂ ನಿನ್ನಂತಹ ಕೆಟ್ಟ ಮಗನು ಹುಟ್ಟಬೇಕೇ?

೩೪. ಈರೀತಿ ಪ್ರತಿಕ್ಷಣವೂ ತಾಯಿಯು ಬುದ್ಧಿ ಹೇಳುತ್ತಿದ್ದರೂ ಕೂಡ, ಆ ದುಷ್ಟನು ತನ್ನ ಚಾಳಿಯನ್ನು ಬಿಡಲಿಲ್ಲ. ಅವನು ಯಾವ ಉಪದೇಶವೂ ತಲೆಗೆ ಹಿಡಿಸದಷ್ಟುಮಟ್ಟಿಗೆ ದುರ್ವ್ಯಸನಗಳಲ್ಲಿ ಆಸಕ್ತನಾಗಿಬಿಟ್ಟಿದ್ದನು.

೩೫. ಬೇಟೆ, ಮದ್ಯ, ಪಿಶುಣತನ, ಸುಳ್ಳು, ಕಳ್ಳತನ, ಜೂಜು, ಸೂಳೆಗಾರಿಕೆ ಎಂಬ ಈ ದುರ್ವ್ಯಸನಗಳಿಗೆ ಸಿಲುಕಿ ಈ ಪ್ರಪಂಚದಲ್ಲಿ ಶೀಲಭ್ರಷ್ಟನಾಗದಿರುವವನಾರು?

೩೬. ಕೆಟ್ಟ ಬುದ್ಧಿಯುಳ್ಳ ಆ ಗುಣನಿಧಿಯು ನಡುಮನೆಯಲ್ಲಿ ಕಣ್ಣಿಗೆ ಏನೇನು ಕಾಣುವುದೋ ಅದೆಲ್ಲವನ್ನೂ ತೆಗೆದುಕೊಂಡು ಹೋಗಿ, ಜೂಜುಕೋರರಿಗೆ ಆ ಪಾತ್ರೆಪದಾರ್ಥಗಳನ್ನೂ ಬಟ್ಟೆಬರೆಗಳನ್ನೂ ಒಪ್ಪಿಸುತ್ತಿದ್ದನು.

೩೭. ಹೀಗಿರಲು ಒಂದುಸಲ ಮನೆಯಲ್ಲಿ ಇಟ್ಟಿದ್ದ, ತನ್ನ ತಂದೆಯ ಕೈಬೆರಳಿನ ಉಂಗುರವನ್ನು ಕದ್ದು ಜೂಜುಕೋರನೊಬ್ಬನ ಕೈಗೆ ಕೊಟ್ಟುಬಿಟ್ಟನು.

ದೀಕ್ಷಿತೇನ ಪರಿಜ್ಞಾತೋ ದ್ಯೈವಾದ್ದ್ಯೂತಃ ಕರೇ ।
ಉವಾಚ ದೀಕ್ಷಿತಸ್ತಂ ಚ ಕುತೋ ಲಬ್ಧಾ ತ್ವಯೋರ್ಮಿಕಾ ॥ ೩೮ ॥

ಪೃಷ್ಟಸ್ತೇನಾಥ ನಿರ್ಬಂಧಾದಸಕೃತ್ತ್ತಮುವಾಚ ಸಃ ।
ಮಾಮಾಕ್ಷಿಪಸಿ ವಿಪ್ರೋಚ್ಚೈಃ ಕಿಂ ಮಯಾ ಚೌರ್ಯಕರ್ಮಣಾ ॥ ೩೯ ॥

ಲಬ್ಧಾ ಮುದ್ರಾ ತ್ವದೀಯೇನ ಪುತ್ರೇಣೈವ ಸಮರ್ಪಿತಾ ।
ಮಮ ಮಾತುರ್ಹಿ ಪೂರ್ವೇದ್ಯುರ್ಜಿತ್ವಾ ನೀತೋ ಹಿ ಶಾಟಿಕಃ ॥ ೪೦ ॥

ನ ಕೇವಲಂ ಮಮೈವೈತದಂಗುಲೀಯಂ ಸಮರ್ಪಿತಂ ।
ಅನ್ಯೇಷಾಂ ದ್ಯೂತಕರ್ತ್ರೂಣಾಂ ಭೂರಿ ತೇನಾರ್ಪಿತಂ ವಸು ॥ ೪೧ ॥

ರತ್ನಕುಪ್ಯದುಕೂಲಾನಿ ಭೃಂಗಾರಪ್ರಭೃತೀನಿ ಚ ।
ಭಾಜನಾನಿ ವಿಚಿತ್ರಾಣಿ ಕಾಂಸ್ಯತಾಮ್ರಮಯಾನಿ ಚ । ॥ ೪೨ ॥

---

೩೮. ಯಜ್ಞದತ್ತದೀಕ್ಷಿತನು ತನ್ನ ಕಳೆದುಹೋದ ಉಂಗುರವು ಜೂಜುಕೋರನೊಬ್ಬನ ಕೈಲಿರುವುದನ್ನು ಅಕಸ್ಮಾತ್ತಾಗಿ ಕಂಡು, ನಿನಗೆ ಈ ಉಂಗುರವು ಎಲ್ಲಿ ಸಿಕ್ಕಿತೆಂದು ಕೇಳಿದನು.

೩೯-೪೦. ಆ ದೀಕ್ಷಿತನು ಪುನಃ ಪುನಃ ನಿರ್ಬಂಧದಿಂದ ಪೀಡಿಸಿ ಕೇಳಲು ಆ ಜೂಜುಗಾರನು, ಅಯ್ಯಾ ಬ್ರಾಹ್ಮಣ! ನನ್ನನ್ನೇಕೆ ವ್ಯರ್ಥವಾಗಿ ಗಟ್ಟಿಯಾಗಿ ಆಕ್ಷೇಪಿಸುವೆ? ನಾನೇನು ನಿನ್ನ ಉಂಗುರವನ್ನು ಕದ್ದುಕೊಂಡುಬಂದನೆಂದು ತಿಳಿದೆಯಾ? ನಿನ್ನ ಮಗನೇ ಇದನ್ನು ಕದ್ದು ನನಗೆ ಕೊಟ್ಟಿದ್ದಾನೆ. ಅಲ್ಲದೆ ನೆನ್ನೆ ತನ್ನ ತಾಯಿ ಸೀರೆಯನ್ನೂ ಜೂಜಿನಲ್ಲಿ ನನಗೆ ಸೋತುಬಿಟ್ಟು ಕೊಟ್ಟಿದ್ದಾನೆ.

೪೧. ನನಗೊಬ್ಬನಿಗೆ ಈ ಉಂಗುರವೊಂದನ್ನೇ ಕೊಟ್ಟಿದಾನೆ ಎಂದು ತಿಳಿಯಬೇಡ. ಇನ್ನೂ ಅನೇಕ ಜೂಜುಗಾರರಿಗೆ ಅವನು ಬಹಳ ಹಣವನ್ನು ಕೊಟ್ಟಿದ್ದಾನೆ.

೪೨. ರತ್ನದ ಆಭರಣಗಳೂ, ಪಾತ್ರೆಪದಾರ್ಥಗಳೂ, ಬೆಲೆಬಾಳುವ ರೇಷ್ಮೆಯ ಬಟ್ಟೆಗಳೂ, ಗಿಂಡಿ ಮೊದಲಾದ ಕಂಚು ತಾಮ್ರ ಮುಂತಾದ ಲೋಹಗಳ ವಿಚಿತ್ರವಾದ ಪಾತ್ರೆಗಳು ಇವೆಲ್ಲವನ್ನೂ ಅವನು ನಮಗಿತ್ತಿದ್ದಾನೆ.

**ನಗ್ನೀಕೃತ್ಯ ಪ್ರತಿದಿನಂ ಬಧ್ಯತೇ ದ್ಯೂತಕಾರಿಭಿಃ ।**
**ನ ತೇನ ಸದೃಶಃ ಕಶ್ಚಿದಾಕ್ಷಿಕೋ ಭೂಮಿಮಂಡಲೇ ॥ ೪೩ ॥**

**ಅದ್ಯಾವಧಿ ತ್ವಯಾ ವಿಪ್ರ ದುರೋದರಶಿರೋಮಣಿಃ ।**
**ಕಥಂ ನಾಜ್ಞಾಯಿ ತನಯೋಽವಿನಯಾನಯಕೋವಿದಃ ॥ ೪೪ ॥**

**ಇತಿ ಶ್ರುತ್ವಾ ತ್ರಪಾಭಾರವಿನಮ್ರತರಕಂಧರಃ ।**
**ಪ್ರಾವೃತ್ಯ ವಾಸಸಾ ಮೌಲಿಂ ಪ್ರಾವಿಶನ್ನಿಜಮಂದಿರಂ ॥ ೪೫ ॥**

**ಮಹಾಪತಿವ್ರತಾಮಸ್ಯ ಪತ್ನೀಂ ಪ್ರೋವಾಚ ತಾಮಥ ।**
**ಸ ದೀಕ್ಷಿತೋ ಯಜ್ಞದತ್ತಃ ಶ್ರೌತಕರ್ಮಪರಾಯಣಃ ॥ ೪೬ ॥**

**॥ ಯಜ್ಞದತ್ತ ಉವಾಚ ॥**

**ದೀಕ್ಷಿತಾಯನಿ ಕುತ್ರಾಸ್ತಿ ಧೂರ್ತೋ ಗುಣನಿಧಿಸ್ಸುತಃ ।**
**ಅಥ ತಿಷ್ಠತು ಕಿಂ ತೇನ ಕ್ವ ಸಾ ಮಮ ಶುಭೋರ್ಮಿಕಾ ॥ ೪೭ ॥**

---

೪೩. ಪ್ರತಿನಿತ್ಯವೂ ಜೂಜುಕೋರರು, ಅವನುಟ್ಟಿರುವ ಬಟ್ಟೆಯನ್ನೂ ಬಿಡದೆ ಕಿತ್ತುಕೊಂಡು, ಬೆತ್ತಲೆ ಕಟ್ಟಿಹಾಕುತ್ತಾರೆ. ಅವನಂತಹ ಜೂಜುಗಾರನು ಈ ಭೂಮಂಡಲದಲ್ಲೇ ಬೇರೊಬ್ಬನಿಲ್ಲ.

೪೪. ಓ ಬ್ರಾಹ್ಮಣ, ನಿನಗಿದುವರೆಗೂ ನಿನ್ನ ಮಗನು, ಜೂಜುಕೋರರ ಮುಖಂಡನೆಂದೂ ಗೊತ್ತಾಗಲಿಲ್ಲವೇನು? ಎನ್ನಲು,

೪೫. ಈರೀತಿ ತನ್ನ ಮಗನ ವರ್ತನೆಯನ್ನು ಕೇಳಿ ನಾಚಿಕೆಯಿಂದ ತಗ್ಗಿಸಿದ ತಲೆಯನ್ನು ಮೇಲಕ್ಕೆತ್ತದೆ, ತಲೆಗೆ ಮುಸುಗನ್ನು ಎಳೆದುಕೊಂಡು ತನ್ನ ಮನೆಗೆ ಹೊರಟುಬಂದನು.

೪೬. ಲೌಕಿಕ ವ್ಯವಹಾರವನ್ನೇ ಅರಿಯದ, ಕೇವಲ ಶ್ರುತಿವಿಹಿತಕರ್ಮಗಳಲ್ಲೇ ಆಸಕ್ತನಾದ ಆ ಯಜ್ಞದತ್ತದೀಕ್ಷಿತನು ಪರಮಪತಿವ್ರತೆಯಾದ ತನ್ನ ಹೆಂಡತಿಯನ್ನು ಕುರಿತು,

೪೭-೪೮. ಎಲೌ ದೀಕ್ಷಿತಾಯನಿ, ನೀನು ಪರಮ ವಂಚಕಳು! ನಿನ್ನ ಮಗನಾದ ಗುಣನಿಧಿಯು ಎಲ್ಲಿದಾನೆ? ಹೇಳು. ಅಥವಾ ಅವನೆಲ್ಲಾದರೂ ಇರಲಿ, ಈಗ

ಅಂಗೋದ್ವರ್ತನಕಾಲೇ ಯಾ ತ್ವಯಾ ಮೇಽಂಗುಲಿತೋ ಹೃದಾ ।
ಸಾ ತ್ವಂ ರತ್ನಮಯೀಂ ಶೀಘ್ರಂ ತಾಮಾನೀಯ ಪ್ರಯಚ್ಛ ಮೇ ॥ ೪೮ ॥

ಇತಿ ಶ್ರುತ್ವಾಥ ತದ್ವಾಕ್ಯಂ ಭೀತಾ ಸಾ ದೀಕ್ಷಿತಾಯನೀ ।
ಪ್ರೋವಾಚ ಸ್ನಾನಮಧ್ಯಾಹ್ನೀಂ ಕ್ರಿಯಾಂ ನಿಷ್ಪಾದಯಂತ್ಯಥ ॥ ೪೯ ॥

ವ್ಯಗ್ರಾಸ್ಮಿ ದೇವಪೂಜಾರ್ಥಮುಪಹಾರಾದಿಕರ್ಮಣಿ ।
ಸಮಯೋಽಯಮತಿಕ್ರಾಮೇದತಿಥೀನಾಂ ಪ್ರಿಯಾನಿಧೇ ॥ ೫೦ ॥

ಇದಾನೀಮೇವ ಪಕ್ವಾನ್ನಕರಣವ್ಯಗ್ರಯಾ ಮಯಾ ।
ಸ್ಥಾಪಿತಾ ಭಾಜನೇ ಕ್ವಾಪಿ ವಿಸ್ಮೃತೇಽತಿ ನ ವೇದ್ಮ್ಯಹಂ ॥ ೫೧ ॥

॥ ದೀಕ್ಷಿತ ಉವಾಚ ॥

ಹಂ ಹೇಽಸತ್ಪುತ್ರಜನನಿ ನಿತ್ಯಂ ಸತ್ಯಪ್ರಭಾಷಿಣಿ ।
ಯದಾ ಯದಾ ತ್ವಾಂ ಸಂಪೃಚ್ಛೇತ್ತನಯಃ ಕ್ವ ಗತಸ್ತ್ವಿತಿ ॥ ೫೨ ॥

ಅವನಿಂದೇನು? ನಾನು ಸ್ನಾನಮಾಡಿ ಮೈಯುಜ್ಜಿಕೊಳ್ಳುವಾಗ ನನ್ನ ಬೆಟ್ಟಿನಿಂದ ತೆಗೆದುಕೊಂಡೆಯಲ್ಲವೇ ಆ ನನ್ನ ಉಂಗುರವೆಲ್ಲಿದೆ, ಹೇಳು. ಬೇಗನೆ ಆ ರತ್ನದ ಉಂಗುರವನ್ನು ನನಗೆ ತಂದುಕೊಡು ಎಂದನು.

೪೯. ಈ ಮಾತನ್ನು ಕೇಳಿದೊಡನೆಯೇ, ಮಡಿಯುಟ್ಟು ಮಧ್ಯಾಹ್ನದ ಕೆಲಸದಲ್ಲಿ ತೊಡಗಿದ್ದ ಆ ದೀಕ್ಷಿತಾಯನಿಯು ಹೆದರಿದವಳಾಗಿ ಆ ದೀಕ್ಷಿತನಿಗಿಂತೆಂದಳು.

೫೦. ನಾನು ಈಗ ದೇವರ ಪೂಜೆಗೆ ಸಿದ್ಧಮಾಡುವುದರಲ್ಲೇ ತೊಡಗಿರುತ್ತೇನೆ. ಅತಿಥಿಗಳಿಗೆ ಹೊತ್ತಾದೀತು.

೫೧. ಈಗತಾನೇ ಪಕ್ವಾನ್ನಗಳನ್ನು ಮಾಡುವ ಆತುರದಲ್ಲಿ ಉಂಗುರವನ್ನು ಯಾವ ಪಾತ್ರೆಯಲ್ಲಿಟ್ಟೆನೋ ತಿಳಿಯದು. ಮರೆತೆ ಎನ್ನಲು,

೫೨-೫೩. ದೀಕ್ಷಿತನು ಕುಪಿತನಾಗಿ ಹೇಳಿದನು—ಎಲೈ ಕೆಟ್ಟ ಮಗುವನ್ನು ಹೆತ್ತವಳೇ? ನಿತ್ಯವೂ ಸತ್ಯವನ್ನೇ ಹೇಳುವವಳೇ? ಹುಡುಗನು ಎಲ್ಲಿ ಹೋದನೆಂದು

ತದಾ ತದೇತಿ ತ್ವಂ ಬ್ರೂಯನ್ನಾಥೇದಾನೀಂ ಸ ನಿರ್ಗತಃ ।
ಅಧೀತ್ಯಾಧ್ಯಯನಾರ್ಥಂ ಚ ದ್ವಿತ್ರೈರ್ನಿರ್ಗತ್ರೈಸ್ಸಯುಗ್ಭಹಿಃ ॥ ೫೩ ॥

ಕುತಸ್ತೇ ಶಾಟಕಃ ಪತ್ನಿ ಮಾಂಜಿಷ್ಠೋ ಯೋ ಮಯಾರ್ಪಿತಃ ।
ಲಂಬತೇ ಯೋಽನಿಶಂ ಧಾಮ್ನಿ ತಥ್ಯಂ ಬ್ರೂಹಿ ಭಯಂ ತ್ಯಜ ॥ ೫೪ ॥

ಸಾಂಪ್ರತಂ ನೇಕ್ಷ್ಯತೇ ಸೋಽಪಿ ಭೃಂಗಾರೋ ಮಣಿಮಂಡಿತಃ ।
ಪಟ್ಟಸೂತ್ರಮಯೀ ಸಾಪಿ ತ್ರಿಪಟೀ ಯಾ ಮಯಾರ್ಪಿತಾ ॥ ೫೫ ॥

ಕ್ವ ದಾಕ್ಷಿಣಾತ್ಯಂ ತತ್ಕಾಂಸ್ಯಂ ಗೌಡೀ ತಾಮ್ರಘಟೀ ಕ್ವ ಸಾ ।
ನಾಗದಂತಮಯೀ ಸಾ ಕ್ವ ಸುಖಕೌತುಕಮಂಚಿಕಾ ॥ ೫೬ ॥

ಕ್ವ ಸಾ ಪರ್ವತದೇಶೀಯಾ ಚಂದ್ರಕಾಂತಿರಿವಾದ್ಭುತಾ ।
ದೀಪಕವ್ಯಗ್ರಹಸ್ತಾಗ್ರ್ಯಾಽಲಂಕೃತಾ ಶಾಲಭಂಜಿಕಾ ॥ ೫೭ ॥

---

ಕೇಳಿದಾಗಲೆಲ್ಲ, ನಾಥ, ಓದುವುದನ್ನೆಲ್ಲಾ ಓದಿ ಈಗತಾನೆ ತನ್ನ ಇಬ್ಬರು ಮೂವರು ಸ್ನೇಹಿತರೊಂದಿಗೆ ಹೊರಕ್ಕೆ ಹೋದನೆಂದು ಹೇಳುತ್ತಿದ್ದೆಯಲ್ಲವೇ?

೫೪. ನಾನು ನಿನಗೆ ತಂದುಕೊಟ್ಟಿದ್ದ ಮಂಜಿಷ್ಠಾರಾಗರಂಜಿತವಾದ (ಹಳದಿ ಬಣ್ಣ) ಮನೆಯಲ್ಲಿ ಯಾವಾಗಲೂ (ದಂಡದಮೇಲೆ) ತೂಗಾಡುತ್ತಿದ್ದ ಆ ಸೀರೆಯೆಲ್ಲಿ? ನಿಜವನ್ನು ಹೇಳು. ಭಯಪಡಬೇಡ.

೫೫-೫೭. ರತ್ನಖಚಿತವಾದ ಆ ಗಿಂಡಿಯು ಈಗೇಕೆ ಎಲ್ಲಿಯೂ ಕಾಣಿಸುತ್ತಿಲ್ಲ? ನಾನು ನಿನಗೆ ತಂದುಕೊಟ್ಟಿದ್ದ ರೇಶಿಮೆ ನೂಲಿನಿಂದ ಮಾಡಿದ ಆ ತ್ರಿಪಟಿ (ಶಾಲುವಿನ ಮಾದರಿಯ ಹೊದೆಯುವ ಬಟ್ಟೆ) ಯೆಲ್ಲಿ? ದಕ್ಷಿಣ ದೇಶದಿಂದ ತಂದಿದ್ದ ಆ ಕಂಚೂ, ಗೌಡದೇಶದಿಂದ ತಂದಿದ್ದ ತಾಮ್ರದ ಬಿಂದಿಗೆಯೂ ಎಲ್ಲಿದೆ? ಹೇಳು. ವಿಲಾಸಾರ್ಥವಾಗಿ ಉಪಯೋಗಿಸುತ್ತಿದ್ದ ಸುಖಕರವಾದ ಆ ಆನೆಯ ದಂತದಲ್ಲಿ ಮಾಡಿದ್ದ ಮಂಚಿಕೆ (ಕೆನ್ನೆಯಲ್ಲಿ ಧರಿಸುವ ಕರ್ಣಪತ್ರದಂತಹ ಆಭರಣ) ಯೆಲ್ಲಿ? ಚಂದ್ರಕಾಂತಿಯಂತೆ ಬೆಳಗುತ್ತಿದ್ದ, ಅದ್ಭುತವಾದ, ಆ ಮಲೆನಾಡಿನಿಂದ ತಂದಿದ್ದ, ದೀಪವನ್ನು ಕೈಯಲ್ಲಿ ಹೊತ್ತು ನಿಂತಿದ್ದ, ಪುತ್ಥಳಿಯೆಲ್ಲಿ?

ಕಿಂ ಬಹೂಕ್ತೇನ ಕುಲಜೇ ತುಭ್ಯಂ ಕುಪ್ಯಾಮ್ಯಹಂ ವೃಥಾ ।
ತದಾಭ್ಯವಹರಿಷ್ಯೇಽಹಮುಪಯಂಸ್ಯಾಮ್ಯಹಂ ಯದಾ ॥ ೫೮ ॥

ಅನಪತ್ಯೋಽಸ್ಮಿ ತೇನಾಹಂ ದುಷ್ಟೇನ ಕುಲದೂಷಿಣಾ ।
ಉತ್ತಿಷ್ಠಾನಯ ಪಾಥಸ್ತ್ವಂ ತಸ್ಮೈ ದದ್ಯಾಂ ತಿಲಾಂಜಲಿಂ ॥ ೫೯ ॥

ಅಪುತ್ರತ್ವಂ ವರಂ ನೄಣಾಂ ಕುಪುತ್ರಾತ್ಕುಲಪಾಂಸನಾತ್ ।
ತ್ಯಜೇದೇಕಂ ಕುಲಸ್ಯಾರ್ಥೇ ನೀತಿರೇಷಾ ಸನಾತನೀ ॥ ೬೦ ॥

ಸ್ನಾತ್ವಾ ನಿತ್ಯವಿಧಿಂ ಕೃತ್ವಾ ತಸ್ಮಿನ್ನೇವಾಹ್ನಿ ಕಸ್ಯಚಿತ್ ।
ಶ್ರೋತ್ರಿಯಸ್ಯ ಸುತಾಂ ಪ್ರಾಪ್ಯ ಪಾಣಿಂ ಜಗ್ರಾಹ ದೀಕ್ಷಿತಃ ॥ ೬೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಗುಣನಿಧಿಚರಿತ್ರವರ್ಣನೋ ನಾಮ ಸಪ್ತದಶೋಽಧ್ಯಾಯಃ

---

೫೮. ಎಲೈ ಕುಲೀನಳೇ, ಇನ್ನು ಹೆಚ್ಚು ಹೇಳಿಯೇನು? ವ್ಯರ್ಥವಾಗಿ ನಿನ್ನ ಮೇಲೆ ಕೋಪಮಾಡಿಕೊಳ್ಳುತ್ತೇನೆ. ನಾನು ಬೇರೆ ಮದುವೆ ಮಾಡಿಕೊಂಡ ಮೇಲೆಯೇ ಪುನಃ ಊಟಮಾಡುತ್ತೇನೆ.

೫೯. ದುಷ್ಟನೂ ಕುಲಪಾಂಸನನೂ ಆದ ಆ ಮಗನಿಂದ ನಾನು ಮಕ್ಕಳಿಲ್ಲದವನಂತೆಯೇ ಆಗಿದೇನೆ. ಏಳು, ನೀರು ತೆಗೆದುಕೊಂಡು ಬಾ! ಅವನಿಗೆ ಎಳ್ಳು ನೀರು ಬಿಡುವೆಯುಂತೆ.

೬೦. ವಂಶಕ್ಕೆ ಕಳಂಕವನ್ನು ಹಚ್ಚುವ ಕೆಟ್ಟ ಮಗನನ್ನು ಹೆರುವುದಕ್ಕಿಂತಲೂ ಮಕ್ಕಳಿಲ್ಲದಿರುವುದೇ ಲೇಸು. ಕುಲಕ್ಕೋಸ್ಕರ ಒಬ್ಬನನ್ನು ಪರಿತ್ಯಾಗ ಮಾಡಲೂಬಹುದು ಎಂಬುದೇ ಸನಾತನ ನೀತಿ.

೬೧. ಹೀಗೆ ಹೇಳಿ ಆ ಯಜ್ಞದತ್ತದೀಕ್ಷಿತನು, ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು, ಅದೇ ದಿನವೇ ಶ್ರೋತ್ರಿಯನೊಬ್ಬನ ಮಗಳನ್ನು ನೋಡಿ ಆಕೆಯನ್ನು ಮದುವೆಯಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಗುಣನಿಧಿಚರಿತ್ರವರ್ಣನವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸೃಷ್ಟಿಖಂಡೇ

## ಅಷ್ಟಾದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಶ್ರುತ್ವಾ ತಥಾ ಸ ವೃತ್ತಾಂತಂ ಪ್ರಾಕ್ತನಂ ಸ್ವಂ ವಿನಿಂದ್ಯ ಚ ।
ಕಾಂಚಿದ್ದಿಶಂ ಸಮಾಲೋಕ್ಯ ನಿರ್ಯಯೌ ದೀಕ್ಷಿತಾಂಗಜಃ ॥ ೧ ॥

ಕಿಯಚ್ಚಿರಂ ತತೋ ಗತ್ವಾ ಯಜ್ಞದತ್ತಾತ್ಮಜಸ್ಸ ಹಿ ।
ದುಷ್ಟೋ ಗುಣನಿಧಿಸ್ತಸ್ಥೌ ಗತೋತ್ಸಾಹೋ ವಿಸರ್ಜಿತಃ ॥ ೨ ॥

## ಹದಿನೆಂಟನೆಯ ಅಧ್ಯಾಯವು

೧. ಬ್ರಹ್ಮನು ನುಡಿದನು:—ತನ್ನ ಮನೆಯಲ್ಲಿ ನಡೆದ ಹಗರಣವೆಲ್ಲವನ್ನೂ ಕೇಳಿ ಆ ದೀಕ್ಷಿತನ ಮಗನಾದ ಗುಣನಿಧಿಯು, ತನ್ನ ಹಿಂದಿನ ಬಾಳನ್ನು ನೆನೆದು ಅದನ್ನು ನಿಂದಿಸಿಕೊಳ್ಳುತ್ತಾ ಯಾವುದೋ ಒಂದು ದಿಕ್ಕನ್ನು ಹಿಡಿದು ಹೊರಟನು.

೨. ಮನೆಮಠಗಳಿಲ್ಲದೆ, ತಂದೆತಾಯಿಗಳಿಂದ ಪರಿತ್ಯಕ್ತನಾದ ಆ ದುಷ್ಟನಾದ ಗುಣನಿಧಿಯು ಊರನ್ನು ಬಿಟ್ಟು ಸ್ವಲ್ಪದೂರ ಹೋದಮೇಲೆ, ಉತ್ಸಾಹಹೀನನಾಗಿ ಆಯಾಸದಿಂದ ಅಲ್ಲಿಯೇ ನಿಂತುಬಿಟ್ಟನು.

**ಚಿಂತಾಮವಾಪ ಮಹತೀಂ ಕ್ವ ಯಾಮಿ ಕರವಾಣಿ ಕಿಂ ।**
**ನಾಹಮಭ್ಯಸ್ತವಿದ್ಯೋಽಸ್ಮಿ ನ ಚೈವಾತಿಧನೋಽಸ್ಮ್ಯಹಂ ॥ ೩ ॥**

**ದೇಶಾಂತರೇ ಯಸ್ಯ ಧನಂ ಸ ಸದ್ಯಸ್ಸುಖಮೇಧತೇ ।**
**ಭಯಮಸ್ತಿ ಧನೇ ಚೌರಾತ್ಸ ವಿಘ್ನಸ್ಸರ್ವತೋ ಭವಃ ॥ ೪ ॥**

**ಯಾಜಕಸ್ಯ ಕುಲೇ ಜನ್ಮ ಕಥಂ ಮೇ ವ್ಯಸನಂ ಮಹತ್ ।**
**ಅಹೋ ಬಲಿಯಾನ್ವಿ ವಿಧಿರ್ಭಾವಿಕರ್ಮಾನುಸಂಧಯೇತ್ ॥ ೫ ॥**

**ಭಿಕ್ಷಿತುಂ ನಾಧಿಗಚ್ಛಾಮಿ ನ ಮೇ ಪರಿಚಿತಿಃ ಕ್ವಚಿತ್ ।**
**ನ ಚ ಪಾರ್ಶ್ವೇ ಧನಂ ಕಿಂಚಿತ್ಕಿಮತ್ರ ಶರಣಂ ಭವೇತ್ ॥ ೬ ॥**

**ಸದಾನಭ್ಯುದಿತೇ ಭಾನೌ ಪ್ರಸೂರ್ಮೇ ಮಿಷ್ಟಭೋಜನಂ ।**
**ದದ್ಯಾದ್ದದ್ಯಾತ್ರ ಕಂ ಯಾಚೇ ನ ಚೇಹ ಜನನೀ ಮಮ ॥ ೭ ॥**

---

೩. ಅವನಿಗೆ ಬಹಳ ಯೋಚನೆಯಾಯಿತು. ನಾನೆಲ್ಲಿಗೆ ಹೋಗಲಿ? ಏನು ಮಾಡಲಿ? ನಾನೋ ವಿದ್ಯೆಯನ್ನು ಕಲಿತವನಲ್ಲ. ನನ್ನ ಬಳಿಯಲ್ಲಿ ಹೆಚ್ಚು ಹಣವೂ ಇಲ್ಲ.

೪. ದೇಶಾಂತರಕ್ಕೆ ಹೋದಾಗ ತನ್ನ ಬಳಿ ಹಣವಿದ್ದಲ್ಲಿ ಆಗ ಮಾತ್ರ ಆತನು ಸುಖವನ್ನು ಹೊಂದುವನು. ಹಣವಿದ್ದರೆ ಕಳ್ಳರಿಂದ ಹೆದರಿಕೆ ತಪ್ಪಿದ್ದಲ್ಲ. ಎಲ್ಲ ಕಡೆಯೂ ಈ ಪ್ರಪಂಚವು ವಿಘ್ನಗಳಿಂದ ತುಂಬಿಹೋಗಿದೆ.

೫. ಒಳ್ಳೇ ಸೋಮಯಾಜಿಗಳ ವಂಶದಲ್ಲಿ ನಾನು ಹುಟ್ಟಿದೆನು. ಹೀಗಿದ್ದರೂ ನನಗೇಕೆ ಜೂಜು ಮುಂತಾದ ವ್ಯಸನಗಳು ಹತ್ತಿಕೊಂಡವು? ಆಹಾ! ವಿಧಿಯು ಬಲವೇ ಬಲವು. ಮುಂದಿನ ಕರ್ಮಗಳನ್ನು ಅದು ನಡೆಸದೇ ಬಿಡದು.

೬. ನನಗೆ ಭಿಕ್ಷೆಬೇಡುವುದಕ್ಕೂ ಬರದು. ಯಾವ ಪರಿಚಯವೂ ಇಲ್ಲ. ನನ್ನ ಬಳಿ ಅಲ್ಪಸ್ವಲ್ಪ ಹಣವೂ ಇಲ್ಲ. ನನಗೆ ಈಗೇನು ಗತಿ?

೭. ಸೂರ್ಯನು ಹುಟ್ಟುವುದಕ್ಕಿಂತ ಮುಂಚೆಯೇ ನನ್ನ ತಾಯಿಯು ರುಚಿಕರವಾದ ತಿಂಡಿಗಳನ್ನು ಮಾಡಿಕೊಡುತ್ತಿದ್ದಳು. ಈಗ ಯಾರನ್ನು ಕೇಳಲಿ? ಇಲ್ಲಿ ನನ್ನ ತಾಯಿಯಿಲ್ಲವಲ್ಲ.

॥ ಬ್ರಹ್ಮೋವಾಚ ॥

**ಇತಿ ಚಿಂತಯತಸ್ತಸ್ಯ ಬಹುಶಸ್ತತ್ರ ನಾರದ ।**
**ಅತಿದೀನಂ ತರೋರ್ಮೂಲೇ ಭಾನುರಸ್ತಾಚಲಂ ಗತಃ ॥ ೮ ॥**

**ಏತಸ್ಮಿನ್ನೇವ ಸಮಯೇ ಕಶ್ಚಿನ್ಮಾಹೇಶ್ವರೋ ನರಃ ।**
**ಸಹೋಪಹಾರಾನಾದಾಯ ನಗರಾದ್ಬಹಿರಭ್ಯಗಾತ್ ॥ ೯ ॥**

**ನಾನಾವಿಧಾನ್ಮಹಾದಿವ್ಯಾನ್ಸ್ವಜನೈಃ ಪರಿವಾರಿತಃ ।**
**ಸಮಭ್ಯರ್ಚಿತುಮೀಶಾನಂ ಶಿವರಾತ್ರಾವುಪೋಷಿತಃ ॥ ೧೦ ॥**

**ಶಿವಾಲಯಂ ಪ್ರವಿಶ್ಯಾಥ ಸ ಭಕ್ತಶ್ಶಿವಸಕ್ತಧೀಃ ।**
**ಯಥೋಚಿತಂ ಸುಚಿತ್ತೇನ ಪೂಜಯಾಮಾಸ ಶಂಕರಂ ॥ ೧೧ ॥**

**ಪಕ್ವಾನ್ನಗಂಧಮಾಘ್ರಾಯ ಯಜ್ಞದತ್ತಾತ್ಮಜೋ ದ್ವಿಜಃ ।**
**ಪಿತೃತ್ಯಕ್ತೋ ಮಾತೃಹೀನಃ ಕ್ಷುಧಿತಃ ಸ ತಮನ್ವಗಾತ್ ॥ ೧೨ ॥**

೮. ಬ್ರಹ್ಮನು ಹೇಳಿದನು:—ಹೀಗೆ ಅತಿ ದೈನ್ಯದಿಂದ ಒಂದಾನೊಂದು ಮರದ ಕೆಳಗೆ ಕುಳಿತು ಬಹುವಾಗಿ ಯೋಚಿಸುತ್ತಿರುವಂತೆಯೇ ಸೂರ್ಯನು ಅಸ್ತಮಾನವನ್ನು ಹೊಂದಿದನು.

೯-೧೦. ಇದೇ ಸಮಯದಲ್ಲಿ ಶಿವನ ಭಕ್ತನೋರ್ವನು, ಆದಿನ ಶಿವರಾತ್ರಿಯಾದುದರಿಂದ ಉಪವಾಸವಿದ್ದು, ತನ್ನ ಬಂಧುಬಳಗದವರೊಡನೆ, ನಾನಾ ವಿಧವಾದ ಭಕ್ಷ್ಯಭೋಜ್ಯಾದಿ ಪೂಜೋಪಕರಣದ್ರವ್ಯಗಳನ್ನು ತೆಗೆದುಕೊಂಡು ಶಿವನನ್ನು ಪೂಜಿಸಬೇಕೆಂದು ಊರಿನ ಹೊರಗೆ (ಇರುವ ಶಿವದೇವಾಲಯಕ್ಕೆ) ಬಂದನು.

೧೧. ಶಿವನಲ್ಲಿಯೇ ನೆಟ್ಟಮನಸ್ಸುಳ್ಳ ಆ ಭಕ್ತನು ಊರಹೊರಗಿದ್ದ ಶಿವಾಲಯವನ್ನು ಸೇರಿ ಒಳ್ಳೆಯ ಮನಸ್ಸಿನಿಂದ ತನ್ನ ಅಂತಸ್ತಿಗೆ ಅನುಗುಣವಾಗಿ ಶಂಕರನನ್ನು ಪೂಜಿಸಿದನು.

೧೨. ಇತ್ತಲಾ ಗುಣನಿಧಿಯು ಹಸಿವಿನಿಂದ ಕಂಗೆಟ್ಟು, ಆ ಪಕ್ವಾನ್ನಗಳ ಘಮಘಮಿಸುವ ವಾಸನೆಯನ್ನು ಮೂಸಿನೋಡಿ ಅವನನ್ನು ಹಿಂಬಾಲಿಸಿದನು.

ಇದಮನ್ನಂ ಮಯಾ ಗ್ರಾಹ್ಯಂ ಶಿವಾಯೋಪಕೃತಂ ನಿಶಿ ।
ಸುಪ್ತೇ ಶೈವಜನೇ ದೈವಾತ್ಸರ್ವಸ್ಮಿನ್ನಿವಿಧಂ ಮಹತ್ ॥ ೧೩ ॥

ಇತ್ಯಾಶಾಮವಲಂಬ್ಯಾಥ ದ್ವಾರಿ ಶಂಭೋರುಪಾವಿಶತ್ ।
ದದರ್ಶ ಚ ಮಹಾಪೂಜಾಂ ತೇನ ಭಕ್ತೇನ ನಿರ್ಮಿತಾಂ ॥ ೧೪ ॥

ವಿಧಾಯ ನೃತ್ಯಗೀತಾದಿ ಭಕ್ತಾಸ್ಸುಪ್ತಾಃ ಕ್ಷಣೇ ಯದಾ ।
ನೈವೇದ್ಯಂ ಸ ತದಾ ದಾತುಂ ಭರ್ಗಾಗಾರಂ ವಿವೇಸ ಹ ॥ ೧೫ ॥

ದೀಪಂ ಮಂದಪ್ರಭಂ ದೃಷ್ಟ್ವಾ ಪಕ್ವಾನ್ನವೀಕ್ಷಣಾಯ ಸಃ ।
ನಿಜಚೈಲಾಂಚಲಾದ್ವರ್ತಿಂ ಕೃತ್ವಾ ದೀಪಂ ಚ ಕಾಶಯೇತ್ ॥ ೧೬ ॥

ಯಜ್ಞದತ್ತಾತ್ಮಜಸ್ಸೋಽಥ ಶಿವನೈವೇದ್ಯಮಾದರಾತ್ ।
ಜಗ್ರಾಹ ಸಹಸಾ ಪ್ರೀತ್ಯಾ ಪಕ್ವಾನ್ನಂ ಬಹುಶಸ್ತತಃ ॥ ೧೭ ॥

---

೧೩. ಶಿವನಿಗೆ ನೈವೇದ್ಯಮಾಡಿದ ಈ ಬಗೆಯ ತಿಂಡಿತೀರ್ಥಗಳೆಲ್ಲವನ್ನೂ ರಾತ್ರಿ ಈ ಶಿವನ ಭಕ್ತರು ಎಲ್ಲರಿಗೂ ನಿದ್ರೆ ಹಿಡಿದಮೇಲೆ ನಾನು ತೆಗೆದುಕೊಂಡು ಬಿಡಬೇಕು.

೧೪. ಹೀಗೆಂಬ ಆಶೆಯಿಂದ ಆ ದೇವಾಲಯದ ಬಾಗಿಲಲ್ಲಿಯೇ ಕುಳಿತು ಕೊಂಡು ಆ ಭಕ್ತನು ಶಿವನಿಗೆ ಮಾಡುತ್ತಿದ್ದ ಮಹಾ ಪೂಜೆಯೆಲ್ಲವನ್ನೂ ನೋಡಿದನು.

೧೫. ನೃತ್ಯಗೀತಾದಿಗಳನ್ನು ನೆರವೇರಿಸಿ ಭಕ್ತರೆಲ್ಲರೂ ಮಲಗಿದಮೇಲೆ ಆ ಗುಣನಿಧಿಯು ಆ ನೈವೇದ್ಯವನ್ನು ತೆಗೆದುಕೊಂಡುಬರುವುದಕ್ಕಾಗಿ ಶಿವನ ಲಿಂಗವಿದ್ದ ಗರ್ಭಗೃಹಕ್ಕೆ ಪ್ರವೇಶಿಸಿದನು.

೧೬. ಅಲ್ಲಿದ್ದ ದೀಪವು ಮಂಕಾಗಿದ್ದುದನ್ನು ಕಂಡು ಪಕ್ವಾನ್ನಗಳನ್ನು ನೋಡಬೇಕೆಂಬಾಸೆಯಿಂದ ತನ್ನ ಬಟ್ಟೆಯ ಅಂಚಿನಿಂದಲೇ ಬತ್ತಿಯನ್ನು ಮಾಡಿ ದೀಪವನ್ನು ಬೆಳಗಿಸಿದನು.

೧೭. ಆ ಗುಣನಿಧಿಯು ಶಿವನಿಗೆ ನಿವೇದಿತವಾಗಿದ್ದ ಆ ಪಕ್ವಾನ್ನವನ್ನು ಹೆಚ್ಚಾಗಿ ಬಹು ಪ್ರೀತಿಯಿಂದ ಅಲ್ಲಿಂದ ಆತುರದಿಂದ ತೆಗೆದುಕೊಂಡನು.

ತತಃ ಪಕ್ವಾನ್ನಮಾದಾಯ ತ್ವರಿತಂ ಗಚ್ಛತೋ ಬಹಿಃ ।
ತಸ್ಯ ಪಾದತಲಾಘಾತಾತ್ಪ್ರಸುಪ್ತಃ ಕೋಽಪ್ಯಬುಧ್ಯತ ॥ ೧೮ ॥

ಕೋಽಯಂ ಕೋಽಯಂ ತ್ವರಾಪನ್ನೋ ಗೃಹ್ಯತಾಂ ಗೃಹ್ಯತಾಮಸೌ ।
ಇತಿ ಚುಕ್ರೋಶ ಸ ಜನೋ ಗಿರಾ ಭಯಮಹೋಚ್ಚಯಾ ॥ ೧೯ ॥

ಯಾವದ್ಭಯಾತ್ಸಮಾಗತ್ಯ ತಾವತ್ಸ ಪುರರಕ್ಷಕೈಃ ।
ಪಲಾಯಮಾನೋ ನಿಹತಃ ಕ್ಷಣಾದಂಧತ್ವಮಾಗತಃ ॥ ೨೦ ॥

ಅಭಕ್ಷಯಚ್ಚ ನೈವೇದ್ಯಂ ಯಜ್ಞದತ್ತಾತ್ಮಜೋ ಮುನೇ ।
ಶಿವಾನುಗ್ರಹತೋ ನೂನಂ ಭಾವಿಪುಣ್ಯಬಲಾನ್ನ ಸಃ ॥ ೨೧ ॥

ಅಥ ಬದ್ಧಸ್ಸಮಾಗತ್ಯ ಪಾಶಮುದ್ಗರಪಾಣಿಭಿಃ ।
ನಿನೀಷುಭಿಃ ಸಂಯಮನೀಂ ಯಾಮ್ಯೈಸ್ಸ ವಿಕಟೈರ್ಭಟೈಃ ॥ ೨೨ ॥

---

೧೮. ಅಲ್ಲಿಂದ ಪಕ್ವಾನ್ನವನ್ನೆತ್ತಿಕೊಂಡು ಬೇಗಬೇಗನೆ ಹೊರಗಡೆ ಹೋಗು ತ್ತಿದ್ದಾಗ ಆತನ ಕಾಲು ತುಳಿತದಿಂದ ಮಲಗಿದ್ದವನೊಬ್ಬನು ಎಚ್ಚೆತ್ತನು.

೧೯. ಯಾರಿವನು? ಯಾರಿವನು? ಆತುರದಿಂದ ಓಡಿಹೋಗುತ್ತಿದಾನೆ, ಹಿಡಿಯಿರಿ, ಹಿಡಿಯಿರಿ, ಎಂದು ಆ ಮನುಷ್ಯನು ಭಯದಿಂದ ಮತ್ತಷ್ಟು ಗಟ್ಟಿಯಾಗಿ ಕಿರಿಚಿಕೊಂಡನು.

೨೦ ಅವನು ಭಯದಿಂದ ಹೊರಗೆ ಬಂದು ಓಡಿಹೋಗುವಷ್ಟರಲ್ಲಿಯೇ, ಊರಿನ ಕಾವಲುಗಾರರು ಬಂದು ಕಣ್ಣು ಕತ್ತಲುಹಿಡಿದು ತತ್ತಳಿಸುತ್ತಿದ್ದ ಆ ಗುಣ ನಿಧಿಯನ್ನು ಕ್ಷಣಮಾತ್ರದಲ್ಲಿ ಹಿಡಿದು ಕೊಂದುಬಿಟ್ಟರು.

೨೧. ಎಲೈ ಮುನಿಯೆ, ಆ ಯಜ್ಞದತ್ತನ ಮಗನು ಶಿವನ ಅನುಗ್ರಹ ದಿಂದಲೂ, ಮುಂದೆ ಒದಗುವ ಪುಣ್ಯದ ಬಲದಿಂದಲೂ ಆ ನೈವೇದ್ಯವನ್ನು ತಿನ್ನಲಿಲ್ಲ.

೨೨. ಅನಂತರ ಪಾಶಮುದ್ಗರಗಳನ್ನು ಕೈಯಲ್ಲಿ ಹಿಡಿದುಕೊಂಡು ಭಯಂಕರ ರಾಗಿ ತೋರುತ್ತಿರುವ, ಯಮನ ಭಟರು, ಅವನನ್ನು ಯಮನ ಪಟ್ಟಣವಾದ ಸಂಯ ಮನಿಗೆ ಕೊಂಡೊಯ್ಯಬೇಕೆಂದು ಹಗ್ಗದಿಂದ ಬಿಗಿದರು.

ತಾವತ್ಪಾರಿಷದಾಃ ಪ್ರಾಪ್ತಾಃ ಕಿಂಕಿಣೀಜಾಲಮಾಲಿನಃ ।
ದಿವ್ಯಂ ವಿಮಾನಮಾದಾಯ ತಂ ನೇತುಂ ಶೂಲಪಾಣಯಃ ॥ ೨೩ ॥

॥ ಶಿವಗಣಾ ಊಚುಃ ॥

ಮುಂಚತೈನಂ ದ್ವಿಜಂ ಯಾಮ್ಯಾ ಗಣಾಃ ಪರಮಧಾರ್ಮಿಕಂ ।
ದಂಡಯೋಗ್ಯೋ ನ ವಿಪ್ರೋಽಸೌ ದಗ್ಧಃ ಸರ್ವಾಘಸಂಚಯಃ ॥ ೨೪ ॥

ಇತ್ಯಾಕರ್ಣ್ಯ ವಚಸ್ತೇ ಹಿ ಯಮರಾಜಗಣಾಸ್ತತಃ ।
ಮಹಾದೇವಗಣಾನಾಹುರ್ಬಭೂವುಶ್ಚಕಿತಾ ಭೃಶಂ ॥ ೨೫ ॥

ಶಂಭೋರ್ಗಣಾನಥಾಲೋಕ್ಯ ಭೀತೈಸ್ತೈರ್ಯಮಕಿಂಕರೈಃ ।
ಅವಾದಿ ಪ್ರಣತೈರಿತ್ಥಂ ದುರ್ವೃತ್ತೋಽಯಂ ಗಣಾ ದ್ವಿಜಃ ॥ ೨೬ ॥

॥ ಯಮಗಣಾ ಊಚುಃ ॥

ಕುಲಾಚಾರಂ ಪ್ರತೀಯೈಷ ಪಿತ್ರೋರ್ವಾಕ್ಯಪರಾಙ್ಮುಖಃ ।
ಸತ್ಯಶೌಚಪರಿಭ್ರಷ್ಟಸ್ಸಂಧ್ಯಾಸ್ನಾನವಿವರ್ಜಿತಃ ॥ ೨೭ ॥

---

೨೩. ಅಷ್ಟರಲ್ಲಿಯೇ, ಕಿರುಗೆಜ್ಜೆಗಳ ಹಾರಗಳನ್ನು ಧರಿಸಿ, ಶೂಲವನ್ನು ಕೈಲಿಡಿದಿರುವ ಶಿವನ ಕಿಂಕರರು ದಿವ್ಯವಾದ ವಿಮಾನವನ್ನು ತೆಗೆದುಕೊಂಡು, ಅವನನ್ನು ತಮ್ಮ ಲೋಕಕ್ಕೆ ಕರೆದೊಯ್ಯಲು ಬಂದರು.

೨೪. ಶಿವಗಣಗಳು ಹೇಳಿದರು:—ಎಲೈ ಯಮಭಟರೇ, ಪರಮ ಧಾರ್ಮಿಕನಾದ ಈ ಬ್ರಾಹ್ಮಣನನ್ನು ಬಿಡಿರಿ. ಈ ಬ್ರಾಹ್ಮಣನು ದಂಡನೆಗರ್ಹನಾದವನಲ್ಲ. ಈತನ ಪಾಪಗಳೆಲ್ಲವೂ ಸುಟ್ಟು ಬೂದಿಯಾಗಿವೆ ಎನ್ನಲು,

೨೫-೨೭. ಈ ಮಾತನ್ನು ಕೇಳುತ್ತಲೇ ಆ ಯಮಭಟರು ಶಿವನ ಗಣಗಳಾದ ಆ ಪ್ರಮಥರನ್ನು ನೋಡಿ ಹೆದರಿ ಅವರಿಗೆ ನಮಸ್ಕರಿಸಿ, ಎಲೈ ಶಿವಗಣಗಳಿರಾ! ಈ ಬ್ರಾಹ್ಮಣನು ಬಹಳ ಕೆಟ್ಟ ಕೆಲಸಗಳನ್ನು ಮಾಡಿದವನು. ಇವನು ತನ್ನ ಕುಲದ ಆಚಾರವನ್ನೆಲ್ಲವನ್ನೂ ಬಿಟ್ಟು ತಾಯಿತಂದೆಯರ ಮಾತನ್ನು ಕೇಳದೆ, ಸತ್ಯ, ಶೌಚಗಳನ್ನು ಬಿಟ್ಟುಬಿಟ್ಟು, ಸ್ನಾನ ಸಂಧ್ಯಾದಿಗಳನ್ನೂ ನಿರ್ಲಕ್ಷಿಸಿದವನು.

ಆಸ್ತಾಂ ದೂರೇऽಸ್ಯ ಕರ್ಮಾನ್ಯಚ್ಛಿವನಿರ್ಮಾಲ್ಯಲಂಘುಕಃ ।
ಪ್ರತ್ಯಕ್ಷತೋऽತ್ರ ವೀಕ್ಷಧ್ವಮಸ್ಪೃಶ್ಯೋऽಯಂ ಭವಾದೃಶಾಂ ॥ ೨೮ ॥

ಶಿವನಿರ್ಮಾಲ್ಯಭೋಕ್ತಾರಶ್ಶಿವನಿರ್ಮಾಲ್ಯಲಂಘಕಾಃ ।
ಶಿವನಿರ್ಮಾಲ್ಯದಾತಾರಃ ಸ್ಪರ್ಶಸ್ತೇಷಾಂ ಹ್ಯಪುಣ್ಯಕೃತ್ ॥ ೨೯ ॥

ವಿಷಮಾಲೋಕ್ಯ ವಾ ಪೇಯಂ ಶ್ರೇಯೋ ವಾ ಸ್ಪರ್ಶನಂ ಪರಂ ।
ಸೇವಿತವ್ಯಂ ಶಿವಸ್ವಂ ನ ಪ್ರಾಣೈಃ ಕಂಠಗತೈರಪಿ ॥ ೩೦ ॥

ಯೂಯಂ ಪ್ರಮಾಣಂ ಧರ್ಮೇಷು ಯಥಾ ನ ಚ ತಥಾ ವಯಂ ।
ಅಸ್ತಿ ಚೇದ್ಧರ್ಮಲೇಶೋऽಸ್ಯ ಗಣಾಸ್ತಂ ಶೃಣು ಭೋ ವಯಂ ॥ ೩೧ ॥

ಇತ್ಥಂ ತದ್ವಾಕ್ಯಮಾಕರ್ಣ್ಯ ಯಾಮಾನಾಂ ಶಿವಕಿಂಕರಾಃ ।
ಸ್ಮೃತ್ವಾ ಶಿವಪದಾಂಭೋಜಂ ಪ್ರೋಚುಃ ಪಾರಿಷದಾಸ್ತು ತಾನ್ ॥ ೩೨ ॥

೨೮. ಈತನ ಬಾಕಿ ದುಷ್ಕೃತ್ಯಗಳೆಲ್ಲವೂ ಹಾಗಿರಲಿ. ಈಗ ಪ್ರತ್ಯಕ್ಷವಾಗಿಯೇ ನೋಡಿರಿ. ಶಿವನಿರ್ಮಾಲ್ಯವನ್ನು ಲಂಘಿಸಿರುವನು ನಿಮ್ಮಂಥವರು ಇವನನ್ನು ಮುಟ್ಟಲೂಬಾರದು.

೨೯. ಶಿವನಿರ್ಮಾಲ್ಯವನ್ನು ಉಪಯೋಗಿಸುವವರೂ, ಅದನ್ನು ಕಡೆಗಣಿಸುವವರೂ, ಮತ್ತು ಆ ನಿರ್ಮಾಲ್ಯವನ್ನು ನೀಡುವವರು ಯಾರು ಇರುವರೋ ಅವರನ್ನು ಮುಟ್ಟಲು ಪಾಪವು ಲಭಿಸುವುದು.

೩೦. ವಿಷವನ್ನಾದರೂ ನೋಡಿ ಕುಡಿಯಬಹುದು. ಆದರೆ ಇಂಥವರನ್ನು ಮುಟ್ಟಬಾರದು. ಪ್ರಾಣಗಳು ಗಂಟಲವರೆಗೆ ಹತ್ತಿ ಬರುತ್ತಿರುವಾಗಲೂ ಸಹ ಶಿವನ ಸ್ವತ್ತನ್ನು ಮುಟ್ಟಬಾರದು.

೩೧. ಧರ್ಮವನ್ನು ನಿರ್ಣಯಿಸುವ ವಿಚಾರದಲ್ಲಿ ನೀವು ಪ್ರಮಾಣವಾಗಿರುವಂತೆ ನಾವು ಇಲ್ಲ. ಎಲೈ ಶಿವಗಣಗಳಿರಾ, ಈ ಬ್ರಾಹ್ಮಣನ ಧರ್ಮವು ಒಂದು ಚೂರಿನಷ್ಟು ಇದ್ದರೂ ನಾವು ಅದನ್ನು ಕೇಳಬೇಕೆಂದಿರುವೆವು. ದಯವಿಟ್ಟು ಅದನ್ನು ನಮಗೆ ಹೇಳಬೇಕು ಎಂದು ಪ್ರಾರ್ಥಿಸಲು,

೩೨. ಆ ಯಮಭಟರ ಮಾತನ್ನು ಕೇಳಿ ಶಿವನ ಪಾರಿಷದರು ಪರಶಿವನ ಪದಕಮಲಗಳನ್ನು ಧ್ಯಾನಿಸಿ ಅವರನ್ನು ಕುರಿತು ಇಂತೆಂದರು.

॥ ಶಿವಕಿಂಕರಾ ಊಚುಃ ॥

ಕಿಂಕರಾಶ್ಶಿವಧರ್ಮಾ ಯೇ ಸೂಕ್ಷ್ಮಾಸ್ತೇ ತು ಭವಾದೃಶೈಃ ।
ಸ್ಥೂಲಲಕ್ಷ್ಯೈಃ ಕಥಂ ಲಕ್ಷ್ಯಾ ಲಕ್ಷ್ಯಾ ಯೇ ಸೂಕ್ಷ್ಮದೃಷ್ಟಿಭಿಃ ॥ ೩೩ ॥

ಅನೇನಾನೇನಸಾ ಕರ್ಮ ಯತ್ಕೃತಂ ಶೃಣುತೇಹ ತತ್ ।
ಯಜ್ಞದತ್ತಾತ್ಮಜೇನಾಥ ಸಾವಧಾನತಯಾ ಗಣಾಃ ॥ ೩೪ ॥

ಪತಂತೀ ಲಿಂಗಶಿರಸಿ ದೀಪಚ್ಛಾಯಾ ನಿವಾರಿತಾ ।
ಸ್ವಚೈಲಾಂಚಲತೋಽನೇನ ದತ್ವಾ ದೀಪದಶಾಂ ನಿಶಿ ॥ ೩೫ ॥

ಅಪರೋಽಪಿ ಪರೋ ಧರ್ಮೋ ಯಾತಸ್ತತ್ರಾಸ್ಯ ಕಿಂಕರಾಃ ।
ಶೃಣ್ವತಃ ಶಿವನಾಮಾನಿ ಪ್ರಸಂಗಾದಪಿ ಗೃಹ್ಣತಾಂ ॥ ೩೬ ॥

೩೩. ಎಲೈ ಯಮಕಿಂಕರರೇ, ಸೂಕ್ಷ್ಮ ದೃಷ್ಟಿಗಳು ಮಾತ್ರ ಗಮನಿಸಬಹುದಾದ, ಪರಮ ಸೂಕ್ಷ್ಮವಾದ ಶಿವಧರ್ಮಗಳನ್ನು ಸ್ಥೂಲದೃಷ್ಟಿಯುಳ್ಳ ನಿಮ್ಮಂಥವರಿಗೆ ಗೋಚರವಾಗುವುವೇ ?

೩೪. ಪಾಪರಹಿತನಾದ, ಈ ಯಜ್ಞದತ್ತದೀಕ್ಷಿತನ ಮಗನಾದ ಗುಣನಿಧಿಯು ಮಾಡಿದ ಅಂತಹ ಪುಣ್ಯ ಕೆಲಸವೇನು ಎಂದಲ್ಲವೇ ನಿಮ್ಮ ಆ ಶಂಕೆ? ಎಲೈ ಯಮಭಟರೇ, ಸಾವಧಾನವಾಗಿ ಕೇಳಿರಿ.

೩೫. ಇವನು ರಾತ್ರೆ, ತನ್ನ ಬಟ್ಟೆಯಂಚಿನಿಂದ ದೀಪದ ಬತ್ತಿಯನ್ನು ಮಾಡಿ ಅದನ್ನು ಹಚ್ಚಿದುದರಿಂದ, ಅದುವರೆಗೂ ಲಿಂಗದ ಮೇಲೆ ಬೀಳುತ್ತಿದ್ದ ನೆರಳು ಹೋಗಲಾಡಿಸಲ್ಪಟ್ಟಿತು.

೩೬. ಎಲೈ ಯಮಭಟರೇ, ಇವನು ಮಾಡಿದ ಮತ್ತೊಂದು ದೊಡ್ಡ ಧರ್ಮವನ್ನೂ ಕೇಳಿರಿ. ಪೂಜೆಯಕಾಲದಲ್ಲಿ ಶಿವನಾಮಾವಳಿಯನ್ನು ಆ ಭಕ್ತರು ಕೀರ್ತನ ಮಾಡುತ್ತಿದ್ದಾಗ ಇವನು ಆ ಶಿವನಾಮಗಳನ್ನು ಆಲಿಸಲಿಲ್ಲವೇ? ಇದೇ ಅವನು ಮಾಡಿದ ಮತ್ತೊಂದು ಧರ್ಮ.

ಭಕ್ತೇನ ವಿಧಿನಾ ಪೂಜಾ ಕ್ರಿಯಮಾಣಾ ನಿರೀಕ್ಷಿತಾ ।
ಉಪೋಷಿತೇನ ಭೂತಾಯಾಮನೇನಾಸ್ಥಿತಚೇತಸಾ ॥ ೩೭ ॥

ಶಿವಲೋಕಮಯಂ ಹ್ಯದ್ಯ ಗಂತಾsಸ್ಮಾಭಿಸ್ಸಹೈವ ತು ।
ಕಂಚಿತ್ಕಾಲಂ ಮಹಾಭಾಗಾನ್ಕರಿಷ್ಯತಿ ಶಿವಾನುಗಃ ॥ ೩೮ ॥

ಕಲಿಂಗರಾಜೋ ಭವಿತಾ ತತೋ ನಿರ್ಧೂತಕಲ್ಮಷಃ ।
ಏಷ ದ್ವಿಜವರೋ ನೂನಂ ಶಿವಪ್ರಿಯತರೋ ಯತಃ ॥ ೩೯ ॥

ಅನ್ಯತ್ಕಿಂಚಿನ್ನ ವಕ್ತವ್ಯಂ ಯೂಯಂ ಯಾತ ಯಥಾಗತಂ ।
ಯಮದೂತಾಸ್ಸ್ವಲೋಕಂ ತು ಸುಪ್ರಸನ್ನೇನ ಚೇತಸಾ ॥ ೪೦ ॥

॥ ಬ್ರಹ್ಮೋವಾಚಃ ॥

ಇತ್ಯಾಕರ್ಣ್ಯ ವಚಸ್ತೇಷಾಂ ಯಮದೂತಾ ಮುನೀಶ್ವರ ।
ಯಥಾಗತಂ ಯಯುಸ್ಸರ್ವೇ ಯಮಲೋಕಂ ಪರಾಙ್ಮುಖಾಃ ॥ ೪೧ ॥

---

೩೭. ಆ ಚತುರ್ದಶೀ ದಿವಸದಲ್ಲಿ ಭಕ್ತನು ವಿಧಿವತ್ತಾಗಿ ಪೂಜೆಮಾಡುತ್ತಿದ್ದುದನ್ನು, ಈ ಬ್ರಾಹ್ಮಣಪುತ್ರನು, ಅಲ್ಲಿಯವರೆಗೂ ಏನನ್ನೂ ತಿನ್ನದೆ ಉಪವಾಸವಿದ್ದು, ಮನಸ್ಸಿಟ್ಟು ನೋಡಿದನಲ್ಲವೇ ?

೩೮, ಈ ಪುಣ್ಯಪ್ರಭಾವದಿಂದ ಇವನು ಈಗ ನಮ್ಮೊಡನೆಯೇ ಶಿವಲೋಕಕ್ಕೆ ತೆರಳುವನು. ಅಲ್ಲದೆ ಕೆಲವುಕಾಲ ಶಿವನ ಅನುಚರನಾಗಿ ಮಹಾಭೋಗಗಳನ್ನನುಭವಿಸುವನು.

೩೯. ಬಳಿಕ ಪಾಪಲೇಶವೂ ಇಲ್ಲದ ಈ ಬ್ರಾಹ್ಮಣೋತ್ತಮನು, ಮುಂದೆ ಕಲಿಂಗದೇಶದ ಅರಸನಾಗುವನು. ಇದು ನಿಜವಾದುದು. ಏಕೆಂದರೆ ಇವನು ಶಿವನಿಗೆ ಬಹಳ ಬೇಕಾದವನಲ್ಲವೆ ?

೪೦. ಎಲೈ ಯಮದೂತರೇ, ನೀವು ಮತ್ತೇನನ್ನೂ ಹೇಳಬೇಕಾಗಿಲ್ಲ. ನೀವು ಹರ್ಷಚಿತ್ತರಾಗಿ, ಬಂದ ದಾರೀ ಹಿಡಿದು ನಿಮ್ಮ ಲೋಕಕ್ಕೆ ತೆರಳಿರಿ ಎಂದರು.

೪೧. ಬ್ರಹ್ಮನು ಹೇಳಿದನು :—ಓ ನಾರದ, ಶಿವದೂತರು ಹೇಳಿದ ಮಾತನ್ನು ಕೇಳಿ ಆ ಯಮದೂತರು ಮುಖವನ್ನು ಹಿಂದಿರುಗಿಸಿಕೊಂಡು ಬಂದ ಹಾಗೆಯೇ ತಮ್ಮ ಲೋಕಕ್ಕೆ ಹೊರಟುಹೋದರು.

ಸರ್ವಂ ನಿವೇದಯಾಮಾಸುಶ್ಯಮನಾಯ ಗಣಾ ಮುನೇ ।
ತದ್ವೃತ್ತಮಾದಿತಃ ಪ್ರೋಕ್ತಂ ಶಂಭುದೂತೈಶ್ಚ ಧರ್ಮತಃ　　॥ ೪೨ ॥

॥ ಧರ್ಮರಾಜ ಉವಾಚ ॥

ಸರ್ವೇ ಶೃಣುತ ಮದ್ವಾಕ್ಯಂ ಸಾವಧಾನತಯಾ ಗಣಾಃ ।
ತದೇವ ಪ್ರೀತ್ಯಾ ಕುರುತ ಮಚ್ಛಾಸನಪುರಸ್ಸರಂ　　॥ ೪೩ ॥

ಯೇ ತ್ರಿಪುಂಡ್ರಧರಾ ಲೋಕೇ ವಿಭೂತ್ಯಾ ಸಿತಯಾ ಗಣಾಃ ।
ತೇ ಸರ್ವೇ ಪರಿಹರ್ತವ್ಯಾ ನಾನೇತವ್ಯಾಃ ಕದಾಚನ　　॥ ೪೪ ॥

ಉದ್ಧೂಲನಕರಾ ಯೇ ಹಿ ವಿಭೂತ್ಯಾ ಸಿತಯಾ ಗಣಾಃ ।
ತೇ ಸರ್ವೇ ಪ್ರತಿಹರ್ತವ್ಯಾ ನಾನೇತವ್ಯಾಃ ಕದಾಚನ　　॥ ೪೫ ॥

ಶಿವವೇಷತಯಾ ಲೋಕೇ ಯೇನ ಕೇನಾಪಿ ಹೇತುನಾ ।
ತೇ ಸರ್ವೇ ಪರಿಹರ್ತವ್ಯಾ ನಾನೇತವ್ಯಾಃ ಕದಾಚನ　　॥ ೪೬ ॥

---

೪೨. ಎಲೈ ಮುನಿಯೇ, ಆ ಯಮಭಟರೆಲ್ಲರೂ, ಯಮಲೋಕಕ್ಕೆ ಹಿಂದಿರುಗಿದ ಮೇಲೆ ಆ ವೃತ್ತಾಂತವನ್ನೂ, ಶಿವದೂತರು ನುಡಿದ ಧರ್ಮಸೂಕ್ಷ್ಮವನ್ನೂ ಮೊದಲಿನಿಂದ ಹಿಡಿದು ಕೊನೆಯವರೆಗೆ ಯಮನಿಗೆ ತಿಳಿಸಿದರು.

೪೩. ಯಮನು ಹೇಳಿದನು:—ಎಲೈ ಭಟರಿರಾ, ಎಚ್ಚರಿಕೆಯಿಂದ ಈ ನನ್ನ ಮಾತನ್ನು ಕೇಳಿರಿ. ಅದನ್ನೇ ನನ್ನ ಅಪ್ಪಣೆಯೆಂದು ತಿಳಿದು ಪ್ರೀತಿಯಿಂದ ನೆರವೇರಿಸಿ.

೪೪. ಎಲೈ ಭಟರೇ, ಯಾರು ಪ್ರಪಂಚದಲ್ಲಿ ವಿಭೂತಿಯನ್ನು ತ್ರಿಪುಂಡ್ರವಾಗಿ ಧರಿಸಿರುವರೋ ಅವರೆಲ್ಲರನ್ನೂ ನೀವು ಬಿಟ್ಟುಬಿಡಿರಿ. ಎಂದಿಗೂ ಅವರನ್ನು ಇಲ್ಲಿಗೆ ಕರೆತರಬೇಕಾಗಿಲ್ಲ.

೪೫. ಯಾರು ಬಿಳಿದಾದ ವಿಭೂತಿಯನ್ನು ಮಾಡಿಕೊಳ್ಳುವರೋ (ಮೈಗೆ ಹಚ್ಚಿಕೊಳ್ಳುವರೋ) ಅವರೆಲ್ಲರನ್ನೂ ನೀವು ಬಿಟ್ಟುಬಿಡಬೇಕು ಎಂದಿಗೂ ಕರೆತರಬಾರದು.

೪೬. ಶಿವನ ವೇಷವನ್ನು ಧರಿಸಿರುವರೆಂದಾಗಲೀ ಅಥವಾ ಮತ್ತಾವ ಕಾರಣದಿಂದಲಾದರೂ ಆಗಲಿ ಅವರೆಲ್ಲರನ್ನೂ ಬಿಟ್ಟುಬಿಡಬೇಕಲ್ಲದೆ, ಇಲ್ಲಿಗೆ ಎಂದಿಗೂ ಕರೆದುಕೊಂಡು ಬರಬಾರದು.

**ಯೇ ರುದ್ರಾಕ್ಷಧರಾ ಲೋಕೇ ಜಟಾಧಾರಿಣ ಏವ ಯೇ ।**
**ತೇ ಸರ್ವೇ ಪರಿಹರ್ತವ್ಯಾ ನಾನೇತವ್ಯಾಃ ಕದಾಚನ ॥ ೪೭ ॥**

**ಉಪಜೀವನಹೇತೋಶ್ಚ ಶಿವವೇಷಧರಾ ಹಿ ಯೇ ।**
**ತೇ ಸರ್ವೇ ಪರಿಹರ್ತವ್ಯಾ ನಾನೇತವ್ಯಾಃ ಕದಾಚನ ॥ ೪೮ ॥**

**ದಂಭೇನಾಪಿ ಚ್ಛಲೇನಾಪಿ ಶಿವವೇಷಧರಾ ಹಿ ಯೇ ।**
**ತೇ ಸರ್ವೇ ಪರಿಹರ್ತವ್ಯಾ ನಾನೇತವ್ಯಾಃ ಕದಾಚನ ॥ ೪೯ ॥**

**ಏವಮಾಜ್ಞಾಪಯಾಮಾಸ ಸ ಯಮೋ ನಿಜಕಿಂಕರಾನ್ ।**
**ತಥೇತಿ ಮತ್ವಾ ತೇ ಸರ್ವೇ ತೂಷ್ಣೀಮಾಸಂಛುಚಿಸ್ಮಿತಾಃ ॥ ೫೦ ॥**

**॥ ಬ್ರಹ್ಮೋವಾಚ ॥**

**ಪಾರ್ಷದೈರ್ಯಮದೂತೇಭ್ಯೋ ಮೋಚಿತಸ್ತ್ವಿತಿ ಸ ದ್ವಿಜಃ ।**
**ಶಿವಲೋಕಂ ಜಗಾಮಾಶು ತೈರ್ಗಣೈಶ್ಶುಚಿಮಾನಸಃ ॥ ೫೧ ॥**

---

೪೭. ಲೋಕದಲ್ಲಿ ಯಾರು ರುದ್ರಾಕ್ಷಿಗಳನ್ನು ಧರಿಸುವರೋ, ಯಾರು ಜಟೆಗಳನ್ನು ಬಿಟ್ಟಿರುವರೋ ಅವರೆಲ್ಲರ ತಂಟೆಗೂ ಹೋಗಬೇಡಿ. ಎಂದಿಗೂ ಅವರನ್ನು ಇಲ್ಲಿಗೆ ಕರೆತರಲಾಗದು.

೪೮. ತಮ್ಮ ಹೊಟ್ಟೆಯನ್ನು ಹೊರೆದುಕೊಳ್ಳಲೋಸುಗ ಯಾರು ಶಿವನ ವೇಷವನ್ನು ಧರಿಸುವರೋ ಅಂಥವರನ್ನೂ ಸಹ ನೀವು ಬಿಟ್ಟುಬಿಡಬೇಕಲ್ಲದೆ ಇಲ್ಲಿಗೆ ಕರೆತರಬಾರದು.

೪೯. ಯಾರು ಡಂಭಾಚಾರಕ್ಕಾಗಿಯಾಗಲೀ, ಮತ್ತೊಬ್ಬರನ್ನು ಮೋಸಗೊಳಿಸಲೆಂದಾಗಲೀ, ಶಿವನ ವೇಷವನ್ನು ಧರಿಸುವರೋ ಅವರೆಲ್ಲರನ್ನೂ ಬಿಟ್ಟುಬಿಡಿ, ಇಲ್ಲಿಗೆ ಕರೆತರಬೇಡಿ.

೫೦. ಈ ರೀತಿಯಾಗಿ ಆ ಯಮನು ತನ್ನ ಆಳುಗಳಿಗೆ ಅಪ್ಪಣೆಮಾಡಿದನು. ಹಾಗೆಯೇ ಆಗಲೆಂದು ಅವರೆಲ್ಲರೂ ನಗುಮುಖವುಳ್ಳವರಾಗಿ ಸುಮ್ಮನಾದನು.

೫೧. ಬ್ರಹ್ಮನು ಹೇಳಿದನು :— ಆ ಗುಣನಿಧಿಯೆಂಬ ಬ್ರಾಹ್ಮಣ ಕುಮಾರನನ್ನು ಯಮದೂತರ ದೆಸೆಯಿಂದ ಈರೀತಿ ಶಿವಕಿಂಕರರು ಬಿಡಿಸಲು, ಅವನು ಆ ಪಾರಿಷದರೊಡನೆಯೇ, ಶುದ್ಧಹೃದಯದಿಂದ, ಬೇಗನೆ ಶಿವಲೋಕಕ್ಕೆ ತೆರಳಿದನು.

ತತ್ರ ಭುಕ್ತ್ವಾಖಿಲಾನ್ಭೋಗಾನ್ಸಂಸೇವ್ಯ ಚ ಶಿವಾಶಿವ್‌ ।
ಅರಿಂದಮಸ್ಯ ತನಯಃ ಕಲಿಂಗಾಧಿಪತೇರಭೂತ್ ॥ ೫೨ ॥

ದಮ ಇತ್ಯಭಿಧಾನೋಽಭೂಚ್ಛಿವಸೇವಾಪರಾಯಣಃ ।
ಬಾಲೋಽಪಿ ಶಿಶುಭಿಃ ಸಾಕಂ ಶಿವಭಕ್ತಿಂ ಚಕಾರ ಸಃ ॥ ೫೩ ॥

ಕ್ರಮಾದ್ರಾಜ್ಯಮವಾಪಾಥ ಪಿತುರ್ಯುಪರತೇ ಯುವಾ ।
ಪ್ರೀತ್ಯಾ ಪ್ರವರ್ತಯಾಮಾಸ ಶಿವಧರ್ಮಾಂಶ್ಚ ಸರ್ವಶಃ ॥ ೫೪ ॥

ನಾನ್ಯಂ ಧರ್ಮಂ ಸ ಜಾನಾತಿ ದುರ್ದಮೋ ಭೂಪತಿರ್ದಮಃ ।
ಶಿವಾಲಯೇಷು ಸರ್ವೇಷು ದೀಪದಾನಾದೃತೇ ದ್ವಿಜ ॥ ೫೫ ॥

ಗ್ರಾಮಾಧೀಶಾನ್ಸಮಾಹೂಯ ಸರ್ವಾನ್ಸ್ವವಿಷಯಸ್ಥಿತಾನ್ ।
ಇತ್ಥಮಾಜ್ಞಾಪಯಾಮಾಸ ದೀಪಾ ದೇಯಾಶ್ಶಿವಾಲಯೇ ॥ ೫೬ ॥

---

೫೨. ಅಲ್ಲಿ ಅನೇಕ ದಿವ್ಯಭೋಗಗಳನ್ನನುಭವಿಸಿ, ಶಿವಪಾರ್ವತಿಯರನ್ನು ಸೇವಿಸುತ್ತಿದ್ದು ಕೊನೆಗೆ ಕಳಿಂಗದೇಶದ ಅರಸನಾದ ಅರಿಂದಮನೆಂಬ ದೊರೆಗೆ ಮಗನಾಗಿ ಹುಟ್ಟಿದನು.

೫೩. ಆ ಬಾಲಕನಿಗೆ ದಮನೆಂದು ಹೆಸರನ್ನಿಟ್ಟರು. ಅವನು ಯಾವಾಗಲೂ ಶಿವಸೇವಾನಿರತನಾಗಿದ್ದನು. ಹುಡುಗನಾಗಿದ್ದಾಗಲೂ ಅವನು ತನ್ನ ಜೊತೆಯ ಹುಡುಗರೊಡನೆ ಶಿವನಲ್ಲಿ ಭಕ್ತಿಯನ್ನು ಬೆಳೆಸುತ್ತಿದ್ದನು.

೫೪. ತನ್ನ ತಂದೆಯು ತೀರಿಹೋದಮೇಲೆ ತರುಣನಾದ ಆ ದಮನು ಕ್ರಮಪ್ರಾಪ್ತವಾದ ರಾಜ್ಯಭಾರವನ್ನು ಕೈಗೊಂಡು ಎಲ್ಲೆಲ್ಲಿಯೂ ಶೈವಧರ್ಮಗಳನ್ನು ಪ್ರೀತಿಯಿಂದ ಪ್ರಚಾರಗೊಳಿಸಿದನು.

೫೫. ಮೊದಲು ಬ್ರಾಹ್ಮಣನಾಗಿದ್ದು, ಈಗ ಮತ್ತೊಬ್ಬರಿಂದ ಗೆಲ್ಲಲಸಾಧ್ಯವಾದ ಅರಸಾಗಿರುವ ಆ ದಮನು, ಪ್ರತಿಯೊಂದು ಶಿವದೇವಾಲಯದಲ್ಲೂ ದೀಪ ಹಚ್ಚುವುದೊಂದನ್ನು ಬಿಟ್ಟು ಬೇರೆ ಧರ್ಮವನ್ನು ಅರಿಯದಾದನು.

೫೬-೫೭. ಅವನು ತನ್ನ ದೇಶದಲ್ಲಿರುವ ಪ್ರತಿಯೊಂದು ಊರಿನ ಮುಖಂಡರನ್ನೂ ಕರೆಸಿ ಈರೀತಿ ಅಪ್ಪಣೆಮಾಡಿದನು. ಶಿವಾಲಯಗಳಲ್ಲಿ ನಿತ್ಯವೂ ದೀಪಗಳನ್ನು ತಪ್ಪದೆ ಹಚ್ಚಬೇಕು. ಇಲ್ಲದಿದ್ದರೆ ಖಂಡಿತವಾಗಿಯೂ ಅಂಥವನನ್ನು ದಂಡನೆಗೆ ಒಳ

ಅನ್ಯಥಾ ಸತ್ಯಮೇವೇದಂ ಸ ಮೇ ದಂಡ್ಯೋ ಭವಿಷ್ಯತಿ ।
ದೀಪದಾನಾಚ್ಛಿವಸ್ತುಷ್ಟೋ ಭವತೀತಿ ಶ್ರುತೀರಿತಂ ॥ ೫೭ ॥

ಯಸ್ಯ ಯಸ್ಯಾಭಿತೋ ಗ್ರಾಮಂ ಯಾವಂತಶ್ಚ ಶಿವಾಲಯಾಃ ।
ತತ್ರ ತತ್ರ ಸದಾ ದೀಪೋ ದ್ಯೋತನೀಯೋಽವಿಚಾರಿತಂ ॥ ೫೮ ॥

ಮಮಾಜ್ಞಾಭಂಗದೋಷೇಣ ಶಿರಶ್ಛೇತ್ಸ್ಯಾಮ್ಯಸಂಶಯಂ ।
ಇತಿ ತದ್ಭಯತೋ ದೀಪಾ ದೀಪ್ತಾಃ ಪ್ರತಿಶಿವಾಲಯಂ ॥ ೫೯ ॥

ಅನೇನೈವ ಸ ಧರ್ಮೇಣ ಯಾವಜ್ಜೀವಂ ದಮೋ ನೃಪಃ ।
ಧರ್ಮರ್ದ್ಧಿಂ ಮಹತೀಂ ಪ್ರಾಪ್ಯ ಕಾಲಧರ್ಮವಶಂ ಗತಃ ॥ ೬೦ ॥

ಸ ದೀಪವಾಸನಾಯೋಗಾದ್ಬಹೂನ್ದೀಪಾನ್ಪ್ರದೀಪ್ಯ ವೈ ।
ಅಲಕಾಯಾಃ ಪತಿರಭೂತ್ಪ್ರತ್ನದೀಪಶಿಖಾಶ್ರಯಃ ॥ ೬೧ ॥

---

ಪಡಿಸುತ್ತೇನೆ. ಈರೀತಿ ದೀಪಗಳನ್ನು ಹಚ್ಚುವುದರಿಂದ ಶಿವನು ಸುಪ್ರೀತನಾಗುವನೆಂದು ಶ್ರುತಿಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ.

೫೮. ಯಾವ ಯಾವ ಊರಿನ ಸುತ್ತಲೂ ಎಷ್ಟೆಷ್ಟು ಶಿವದೇವಸ್ಥಾನಗಳಿರುವುವೋ ಅವುಗಳೆಲ್ಲದರಲ್ಲೂ ಸ್ವಲ್ಪವೂ ವಿಚಾರಮಾಡದೆ ಎಂದೆಂದಿಗೂ ದೀಪವು ಬೆಳಗುವಂತೆ ಮಾಡಬೇಕು.

೫೯. ನನ್ನ ಅಪ್ಪಣೆಯನ್ನು ಯಾರು ಮೀರುವರೋ ಅಂಥವರ ತಲೆಯನ್ನು ಸ್ವಲ್ಪವೂ ಸಂಶಯವಿಲ್ಲದೆ ಕಡಿದುಹಾಕಿಸಿಬಿಡುವೆನು ಎಂದಾಜ್ಞೆಮಾಡಲು ಈ ಹೆದರಿಕೆಯಿಂದ ಪ್ರತಿ ಶಿವದೇವಸ್ಥಾನದಲ್ಲೂ ಅಂದಿನಿಂದ ದೀಪಗಳನ್ನುರಿಸುತ್ತ ಬಂದರು.

೬೦. ಈರೀತಿ ಆ ದಮನೆಂಬ ರಾಜನು, ತಾನು ಬದುಕಿರುವವರೆಗೂ, ಇದೇ ಧರ್ಮಕೆಲಸವನ್ನು ಮಾಡುತ್ತಿದ್ದು, ಬಹು ಪುಣ್ಯವನ್ನು ಸಂಪಾದಿಸಿ ಕೊನೆಗೆ ಮರಣವನ್ನು ಹೊಂದಿದನು.

೬೧. ಅವನು ಪೂರ್ವಜನ್ಮದಲ್ಲಿ ತಾನು ಹಚ್ಚಿದ ಒಂದು ದೀಪದ ಮಹಿಮೆಯನ್ನು ಅರಿತು, ಅದೇ ಸಂಸ್ಕಾರದಿಂದ, ಈ ಜನ್ಮದಲ್ಲಿ ಬಹಳ ದೀಪಗಳನ್ನು ಹಚ್ಚಿಸಿ, ಈ ಪುಣ್ಯದಿಂದ, ದೊಡ್ಡದೊಡ್ಡ ದೀಪ ಶಿಖೆಗಳಿಗೆ ಸದಾ ಆಶ್ರಯನಾಗಿ ಅಲಕಾ ನಗರಿಗೆ ಅಧಿಪತಿಯಾದನು.

ಏವಂ ಫಲತಿ ಕಾಲೇನ ಶಿವೇಽಲ್ಪಮಪಿ ಯತ್ಕೃತಂ ।
ಇತಿ ಜ್ಞಾತ್ವಾ ಶಿವೇ ಕಾರ್ಯಂ ಭಜನಂ ಸುಸುಖಾರ್ಥಿಭಿಃ ॥ ೬೨ ॥

ಕ್ವ ಸ ದೀಕ್ಷಿತದಾಯಾದಃ ಸರ್ವಧರ್ಮರತಿಃ ಸದಾ ।
ಶಿವಾಲಯೇ ದೈವಯೋಗಾದ್ಯಾತಶ್ಚೋರಯಿತುಂ ವಸು ॥
ಸ್ವಾರ್ಥದೀಪದಶೋದ್ಯೋತಲಿಂಗಮೌಲಿತಮೋಹರಃ ॥ ೬೩ ॥

ಕಲಿಂಗವಿಷಯೇ ರಾಜ್ಯಂ ಪ್ರಾಪ್ತೋ ಧರ್ಮರತಿಂ ಸದಾ ।
ಶಿವಾಲಯೇ ಸಮುದ್ದೀಪ್ಯ ದೀಪಾನ್ಪ್ರಾಗ್ವಾಸನೋದಯಾತ್ ॥ ೬೪ ॥

ಕ್ವ ಸಾ ದಿಕ್ಪಾಲಪದವೀ ಮುನೀಶ್ವರ ವಿಲೋಕಯ ।
ಮನುಷ್ಯಧರ್ಮಿಣಾನೇನ ಸಾಂಪ್ರತಂ ಯೇಹ ಭುಜ್ಯತೇ ॥ ೬೫ ॥

೬೨. ಈರೀತಿಯಾಗಿ ಶಿವನಿಗೆಂದು ಮಾಡಿದ ಕೆಲಸವು ಬಹು ಸ್ವಲ್ಪವಾದರೂ ಕೊನೆಗೆ ಕಾಲಾಂತರದಲ್ಲಿ ಒಳ್ಳೆಯ ಫಲವನ್ನೀಯುವುದು. ಹೀಗೆಂದು ತಿಳಿದು, ಶಾಶ್ವತವಾದ ಸುಖವನ್ನು ಪಡೆಯಬೇಕೆನ್ನುವವರು ಶಿವನ ಸೇವೆಯನ್ನು ಮಾಡಬೇಕು.

೬೩. ಧರ್ಮಕಾರ್ಯಗಳೊಂದರಲ್ಲಿಯೂ ಯಾವಾಗಲೂ ಆಸಕ್ತಿಯಿಲ್ಲದ ಆ ದೀಕ್ಷಿತಪುತ್ರನೆಲ್ಲಿ? ದೈವಯೋಗದಿಂದ ಅವನು ಹಣವನ್ನು ಕದಿಯಬೇಕೆಂದು ಶಿವಾಲಯದೊಳಗೆ ಪ್ರವೇಶಿಸಿದನಲ್ಲವೇ?

೬೪. ಶಿವನಿಗೆ ಇಟ್ಟ ನೈವೇದ್ಯವು ಚೆನ್ನಾಗಿ ಕಾಣಲೆಂದು ಬಟ್ಟೆಯಂಚಿನಿಂದ ದೀಪವನ್ನು ಹಚ್ಚಲು ಆ ಬೆಳಕು ಬಿದ್ದು ಶಿವಲಿಂಗದ ಮೇಲೆ ಮುಸುಕಿದ್ದ ಕತ್ತಲೆಯು ಮಾಯವಾಯಿತಷ್ಟೆ. ಆ ಪುಣ್ಯದಿಂದ ಅವನು ಕಲಿಂಗದೇಶದ ದೊರೆಯಾಗಿ ಧರ್ಮಕಾರ್ಯಗಳನ್ನು ಮಾಡುತ್ತಾ, ಪೂರ್ವಜನ್ಮವಾಸನೆಯಿಂದ ಶಿವದೇವಾಲಯಗಳಲ್ಲಿ ದೀಪಗಳನ್ನು ಸದಾ ಉರಿಯುವಂತೆ ಮಾಡಿದನಲ್ಲವೇ?

೬೫. ಓ ಮುನಿಶ್ರೇಷ್ಠ, ಆ ದೀಕ್ಷಿತಪುತ್ರನು ಮನುಷ್ಯಧರ್ಮ (ಕುಬೇರ) ನೆನಿಸಿ ಈಗ ಅನುಭವಿಸುತ್ತಿರುವ ದಿಕ್ಪಾಲಪದವಿಯು ಎಲ್ಲಿ? ನೋಡು.

ಇತಿ ಪ್ರೋಕ್ತಂ ಗುಣನಿಧೇರ್ಯಜ್ಞದತ್ತಾತ್ಮಜಸ್ಯ ಹಿ ।
ಚರಿತಂ ಶಿವಸಂತೋಷಂ ಶೃಣ್ವತಾಂ ಸರ್ವಕಾಮದಂ ॥ ೬೬ ॥

ಸರ್ವದೈವ ಶಿವೇನಾಸೌ ಸಖಿತ್ವಂ ಚ ಯಥೇಯಿವಾನ್ ।
ತದಪ್ಯೇಕಮನಾ ಭೂತ್ವಾ ಶೃಣು ತಾತ ಬ್ರವೀಮಿ ತೇ ॥ ೬೭ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಕೈಲಾಸಗಮನೋಪಾಖ್ಯಾನೇ
ಗುಣನಿಧಿಸದ್ಗತಿವರ್ಣನೋ ನಾಮಾಷ್ಟಾದಶೋಽಧ್ಯಾಯಃ



---

೬೬. ಈರೀತಿ, ಯಜ್ಞದತ್ತನ ಮಗನಾದ ಗುಣನಿಧಿಯ ಚರಿತ್ರೆಯನ್ನು ಹೇಳಿದುದಾಯಿತು. ಇದನ್ನು ಕೇಳಿದವರ ಮನೋರಥಗಳೆಲ್ಲವೂ ಸಿದ್ಧಿಸುವುವು. ಈ ಆಖ್ಯಾನವು ಶಿವನಿಗೆ ತುಂಬ ಸಂತೋಷವನ್ನುಂಟುಮಾಡುವುದು.

೬೭. ಎಲೈ ವತ್ಸ ನಾರದ, ಎಲ್ಲ ದೇವತೆಗಳಿಗೂ ಪ್ರಭುವಾದ ಆ ಶಿವನೊಂದಿಗೆ ಅವನಿಗೆ ಸಖ್ಯವುಂಟಾದ ಬಗೆ ಹೇಗೆಂಬುದನ್ನೂ ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು, ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯ ಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಕೈಲಾಸಗಮನೋಪಾಖ್ಯಾನದಲ್ಲಿ ಗುಣನಿಧಿಸದ್ಗತಿವರ್ಣನವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಸೃಷ್ಟಿಖಂಡೇ
## ಏಕೋನವಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಪಾದ್ಮೇ ಕಲ್ಪೇ ಮಮ ಪುರಾ ಬ್ರಹ್ಮಣೋ ಮಾನಸಾತ್ಸುತಾತ್ ।
ಪುಲಸ್ತ್ಯಾದ್ವಿಶ್ರವಾ ಜಜ್ಞೇ ತಸ್ಯ ವೈಶ್ರವಣಸ್ಸುತಃ ॥ ೧ ॥

ತೇನೇಯಮಲಕಾ ಭುಕ್ತಾ ಪುರೀ ವಿಶ್ವಕೃತಾ ಕೃತಾ ।
ಆರಾಧ್ಯ ತ್ರ್ಯಂಬಕಂ ದೇವಮತ್ಯುಗ್ರತಪಸಾ ಪುರಾ ॥ ೨ ॥

---

### ಹತ್ತೊಂಭತ್ತನೆಯ ಅಧ್ಯಾಯವು

೧. ಬ್ರಹ್ಮನು ಮತ್ತೆ ಹೇಳಿದನು:—ಹಿಂದೆ ಪಾದ್ಮಕಲ್ಪದಲ್ಲಿ ನನ್ನ ಮಾನಸ ಪುತ್ರನಾದ ಪುಲಸ್ತ್ಯನಿಗೆ ವಿಶ್ರವಸ್ಸೆಂಬ ಸುತನು ಜನಿಸಿದನು. ಆ ವಿಶ್ರವಸ್ಸಿಗೆ ವೈಶ್ರವಣನೆಂಬ ಮಗನು ಹುಟ್ಟಿದನು.

೨. ಅವನು ತ್ರಿಲೋಚನನಾದ ಆ ಶಿವನನ್ನು ಅತಿ ಘೋರವಾದ ತಪಸ್ಸಿನಿಂದ ಮೆಚ್ಚಿಸಿ, ವಿಶ್ವಕರ್ಮನಿಂದ ನಿರ್ಮಿತವಾದ ಈ ಅಲಕಾ ನಗರಿಯನ್ನು ವೈಶ್ರವಣನು ಉಪಭೋಗಿಸುತ್ತ ಬಂದನು

ವ್ಯತೀತೇ ತತ್ರ ಕಲ್ಪೇ ವೈ ಪ್ರವೃತ್ತೇ ಮೇಘವಾಹನೇ ।
ಯಾಜ್ಞದತ್ತಿರಸೌ ಶ್ರೀದಸ್ತಪಸ್ತೇಪೆ ಸುದುಸ್ಸಹಂ ॥ ೩ ॥

ಭಕ್ತಿಪ್ರಭಾವಂ ವಿಜ್ಞಾಯ ಶಂಭೋಸ್ತದ್ದೀಪಮಾತ್ರತಃ ।
ಪುರಾ ಪುರಾರೇಸ್ಸಂಪ್ರಾಪ್ಯ ಕಾಶಿಕಾಂ ಚಿತ್ಪ್ರಕಾಶಿಕಾಂ ॥ ೪ ॥

ಶಿವೈಕಾದಶಮುದ್ಬೋಧ್ಯ ಚಿತ್ತರತ್ನಪ್ರದೀಪಕೈಃ ।
ಅನನ್ಯಭಕ್ತಿಸ್ನೇಹಾಢ್ಯಸ್ತನ್ಮಯೋ ಧ್ಯಾನನಿಶ್ಚಲಃ ॥ ೫ ॥

ಶಿವೈಕ್ಯಸುಮಹಾಪಾತ್ರ ತಪೋಽಗ್ನಿಪರಿಬೃಂಹಿತಂ ।
ಕಾಮಕ್ರೋಧಮಹಾವಿಘ್ನಪತಂಗಾಘಾತವರ್ಜಿತಂ ॥ ೬ ॥

ಪ್ರಾಣಸಂರೋಧನಿರ್ವಾತಂ ನಿರ್ಮಲಂ ನಿರ್ಮಲೇಕ್ಷಣಾತ್ ।
ಸಂಸ್ಥಾಪ್ಯ ಶಾಂಭವಂ ಲಿಂಗಂ ಸದ್ಭಾವಕುಸುಮಾರ್ಚಿತಂ ॥ ೭ ॥

---

೩. ಆ ಪಾದ್ಮಕಲ್ಪವು ಕಳೆದು ಮೇಘವಾಹನಕಲ್ಪವು ಮೊದಲಾದಮೇಲೆ, ಯಜ್ಞದತ್ತನ ಮಗನಾಗಿದ್ದ ಈ ಶ್ರೀದನೆಂಬುವನು (ಕುಬೇರ) ಸಹಿಸಲಸಾಧ್ಯವಾದ ದೊಡ್ಡ ತಪಸ್ಸನ್ನು ಮಾಡಿದನು. ತಾನಿಟ್ಟ ದೀಪವೊಂದರಿಂದ ಇಷ್ಟು ಅತುಲೈಶ್ವರ್ಯವು ಲಭಿಸಲು, ಶಿವನಲ್ಲಿ ಉಂಟಾದ ಭಕ್ತಿಯ ಪ್ರಭಾವವೇ ಮುಖ್ಯವೆಂದು ಅರಿತು ಈ ತಪಸ್ಸಿಗೆ ಉಪಕ್ರಮಿಸಿದನು.

೪-೮. ಆ ವೈಶ್ರವಣನು ಶಿವನ ವಾಸಸ್ಥಾನವೂ, ಶುದ್ಧ ಜ್ಞಾನವನ್ನು ಬೆಳಗಿಸುವುದೂ ಆದ ಕಾಶೀ ಕ್ಷೇತ್ರವನ್ನು ಸೇರಿ, ಅಲ್ಲಿ ತನ್ನ ಮನಸ್ಸೆಂಬ ರತ್ನಖಚಿತವಾದ ಪಾತ್ರೆಯಲ್ಲಿ ಶಿವನೆಂಬ ಬತ್ತಿಯನ್ನು ಮೀಟಿ, ಅನನ್ಯವಾದ ಭಕ್ತಿಯೆಂಬ ಎಣ್ಣೆಯನ್ನು ತುಂಬಿ, ಶಿವತಾದಾತ್ಮ್ಯವೆಂಬ ಪಾತ್ರೆಯೂ, ತಪಸ್ಸೆಂಬ ದೀಪಶಿಖೆಯೂ, ಉಳ್ಳ, ಮತ್ತು ಕಾಮ, ಕ್ರೋಧ, ಮೊದಲಾದ ಮಹಾ ವಿಘ್ನಗಳೆಂಬ ಪತಂಗಗಳ (ದೀಪದಹುಳ) ಹೊಡೆತವಿಲ್ಲದೆ, ಪ್ರಾಣವಾಯುವನ್ನು ತಡೆದು ನಿಲ್ಲಿಸಿದುದರಿಂದ ಗಾಳಿಯಿಲ್ಲದೆ, ಅಲುಗಾಡದಿರುವ, ಶುದ್ಧವಾದ, ಸದ್ಭಾವನೆಯೆಂಬ ಹೂಗಳಿಂದ ಪೂಜಿಸಲ್ಪಟ್ಟ ಜ್ಯೋತಿರ್ಮಯವಾದ ಶಂಭುಲಿಂಗವನ್ನು ಸ್ಥಾಪಿಸಿ, ಶಿವಧ್ಯಾನದಿಂದ ನಿಶ್ಚಲನೂ ತನ್ಮಯನೂ ಆಗಿ, ಮೈಯಲ್ಲಿ ರಕ್ತಮಾಂಸಗಳು ಒಣಗಿಹೋಗಿ ಎಲುಬು ಚರ್ಮಗಳು

**ತಾವತ್ತತಾಪ ಸ ತಪಸ್ತ್ವಗಸ್ಥಿಪರಿಶೇಷಿತಂ ।**
**ಯಾವದ್ಬಭೂವ ತದ್ವರ್ಷ್ಮ ವರ್ಷಾಣಾಮಯುತಂ ಶತಂ ॥ ೮ ॥**

**ತತಃ ಸಹ ವಿಶಾಲಾಕ್ಷ್ಯಾ ದೇವೋ ವಿಶ್ವೇಶ್ವರಸ್ಸ್ವಯಂ ।**
**ಅಲಕಾಪತಿಮಾಲೋಕ್ಯ ಪ್ರಸನ್ನೇನಾಂತರಾತ್ಮನಾ ॥ ೯ ॥**

**ಲಿಂಗೇ ಮನಸ್ಸಮಾಧಾಯ ಸ್ಥಿತಂ ಸ್ಥಾಣುಸ್ವರೂಪಿಣಂ ।**
**ಉವಾಚ ವರದೋಽಸ್ಮೀತಿ ತದಾಚಕ್ಷ್ವಾಲಕಾಪತೇ ॥ ೧೦ ॥**

**ಉನ್ಮೀಲ್ಯ ನಯನೇ ಯಾವತ್ಸ ಪಶ್ಯತಿ ತಪೋಧನಃ ।**
**ತಾವದುದ್ಯತ್ಸಹಸ್ರಾಂಶುಸಹಸ್ರಾಧಿಕತೇಜಸಂ ॥ ೧೧ ॥**

**ಪುರೋ ದದರ್ಶ ಶ್ರೀಕಂಠಂ ಚಂದ್ರಚೂಡಮುಮಾಧವಂ ।**
**ತತ್ತೇಜಃಪರಿಭೂತಾಕ್ಷಿತೇಜಾಃ ಸಂಮೀಲ್ಯ ಲೋಚನೇ ॥ ೧೨ ॥**

---

ಮಾತ್ರ ಉಳಿಯುವಷ್ಟು ಮಟ್ಟಿಗೆ, ಹತ್ತುಲಕ್ಷ ವರ್ಷಗಳ ಕಾಲ ದೀರ್ಘವಾದ ತಪಸ್ಸನ್ನಾಚರಿಸಿದನು.

೯-೧೦. ಅನಂತರ ಶಿವಲಿಂಗದಲ್ಲಿ ಏಕಾಗ್ರತೆಯಿಂದ ಮನಸ್ಸನ್ನಿಟ್ಟು, ಸ್ಥಾಣು (ಈಶ್ವರ, ಗಿಡ್ಡಾದ ಮರ) ವಾಗಿಯೇ ಬಿಟ್ಟಿರುವ ಆ ಅಲಕಾಧಿಪತಿಯಾದ ಕುಬೇರನನ್ನು ನೋಡಿ ಪ್ರಸನ್ನವಾದ ಹೃದಯವುಳ್ಳವನಾಗಿ, ತನ್ನ ಮಡದಿಯಾದ ವಿಶಾಲಾಕ್ಷಿಯೊಡನೆ, ಸಾಕ್ಷಾದ್ವಿಶ್ವೇಶ್ವರನೇ, ಎದುರಿಗೆ ಬಂದು ನಿಂತು, ಎಲೈ, ಅಲಕೇಶ್ವರನೇ, ನಿನ್ನ ತಪಸ್ಸಿಗೆ ಮೆಚ್ಚಿ ವರವನ್ನೀಯಲು ಬಂದಿರುವೆನು. ಬೇಕಾದ ವರವನ್ನು ಕೇಳು, ಎಂದನು.

೧೧. ತಪೋನಿರತನಾದ ಆತನು ಕಣ್ಣುಗಳನ್ನು ತೆರೆದು ನೋಡುವಷ್ಟರಲ್ಲಿಯೇ, ಏಕಕಾಲದಲ್ಲಿ ಸಹಸ್ರಸೂರ್ಯರುದಯಿಸಿದರೆ ಉಂಟಾಗುವುದಕ್ಕಿಂತಲೂ ಹೆಚ್ಚಾದ ತೇಜಸ್ಸಿನಿಂದ ಬೆಳಗುತ್ತ, ನೀಲಕಂಠನೂ, ಚಂದ್ರಲೇಖೆಯನ್ನು ತಲೆಯಲ್ಲಿ ಧರಿಸಿದವನೂ ಆದ ಪಾರ್ವತೀಕಾಂತನನ್ನು ತನ್ನೆದುರಿನಲ್ಲಿ ಕಂಡನು.

೧೨. ಕಣ್ಣು ಕೋರೈಸುವಂತಹ ಆ ತೇಜಸ್ಸನ್ನು ನೋಡಲಾರದೆ, ಕಣ್ಣುಗಳನ್ನು ಮುಚ್ಚಿಕೊಂಡು, ಮನೋರಥಗಳ ಎಲ್ಲೆಯನ್ನೂ ಮೀರಿದ ದೇವದೇವನಾದ ಆ ಶಿವನನ್ನು ಕುರಿತು ಇಂತೆಂದನು.

ಉವಾಚ ದೇವದೇವೇಶಂ ಮನೋರಥಪದಾತಿಗಂ ।
ನಿಜಾಂಘ್ರಿದರ್ಶನೇನಾಥ ದೃಕ್ಸಾಮರ್ಥ್ಯಂ ಪ್ರಯಚ್ಛ ಮೇ ॥ ೧೩ ॥

ಅಯಮೇವ ವರೋ ನಾಥ ಯತ್ತ್ವಂ ಸಾಕ್ಷಾನ್ನಿರೀಕ್ಷ್ಯಸೇ ।
ಕಿಮನ್ಯೇನ ವರೇಣೇಶ ನಮಸ್ತೇ ಶಶಿಶೇಖರ ॥ ೧೪ ॥

ಇತಿ ತದ್ವಚನಂ ಶ್ರುತ್ವಾ ದೇವದೇವ ಉಮಾಪತಿಃ ।
ದದೌ ದರ್ಶನಸಾಮರ್ಥ್ಯಂ ಸ್ಪೃಷ್ಟ್ವಾ ಪಾಣಿತಲೇನ ತಂ ॥ ೧೫ ॥

ಪ್ರಸಾರ್ಯ ನಯನೇ ಪೂರ್ವಮುಮಾಮೇವ ವ್ಯಲೋಕಯತ್ ।
ತತೋಽಸೌ ಯಾಜ್ಞದತ್ತಿಸ್ತು ತತ್ಸಾಮರ್ಥ್ಯಮವಾಪ್ಯ ಚ ॥ ೧೬ ॥

ಶಂಭೋಸ್ಸಮೀಪೇ ಕಾ ಯೋಷಿದೇಷಾ ಸರ್ವಾಂಗಸುಂದರೀ ।
ಅನಯಾ ಕಿಂ ತಪಸ್ತಪ್ತಂ ಮಮಾಪಿ ತಪಸೋಽಧಿಕಂ ॥ ೧೭ ॥

೧೩-೧೪. ಈ ಕಣ್ಣುಗಳಿಗೆ ನಿನ್ನ ಪಾದಕಮಲಗಳನ್ನು ನೋಡುವಷ್ಟು ಶಕ್ತಿಯನ್ನು ಅನುಗ್ರಹಿಸು. ಪ್ರಭೂ! ನೀನು ನನ್ನೆದುರು ಬಂದು ನಿಂತು ನನ್ನ ಕಣ್ಣುಗಳಿಂದ ಪ್ರತ್ಯಕ್ಷವಾಗಿ ನೋಡುವಂತಾದುದೇ ದೊಡ್ಡವರ, ಬೇರೆ ವರವಿನ್ನು ಬೇಕೆ? ಓ ಶಶಾಂಕಮೌಲಿ, ಇಗೋ ನಿನಗೆ ನಮಸ್ಕಾರವು.

೧೫. ಹೀಗೆಂದು ಹೇಳುತ್ತಿರುವ ಆತನ ಮಾತನ್ನು ಕೇಳಿ, ದೇವದೇವನಾದ ಆ ಉಮಾಪತಿಯು, ಆತನನ್ನು ತನ್ನ ಕೈಯಿಂದ ಮುಟ್ಟಿ, ತನ್ನನ್ನು ಸಂದರ್ಶಿಸುವಂತೆ ಶಕ್ತಿಯನ್ನಿತ್ತನು.

೧೬. ಬಳಿಕ ಯಜ್ಞದತ್ತನ ಮಗನಾಗ ಆ ಕುಬೇರನು ದರ್ಶನ ಸಾಮರ್ಥ್ಯವನ್ನು ಪಡೆದು ಕಣ್ಣುಗಳನ್ನು ತೆರೆದು, ಮೊದಲು ಪಾರ್ವತಿಯನ್ನೇ ಕಂಡನು,

೧೭. ಶಿವನ ಬಳಿಯಲ್ಲಿರುವ ಸರ್ವಾಂಗಸುಂದರಿಯಾದ ಈ ಹೆಂಗಸು ಯಾರು? ಶಿವನ ಸಮೀಪದಲ್ಲಿರಬೇಕಾದರೆ ನಾನು ಮಾಡಿದ ತಪಸ್ಸಿಗಿಂತಲೂ ಹೆಚ್ಚಾಗಿ ಈಕೆ ಇನ್ನೆಂತಹ ತಪಸ್ಸನ್ನು ಮಾಡಿರಬೇಕು.

**ಅಹೋ ರೂಪಮಹೋ ಪ್ರೇಮ ಸೌಭಾಗ್ಯಂ ಶ್ರೀರಹೋ ಭೃಶಂ ।**
**ಇತ್ಯವಾದೀದಸೌ ಪುತ್ರೋ ಮುಹುರ್ಮುಹುರತೀವ ಹಿ ॥ ೧೮ ॥**

**ಕ್ರೂರದೃಗ್ವೀಕ್ಷತೇ ಯಾವತ್ಪುನಃ ಪುನರಿದಂ ವದನ್ ।**
**ತಾವತ್ಪುಸ್ಫೋಟ ತನ್ನೇತ್ರಂ ವಾಮಂ ವಾಮಾವಿಲೋಕನಾತ್ ॥ ೧೯ ॥**

**ಅಥ ದೇವ್ಯಬ್ರವೀದ್ದೇವಂ ಕಿಮಸೌ ದುಷ್ಟತಾಪಸಃ ।**
**ಅಸಕೃದ್ವೀಕ್ಷ್ಯ ಮಾಂ ವಕ್ತಿ ಕುರು ತ್ವಂ ಮೇ ತಪಃಪ್ರಭಾಂ ॥ ೨೦ ॥**

**ಅಸಕೃದ್ದಕ್ಷಿಣೇನಾಕ್ಷ್ಣಾ ಪುನರ್ಮಾಮೇವ ಪಶ್ಯತಿ ।**
**ಅಸೂಯಮಾನೋ ಮೇ ರೂಪಪ್ರೇಮಸೌಭಾಗ್ಯಸಂಪದಃ ॥ ೨೧ ॥**

**ಇತಿ ದೇವೀಗಿರಂ ಶ್ರುತ್ವಾ ಪ್ರಹಸ್ಯ ಪ್ರಾಹ ತಾಂ ಪ್ರಭುಃ ।**
**ಉಮೇ ತ್ವದೀಯಃ ಪುತ್ರೋಽಯಂ ನ ಚ ಕ್ರೂರೇಣ ಚಕ್ಷುಷಾ ॥ ೨೨ ॥**

---

೧೮. ಅಬ್ಬಾ, ಎಂತಹ ಅದ್ಭುತವಾದ ರೂಪ! ಎಂತಹ ಪ್ರೀತಿ! ಎಂತಹ ಸೌಭಾಗ್ಯ! ಎಂತಹ ಸಂಪತ್ತು, ಎಂದು ಈ ಶಿವನಿಗೆ ಮಗನಂತೆ ಪ್ರೇಮಾಸ್ಪದನಾದ ಕುಬೇರನು ಮತ್ತೆ ಮತ್ತೆ ಹೆಚ್ಚಾಗಿ ಹೇಳುತ್ತಿದ್ದನು.

೧೯. ಹೀಗೆ ಮತ್ತೆ ಮತ್ತೆ ಹೇಳುತ್ತಾ ಕ್ರೂರದೃಷ್ಟಿಯಿಂದ (ಬೆರಗುಗಣ್ಣಿನಿಂದ) ನೋಡುವಷ್ಟರಲ್ಲಿಯೇ, ಪಾರ್ವತಿಯನ್ನು ನೆಟ್ಟ ನೋಟದಿಂದ ಕಂಡುದರಿಂದ ಅವನ ಎಡಗಣ್ಣು ಬಿರಿದುಹೋಯಿತು.

೨೦-೨೧. ಬಳಿಕ ಶಿವನನ್ನು ಕುರಿತು, ಪಾರ್ವತಿಯು, ನಾಥ! ಈ ದುಷ್ಟ ತಪಸ್ವಿಯು ನನ್ನನ್ನು ಪುನಃ ಪುನಃ ನೋಡುತ್ತಾ ಏನು ಗಳಹುತ್ತಿದಾನೆ? ನನಗೆ ತಪಶ್ಶಕ್ತಿಯನ್ನು ನೀಡು. ಮತ್ತೆ ಬಾರಿಬಾರಿಗೂ, ಬಲಗಣ್ಣಿನಿಂದ ನನ್ನನ್ನೇ ನೋಡುತ್ತಿದಾನೆ. ಇವನು ನನ್ನ ರೂಪವನ್ನೂ ಪ್ರೇಮವನ್ನೂ, ಸೌಭಾಗ್ಯವನ್ನೂ, ಸಂಪತ್ತನ್ನೂ ಕಂಡು ಸಹಿಸದೆ ಇದಾನೆ, ಎಂದಳು.

೨೨-೨೩. ಮಡದಿಯು ನುಡಿದ ಮಾತನ್ನು ಕೇಳಿ ಪ್ರಭುವಾದ ಶಿವನು ನಗುತ್ತಾ, ಉಮೆ, ಇವನು ನಿನ್ನ ಮಗನು. ಇವನು ನಿನ್ನನ್ನು ಕ್ರೂರದೃಷ್ಟಿಯಿಂದ

ಸಂಪಶ್ಯತಿ ತಪೋಲಕ್ಷ್ಮೀಂ ತವ ಕಿಂತ್ವಧಿವರ್ಣಯೇತ್ ।
ಇತಿ ದೇವೀಂ ಸಮಾಭಾಷ್ಯ ತಮೀಶಃ ಪುನರಬ್ರವೀತ್ ॥ ೨೩ ॥

ವರಾನ್ದದಾಮಿ ತೇ ವತ್ಸ ತಪಸಾನೇನ ತೋಷಿತಃ ।
ನಿಧೀನಾಮಥ ನಾಥಸ್ತ್ವಂ ಗುಹ್ಯಕಾನಾಂ ಭವೇಶ್ವರಃ ॥ ೨೪ ॥

ಯಕ್ಷಾಣಾಂ ಕಿನ್ನರಾಣಾಂ ಚ ರಾಜ್ಞಾಂ ರಾಜಾ ಚ ಸುವ್ರತಃ ।
ಪತಿಃ ಪುಣ್ಯಜನಾನಾಂ ಚ ಸರ್ವೇಷಾಂ ಧನದೋ ಭವ ॥ ೨೫ ॥

ಮಯಾ ಸಖ್ಯಂ ಚ ತೇ ನಿತ್ಯಂ ವತ್ಸ್ಯಾಮಿ ಚ ತವಾಂತಿಕೇ ।
ಅಲಕಾಂ ನಿಕಷಾ ಮಿತ್ರ ತವ ಪ್ರೀತಿವಿವೃದ್ಧಯೇ ॥ ೨೬ ॥

ಆಗಚ್ಛ ಪಾದಯೋರಸ್ಯಾಃ ಪತ ತೇ ಜನನೀ ತ್ವಿಯಂ ।
ಯಾಜ್ಞದತ್ತೇ ಮಹಾಭಕ್ತ ಸುಪ್ರಸನ್ನೇನ ಚೇತಸಾ ॥ ೨೭ ॥

---

ನೋಡುತ್ತಿಲ್ಲ. ಆದರೆ ನೀನು ಮಾಡಿದ ತಪಸ್ಸಿನ ವೈಭವವನ್ನು ಆಶ್ಚರ್ಯದಿಂದ ವರ್ಣಿಸುತ್ತಲಿದ್ದಾನೆ. ಎಂದು ದೇವಿಯನ್ನು ಸಂತೈಸಿ ಮರಳಿ ಆ ಕುಬೇರನಿಗಿಂತೆಂದನು.

೨೪-೨೭. ಓ ಯಜ್ಞದತ್ತಪುತ್ರ, ನೀನು ಮಹಾ ಭಕ್ತನು! ನಿನ್ನ ಈ ತಪಸ್ಸಿಗೆ ನಾನು ಮೆಚ್ಚಿದೆನು. ನಿನಗೆ ಬೇಕಾದ ವರಗಳನ್ನೀಯುವೆನು. ನೀನು ನವನಿಧಿಗಳಿಗೂ ಒಡೆಯನಾಗು. ಗುಹ್ಯಕರಿಗೂ, ಯಕ್ಷರಿಗೂ, ಕಿನ್ನರರಿಗೂ, ಅಧಿಪತಿಯಾಗಿರು. ರಾಜರಿಗೂ ರಾಜನಾಗು. ವತ್ಸ, ನೀನು ವ್ರತಶೀಲನೂ, ರಾಕ್ಷಸರಿಗೆಲ್ಲಾ ಪ್ರಭುವೂ, ಎಲ್ಲರಿಗೂ ಹಣವನ್ನು ಕೊಡುವವನೂ ಆಗು ನಿನಗೂ ನನಗೂ ಶಾಶ್ವತವಾದ ಸ್ನೇಹವುಂಟಾಗಲಿ. ನಿನ್ನ ಪ್ರೀತಿಯು ಹೆಚ್ಚಾಗಲೆಂದು, ಅಲಿಕಾ ನಗರದ ಬಳಿಯಲ್ಲಿಯೇ ನಿನ್ನ ಹತ್ತಿರದಲ್ಲೇ ವಾಸಮಾಡುವೆನು. ಇಲ್ಲಿ ಬಾ, ಇವಳ ಕಾಲಿಗೆ ಬೀಳು. ಇವಳು ನಿನಗೆ ತಾಯಿ, ಹರ್ಷಚಿತ್ತವನ್ನು ತಾಳು ಎಂದನು.

॥ ಬ್ರಹ್ಮೋವಾಚ ॥

ಇತಿ ದತ್ತ್ವಾ ವರಾನ್ದೇವಃ ಪುನರಾಹ ಶಿವಾಂ ಶಿವಃ ।
ಪ್ರಸಾದಂ ಕುರು ದೇವೇಶಿ ತಪಸ್ವಿನ್ಯಂಗಜೇಽತ್ರ ವೈ ॥ ೨೮ ॥

ಇತ್ಯಾಕರ್ಣ್ಯ ವಚಶ್ಶಂಭೋಃ ಪಾರ್ವತೀ ಜಗದಂಬಿಕಾ ।
ಅಬ್ರವೀದ್ಯಾಜ್ಞದತ್ತಿಂ ತಂ ಸುಪ್ರಸನ್ನೇನ ಚೇತಸಾ ॥ ೨೯ ॥

॥ ದೇವ್ಯುವಾಚ ॥

ವತ್ಸ ತೇ ನಿರ್ಮಲಾ ಭಕ್ತಿರ್ಭವೇ ಭವತು ಸರ್ವದಾ ।
ಭವೈಕಪಿಂಗೋ ನೇತ್ರೇಣ ವಾಮೇನ ಸ್ಫುಟಿತೇನ ಹ ॥ ೩೦ ॥

ದೇವೇನ ದತ್ತಾ ಯೇ ತುಭ್ಯಂ ವರಾಸ್ಸಂತು ತಥೈವ ತೇ ।
ಕುಬೇರೋ ಭವ ನಾಮ್ನಾ ತ್ವಂ ಮಮ ರೂಪೇರ್ಷ್ಯಯಾ ಸುತ ॥ ೩೧ ॥

ಇತಿ ದತ್ತ್ವಾ ವರಾನ್ದೇವೋ ದೇವ್ಯಾ ಸಹ ಮಹೇಶ್ವರಃ ।
ಧನದಾಯಾವಿವೇಶಾಥ ಧಾಮ ವೈಶ್ವೇಶ್ವರಾಭಿಧಂ ॥ ೩೨ ॥

೨೮. ಬ್ರಹ್ಮನು ಹೇಳಿದನು :– ಹೀಗೆ ಸ್ವಾಮಿಯಾದ ಶಿವನು ವರಗಳನ್ನಿತ್ತು ಸರ್ವಮಂಗಳೆಯನ್ನು ಕುರಿತು, ದೇವಿ, ಈ ಬಡವಾಯಿಯಾದ ನಿನ್ನ ಮಗನಲ್ಲಿ ಪ್ರಸನ್ನಳಾಗು ಎಂದು ಮತ್ತೆ ನುಡಿದನು

೨೯. ಹೀಗೆಂದು ಶಿವನು ಹೇಳಿದ ಮಾತನ್ನು ಕೇಳಿ ಜಗನ್ಮಾತೆಯಾದ ಪಾರ್ವತಿಯು ಪ್ರಸನ್ನಹೃದಯಳಾಗಿ ಆ ಯಜ್ಞದತ್ತಸುತನನ್ನು ಕುರಿತು ಇಂತೆಂದಳು.

೩೦. ವತ್ಸ, ಯಾವಾಗಲೂ ನಿನಗೆ ಶಿವನಲ್ಲಿ ನಿಷ್ಕಲಂಕವಾದ ಭಕ್ತಿಯುಂಟಾಗಲಿ, ನಿನ್ನ ಎಡಗಣ್ಣು ಬಿರಿದು ಹೋದುದರಿಂದ ಏಕಪಿಂಗನೆಂಬ ಹೆಸರಿನಿಂದಲೇ ಪ್ರಖ್ಯಾತನಾಗು.

೩೧. ವತ್ಸ, ಪ್ರಭುವಾದ ಶಿವನು ಅನುಗ್ರಹಿಸಿದ ವರಗಳೆಲ್ಲವೂ ಹಾಗೆಯೇ ಆಗಲಿ, ನನ್ನ ರೂಪವನ್ನು ಕಂಡು ಅಸೂಯಪಟ್ಟುದರಿಂದ ನಿನಗೆ ಕುಬೇರನೆಂದೇ ಹೆಸರಾಗಲಿ ಎಂದಳು.

೩೨. ಹೀಗೆ ದೇವದೇವನಾದ ಶಿವನು ದೇವಿಯೊಡನೆ, ಕುಬೇರನಿಗೆ ವರಗಳನ್ನಿತ್ತು ವಿಶ್ವೇಶ್ವರ ಎಂದು ಹೆಸರಾದ ತನ್ನ ನಿವಾಸವಾದ ಭವನಕ್ಕೆ ತೆರಳಿದನು.

**ಇತ್ಥಂ ಸಖಿತ್ವಂ ಶ್ರೀಶಂಭೋಃ ಪ್ರಾಪ್ಯೈಷ ಧನದಃ ಪುರಂ ।**
**ಅಲಕಾನ್ನಿಕಷಾ ಚಾಸೀತ್ಕೈಲಾಸಶ್ಶಂಕರಾಲಯಃ ॥ ೩೩ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಕುಬೇರಶಿವಮಿತ್ರತ್ವವರ್ಣನೋ ನಾಮ ಏಕೋನವಿಂಶೋಽಧ್ಯಾಯಃ**



೩೩. ಈರೀತಿ ಕುಬೇರನು ಹಿಂದೆ ಶ್ರೀ ಶಿವನ ಸಖ್ಯವನ್ನು ಸಂಪಾದಿಸಿದನು. ಶಂಕರನೂ ತನ್ನ ಮಾತಿನಂತೆ ಅಲಕಾನಗರಿಯ ಬಳಿಯಲ್ಲಿಯೇ, ತನ್ನ ನಿವಾಸವಾದ ಕೈಲಾಸವನ್ನು ಸ್ಥಾಪಿಸಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯ ಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಕುಬೇರಶಿವಸಖ್ಯವರ್ಣನವೆಂಬ ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸೃಷ್ಟಿಖಂಡೇ

## ವಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ನಾರದ ತ್ವಂ ಶೃಣು ಮುನೇ ಶಿವಾಗಮನಮುತ್ತಮಂ ।
ಕೈಲಾಸೇ ಪರ್ವತಶ್ರೇಷ್ಠೇ ಕುಬೇರಸ್ಯ ತಪೋಬಲಾತ್ ॥ ೧ ॥

ನಿಧಿಪತ್ವವರಂ ದತ್ವಾ ಗತ್ವಾ ಸ್ವಸ್ಥಾನಮುತ್ತಮಂ ।
ವಿಚಿಂತ್ಯ ಹೃದಿ ವಿಶ್ವೇಶಃ ಕುಬೇರವರದಾಯಕಃ ॥ ೨ ॥

ವಿಧ್ಯಂಗಜಸ್ಸ್ವರೂಪೋ ಮೇ ಪೂರ್ಣಃ ಪ್ರಲಯಕಾರ್ಯಕೃತ್ ।
ತದ್ರೂಪೇಣ ಗಮಿಷ್ಯಾಮಿ ಕೈಲಾಸಂ ಗುಹ್ಯಕಾಲಯಂ

### ಇಪ್ಪತ್ತನೆಯ ಅಧ್ಯಾಯವು

೧. ಮುನಿಶ್ರೇಷ್ಠನಾದ ನಾರದನನ್ನು ಕುರಿತು ಬ್ರಹ್ಮನು ಹೇಳತೊಡಗಿದನು. ಓ ನಾರದ, ಕುಬೇರನ ತಪಸ್ಸಿಗೆ ಮೆಚ್ಚಿ ಪರ್ವತಶ್ರೇಷ್ಠವಾದ ಕೈಲಾಸಕ್ಕೆ ಶಿವನು ಆಗಮಿಸಿದ ಶ್ರೇಷ್ಠವಾದ ವೃತ್ತಾಂತವನ್ನು ನಿನಗೆ ಹೇಳುವೆನು, ಕೇಳು,

೨-೫. ಕುಬೇರನಿಗೆ ನಿಧಿಪತಿಯಾಗೆಂದು ವರವನ್ನಿತ್ತು ಶ್ರೇಷ್ಠವಾದ ತನ್ನ ಸ್ವಸ್ಥಾನಕ್ಕೆ ತೆರಳಿದಮೇಲೆ, ಜಗದೀಶ್ವರನಾದ ಶಿವನು ತನ್ನ ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು. “ಬ್ರಹ್ಮನ ಶರೀರದಿಂದ ಆವಿರ್ಭವಿಸಿದ, ಪ್ರಲಯಕಾರ್ಯಕಾರಿ ಯಾದ ಹರನು ನನ್ನ ಪೂರ್ಣಾಂಶವಲ್ಲವೇ. ಆ ಹರನ ರೂಪದಿಂದಲೇ ಗುಹ್ಯಕರ

**ರುದ್ರೋ ಹೃದಯಜೋ ಮೇ ಹಿ ಪೂರ್ಣಾಂಶೋ ಬ್ರಹ್ಮ ಏಕಲಃ ।**
**ಹರಿಬ್ರಹ್ಮಾದಿಭಿಸ್ಸೇವ್ಯೋ ಮದಭಿನ್ನೋ ನಿರಂಜನಃ ॥ ೪ ॥**

**ತತ್ಸ್ವರೂಪೇಣ ತತ್ರೈವ ಸುಹೃದ್ಭೂತ್ವಾ ವಿಲಾಸ್ಯಹಂ ।**
**ಕುಬೇರಸ್ಯ ಚ ವತ್ಸ್ಯಾಮಿ ಕರಿಷ್ಯಾಮಿ ತಪೋ ಮಹತ್ ॥ ೫ ॥**

**ಇತಿ ಸಂಚಿಂತ್ಯ ರುದ್ರೋಽಸೌ ಶಿವೇಚ್ಛಾಂ ಗಂತುಮುತ್ಸುಕಃ ।**
**ನನಾದ ತತ್ರ ಢಕ್ಕಾಂ ಸ್ವಾಂ ಸುಗತಿಂ ನಾದರೂಪಿಣೀಂ ॥ ೬ ॥**

**ತ್ರೈಲೋಕ್ಯಾಮಾನಶೇ ತಸ್ಯಾ ಧ್ವನಿರುತ್ಸಾಹಕಾರಕಃ ।**
**ಆಹ್ವಾನಗತಿಸಂಯುಕ್ತೋ ವಿಚಿತ್ರಃ ಸಾಂದ್ರಶಬ್ದಕಃ ॥ ೭ ॥**

**ತಚ್ಛ್ರುತ್ವಾ ವಿಷ್ಣುಬ್ರಹ್ಮಾದ್ಯಾಃ ಸುರಾಶ್ಚ ಮುನಯಸ್ತಥಾ ।**
**ಆಗಮಾ ನಿಗಮಾ ಮೂರ್ತಾಸ್ಸಿದ್ಧಾ ಜಗ್ಮುಶ್ಚ ತತ್ರ ವೈ ॥ ೮ ॥**

ನಿವಾಸವಾದ ಕೈಲಾಸಕ್ಕೆ ಹೋಗುವೆನು. ನನ್ನ ಹೃದಯದಿಂದ ಹುಟ್ಟಿದ ಆ ರುದ್ರನು ಸಂಪೂರ್ಣವಾಗಿಯೂ, ಏಕೈಕವಸ್ತುವೂ ಪರಬ್ರಹ್ಮವೂ ಆದ ನಾನೇ ಅಲ್ಲವೇ? ವಿಷ್ಣು ಬ್ರಹ್ಮ ಮೊದಲಾದವರಿಂದ ಸೇವಿತನೂ, ನಿರ್ಲೇಪನೂ, ಆದ ಆತನು ನಾನೇ ಅಲ್ಲದೆ ಬೇರೆಯಲ್ಲ. ಆ ಹರನ ರೂಪದಿಂದಲೇ ಕುಬೇರನಿಗೆ ಮಿತ್ರನಾಗಿ ಆ ಕೈಲಾಸ ಪರ್ವತದಲ್ಲಿಯೇ ನೆಲಸುವೆನು. ಅಲ್ಲದೆ ಮಹತ್ತಾದ ತಪಸ್ಸನ್ನೂ ಆಚರಿಸುವೆನು."

೬. ಹೀಗೆ ಶಿವನ ಇಚ್ಛೆಯಿರುವುದೆಂದು ಆಲೋಚಿಸಿ, ಆ ರುದ್ರನು ಕೈಲಾಸಕ್ಕೆ ಹೊರಡಬೇಕೆಂದು ಉತ್ಸುಕತೆಯಿಂದ ನಾದಸ್ವರೂಪಿಣಿಯೂ ಒಳ್ಳೆಯಗತಿಯೂ ಉಳ್ಳ ತನ್ನ ಢಕ್ಕೆಯನ್ನು (ಡಮರುಗ) ಬಾರಿಸಿದನು.

೭. ಉತ್ಸಾಹವನ್ನು ಹುಟ್ಟಿಸುತ್ತಿದ್ದ ಮತ್ತು ಎಲ್ಲರನ್ನೂ ಬನ್ನಿ ಬನ್ನಿ ಎಂದು ಕರೆವಂತೆ ಇರುವ ಗತಿಗಳಿಂದ ಕೂಡಿ, ವಿಚಿತ್ರವೂ, ಸ್ವಚ್ಛವಾಗಿರುವ ಶಬ್ದಪರಂಪರೆಯಿಂದ ಕೂಡಿಯೂ ಇರುವ ಆ ಢಕ್ಕಾ ಧ್ವನಿಯು ಮೂರು ಲೋಕಗಳನ್ನೂ ವ್ಯಾಪಿಸಿಬಿಟ್ಟಿತು.

೮. ಆ ಧ್ವನಿಯನ್ನು ಕೇಳಿದೊಡನೆಯೇ ವಿಷ್ಣು ಬ್ರಹ್ಮ ಮೊದಲಾದ ದೇವತೆಗಳೂ, ಋಷಿಗಳೂ, ಸ್ವರೂಪವನ್ನು ಧರಿಸಿಬಂದ ಆಗಮಗಳೂ, ವೇದಗಳೂ. ಸಿದ್ಧರಾಗಿ ಆ ಹರನಿದ್ದಲ್ಲಿಗೆ ಬಂದರು,

**ಸುರಾ ಸುರಾದ್ಯಾಸ್ಸಕಲಾಸ್ತತ್ರ ಜಗ್ಮುಶ್ಚ ಸೋತ್ಸವಾಃ ।**
**ಸರ್ವೇಽಪಿ ಪ್ರಮಥಾ ಜಗ್ಮುರ್ಯತ್ರ ಕುತ್ರಾಪಿ ಸಂಸ್ಥಿತಾಃ ॥ ೯ ॥**

**ಗಣಪಾಶ್ಚ ಮಹಾಭಾಗಾಸ್ಸರ್ವಲೋಕನಮಸ್ಕೃತಾಃ ।**
**ತೇಷಾಂ ಸಂಖ್ಯಾಮಹಂ ವಚ್ಮಿ ಸಾವಧಾನತಯಾ ಶೃಣು ॥ ೧೦ ॥**

**ಅಭ್ಯಯಾಚ್ಛಂಖಕರ್ಣಶ್ಚ ಗಣಕೋಟ್ಯಾ ಗಣೇಶ್ವರಃ ।**
**ದಶಭಿಃ ಕೇಕರಾಕ್ಷಶ್ಚ ವಿಕೃತೋಽಷ್ಟಾಭಿರೇವ ಚ ॥ ೧೧ ॥**

**ಚತುಃಷಷ್ಟ್ಯಾ ವಿಶಾಖಶ್ಚ ನವಭಿಃ ಪಾರಿಯಾತ್ರಕಃ ।**
**ಷಡ್ಭಿಃ ಸರ್ವಾಂತಕಃ ಶ್ರೀಮಾನ್ದುನ್ದುನೋಽಷ್ಟಾಭಿರೇವ ಚ ॥ ೧೨ ॥**

**ಜಾಲಂಕೋ ಹಿ ದ್ವಾದಶಭಿಃ ಕೋಟಿಭಿರ್ಗಣಪುಂಗವ ।**
**ಸಪ್ತಭಿಸ್ಸಮದಃ ಶ್ರೀಮಾಂಸ್ತಥೈವ ವಿಕೃತಾನನಃ ॥ ೧೩ ॥**

---

೯. ಎಲ್ಲ ದೇವತೆಗಳೂ, ರಾಕ್ಷಸರೂ, ಮೂಲೆಮೂಲೆಯಲ್ಲೂ ಇದ್ದ ಪ್ರಮಥರೂ, ಬಹು ಸಡಗರದಿಂದ ಹೊರಟರು.

೧೦. ಎಲ್ಲರಿಗೂ ನಮಸ್ಕಾರಾರ್ಹವಾದ ಶಿವಗಣಗಳೂ ಹೊರಟರು. ಅವರ ಲೆಕ್ಕವನ್ನು ಹೇಳುವೆನು, ಗಮನಿಸಿ ಕೇಳು.

೧೧. ಶಂಕುಕರ್ಣನೆಂಬ ಗಣಾಧೀಶ್ವರನು ಒಂದು ಕೋಟಿ ಗಣಗಳೊಡನೆಯೂ, ಕೇಕರಾಕ್ಷಸನೆಂಬುವನು ಹತ್ತು ಕೋಟಿ ಗಣಗಳೊಡನೆಯೂ, ವಿಕೃತನೆಂಬುವನು ಎಂಟುಕೋಟಿ ಗಣಗಳೊಡನೆಯೂ ಬಂದರು.

೧೨. ವಿಶಾಖನು, ಅರವತ್ತನಾಲ್ಕು ಕೋಟಿ, ಪಾರಿಯಾತ್ರಿಕನು ಒಂಬತ್ತು ಕೋಟಿ, ಸರ್ವಾಂತಗನು, ಆರು ಕೋಟಿ, ದುಂದುಮನು ಎಂಟು ಕೋಟಿ ಗಣಗಳೊಡನೆಯೂ, ಬಂದರು.

೧೩. ಗಣಶ್ರೇಷ್ಠನಾದ ಜಾಲಂಕನು ಹನ್ನೆರಡು ಕೋಟಿ ಗಣಗಳೊಂದಿಗೂ, ಸಮದನು ಏಳುಕೋಟಿ ಗಣಗಳೊಡನೆಯೂ ವಿಕೃತಾನನನು ಏಳುಕೋಟಿ ಗಣಗಳೊಡನೆಯೂ ಬಂದರು.

**ಪಂಚಭಿಶ್ಚ ಕಪಾಲೀ ಹಿ ಷಡ್ಭಿಃ ಸಂದಾರಕಶ್ಶುಭಃ ।**
**ಕೋಟಿಕೋಟಿಭಿರೇವೇಹ ಕಂಡುಕಃ ಕುಂಡಕಸ್ತಥಾ ॥ ೧೪ ॥**

**ವಿಷ್ಟಂಭೋಽಷ್ಟಾಭಿರಗಮದಷ್ಟಭಿಶ್ಚಂದ್ರತಾಪನಃ ।**
**ಮಹಾಕೇಶಸ್ಸಹಸ್ರೇಣ ಕೋಟೀನಾಂ ಗಣಪೋ ವೃತಃ ॥ ೧೫ ॥**

**ಕುಂಡೀ ದ್ವಾದಶಭಿರ್ವಾಹಸ್ತಥಾ ಪರ್ವತಕಶ್ಶುಭಃ ।**
**ಕಾಲಶ್ಚ ಕಾಲಕಶ್ಚೈವ ಮಹಾಕಾಲಃ ಶತೇನ ವೈ ॥ ೧೬ ॥**

**ಅಗ್ನಿಕಶ್ಶತಕೋಟ್ಯಾ ವೈ ಕೋಟ್ಯಾಭಿಮುಖ ಏವ ಚ ।**
**ಆದಿತ್ಯಮೂರ್ಧಾ ಕೋಟ್ಯಾ ಚ ತಥಾ ಚೈವ ಧನಾವಹಃ ॥ ೧೭ ॥**

**ಸನ್ನಾಹಶ್ಚ ಶತೇನೈವ ಕುಮುದಃ ಕೋಟಿಭಿಸ್ತಥಾ ।**
**ಅಮೋಘಃ ಕೋಕಿಲಶ್ಚೈವ ಕೋಟಿಕೋಟ್ಯಾ ಸುಮಂತ್ರಕಃ ॥ ೧೮ ॥**

---

೧೪. ಐದುಕೋಟಿ ಗಣಗಳೊಡನೆ ಕಪಾಲಿಯೂ, ಆರುಕೋಟಿ ಗಣಗಳೊಡನೆ ಸಂದಾರಕನೂ, ಕೋಟಿಸಂಖ್ಯಾತವಾದ ಕೋಟಿ ಗಣಗಳೊಡನೆ ಕಂಡುಕನೂ, ಅವನಂತೆಯೇ ಕೋಟಿ ಕೋಟಿ ಗಣಗಳೊಡನೆ ಕುಂಡಕನೂ ಬಂದರು.

೧೫. ವಿಷ್ಟಂಭನೆಂಬುವನು ಎಂಟು ಕೋಟಿ ಗಣಗಳೊಡನೆಯೂ, ಚಂದ್ರತಾಪನನು ಎಂಟು ಕೋಟಿ ಗಣಗಳೊಡನೆಯೂ, ಮಹಾಕೇಶನೆಂಬ ಗಣಾಧಿಪತಿಯು ಸಾವಿರಕೋಟಿ ಗಣಗಳೊಡನೆಯೂ ಬಂದರು.

೧೬. ಕುಂಡೀ, ಮತ್ತು ಪರ್ವತಕನೆಂಬುವರು, ಒಬ್ಬೊಬ್ಬರೂ, ಹನ್ನೆರಡು ಕೋಟಿ ಗಣಗಳೊಡನೆಯೂ, ಕಾಲ, ಕಾಲಕ, ಮಹಾಕಾಲ. ಎಂಬ ಮೂವರೂ ಪ್ರತ್ಯೇಕವಾಗಿ ನೂರುಕೋಟಿ ಗಣಗಳೊಡನೆಯೂ ಬಂದರು.

೧೭. ನೂರುಕೋಟಿ ಗಣಗಳೊಡನೆ ಅಗ್ನಿಕನೂ, ಕೋಟಿ ಗಣಗಳೊಡನೆ, ಅಭಿಮುಖನೂ, ಆದಿತ್ಯಮೂರ್ಧಧನಾವಹರೆಂಬುವರು, ಒಬ್ಬೊಬ್ಬನೂ ಕೋಟಿಗಣಗಳೊಡನೆಯೂ ಬಂದರು.

೧೮. ಸನ್ನಾಹ ಮತ್ತು ಕುಮುದನೆಂಬುವರು ಒಬ್ಬೊಬನೂ ನೂರುಕೋಟಿ ಗಣಗಳೊಂದಿಗೂ, ಅವರಂತೆಯೇ, ಅಮೋಘನೂ, ಕೋಕಿಲನೂ ಪ್ರತ್ಯೇಕವಾಗಿ ನೂರುಕೋಟಿ ಗಣಗಳೊಡನೆಯೂ, ಸುಮಂತ್ರಕನು ಕೋಟಿ ಕೋಟಿ ಗಣಗಳೊಡನೆಯೂ ಬಂದರು.

**ಕಾಕಪಾದೋऽಪರಃ ಷಷ್ಟ್ಯಾ ಷಷ್ಟ್ಯಾ ಸಂತಾನಕಃ ಪ್ರಭುಃ ।**
**ಮಹಾಬಲಶ್ಚ ನವಭಿರ್ಮಧುಪಿಂಗಶ್ಚ ಪಿಂಗಲಃ ॥ ೧೯ ॥**

**ನೀಲೋ ನವತ್ಯಾ ದೇವೇಶಂ ಪೂರ್ಣಭದ್ರಸ್ತಥೈವ ಚ ।**
**ಕೋಟೀನಾಂ ಚೈವ ಸಪ್ತಾನಾಂ ಚತುರ್ವಕ್ತ್ರೋ ಮಹಾಬಲಃ ॥ ೨೦ ॥**

**ಕೋಟಿಕೋಟಿಸಹಸ್ರಾಣಾಂ ಶತೈರ್ವಿಂಶತಿಭಿರ್ವೃತಃ ।**
**ತತ್ರಾಜಗಾಮ ಸರ್ವೇಶಃ ಕೈಲಾಸಗಮನಾಯ ವೈ ॥ ೨೧ ॥**

**ಕಾಷ್ಠಾಗೂಢಶ್ಚತುಷಷ್ಟ್ಯಾ ಸುಕೇಶೋ ವೃಷಭಸ್ತಥಾ ।**
**ಕೋಟಿಭಿಸ್ಸಪ್ತಭಿಶ್ಚೈತ್ರೋ ನಕುಲೀಶಸ್ಸ್ವಯಂ ಪ್ರಭುಃ ॥ ೨೨ ॥**

**ಲೋಕಾಂತಕಶ್ಚ ದೀಪ್ತಾತ್ಮಾ ತಥಾ ದೈತ್ಯಾಂತಕಃ ಪ್ರಭುಃ ।**
**ದೇವೋ ಭೃಂಗೀ ರಿಟಿಃ ಶ್ರೀಮಾನ್ದೇವದೇವಪ್ರಿಯಸ್ತಥಾ ॥ ೨೩ ॥**

---

೧೯. ಕಾಕಪಾದನೂ, ಸಂತಾನಕನೂ ಒಬ್ಬೊಬ್ಬನೂ ಅರವತ್ತು ಕೋಟಿ ಗಣಗಳೊಡನೆಯೂ, ಮಹಾಬಲನೂ ಮಧುಪಿಂಗನೂ, ಪಿಂಗಲನೂ, ಪ್ರತ್ಯೇಕವಾಗಿ ಒಂಭತ್ತುಕೋಟಿ ಗಣಗಳೊಡನೆಯೂ ಬಂದರು.

೨೦. ಪ್ರತ್ಯೇಕವಾಗಿ ತೊಂಭತ್ತುಕೋಟಿ ಗಣಗಳೊಡನೆ, ನೀಲನೂ, ಪೂರ್ಣಭದ್ರನೂ, ಏಳುಕೋಟಿಗಣಗಳೊಡನೆ ಮಹಾ ಬಲಿಷ್ಠನಾದ ಚತುರ್ವಕ್ತ್ರನೂ ಬಂದರು.

೨೧. ಕೈಲಾಸಕ್ಕೆ ಹೋಗಬೇಕೆಂದು, ಆ ಸರ್ವೇಶ್ವರನು, ಕೋಟಿಯಷ್ಟು ಸಂಖ್ಯೆಯುಳ್ಳ ಗಣಗಳೊಡನೆ ಬಂದನು.

೨೨-೨೪. ಕಾಷ್ಠಾಗೂಢ, ಸುಕೇಶ, ವೃಷಭನೆಂಬೀ ಮೂವರು ಪ್ರತ್ಯೇಕವಾಗಿ ಅರವತ್ತನಾಲ್ಕುಕೋಟಿ ಗಣಗಳೊಡನೆಯೂ ಚೈತ್ರನೂ, ನಕುಲೀಶನೂ, ಒಬ್ಬೊಬ್ಬನೂ ಏಳುಕೋಟಿ ಗಣಗಳೊಡನೆಯೂ, ಲೋಕಾಂತಕ, ದೀಪ್ತಾತ್ಮ, ದೈತ್ಯಾಂತಕ, ದೇವದೇವನಿಗೆ (ಶಿವ) ಪ್ರಿಯನಾದ ಭೃಂಗೀ, ರಿಟಿ, ಅಶನಿ, ಭಾನುಕ, ಎಂಬಿವರೆಲ್ಲರೂ ಒಬ್ಬೊಬ್ಬನೂ ಏಳುಕೋಟಿಯಷ್ಟು ಗಣಗಳೊಡನೆಯೂ, ಸನಾತನನು ಅರವತ್ತು ನಾಲ್ಕುಕೊಟಿ ಗಣಗಳೊಡನೆಯೂ, ಮಹಾ ಬಲಶಾಲಿಯೂ ಗಣಾಧಿಪತಿಯೂ ಆದ

ಅಶನಿಭ್ರಾನುಕಶ್ಚೈವ ಚತುಷ್ಷಷ್ಟ್ಯಾ ಸನಾತನಃ ।
ನಂದೀಶ್ವರೋ ಗಣಾಧೀಶಃ ಶತಕೋಟ್ಯಾ ಮಹಾಬಲಃ ॥ ೨೨ ॥

ಏತೇ ಚಾನ್ಯೇ ಚ ಗಣಪಾ ಅಸಂಖ್ಯಾತಾ ಮಹಾಬಲಾಃ ।
ಸರ್ವೇ ಸಹಸ್ರಹಸ್ತಾಶ್ಚ ಜಟಾಮುಕುಟಧಾರಿಣಃ ॥ ೨೫ ॥

ಸರ್ವೇ ಚಂದ್ರಾವತಂಸಾಶ್ಚ ನೀಲಕಂಠಾಸ್ತ್ರಿಲೋಚನಾಃ ।
ಹಾರಕುಂಡಲಕೇಯೂರಮುಕುಟಾದ್ಯೈರಲಂಕೃತಾಃ ॥ ೨೬ ॥

ಬ್ರಹ್ಮೇಂದ್ರವಿಷ್ಣುಸಂಕಾಶಾ ಅಣಿಮಾದಿಗಣೈರ್ವೃತಾಃ ।
ಸೂರ್ಯಕೋಟಿಪ್ರತೀಕಾಶಾಸ್ತತ್ರಾಜಗ್ಮುರ್ಗಣೇಶ್ವರಾಃ ॥ ೨೭ ॥

ಏತೇ ಗಣಾಧಿಪಾಶ್ಚಾನ್ಯೇ ಮಹಾತ್ಮಾನೋಽಮಲಪ್ರಭಾಃ ।
ಜಗ್ಮುಸ್ತತ್ರ ಮಹಾಪ್ರೀತ್ಯಾ ಶಿವದರ್ಶನಲಾಲಸಾಃ ॥ ೨೮ ॥

---

ನಂದಿಕೇಶ್ವರನು ನೂರುಕೋಟಿಗಣಗಳೊಡನೆಯೂ ಬಂದರು. ಇವರಲ್ಲದೆ ಇನ್ನೂ ಅಸಂಖ್ಯಾತರಾದ ಮಹಾಬಲಿಷ್ಠರಾದ ಗಣೇಶ್ವರರೂ ಬಂದರು.

೨೫. ಎಲ್ಲರಿಗೂ ಸಾವಿರ ತೋಳುಗಳು, ಎಲ್ಲರಿಗೂ ತಲೆಯಲ್ಲಿ ಜಟೆಗಳು, ಕಿರೀಟಗಳು. ಎಲ್ಲರೂ ಚಂದ್ರರೇಖೆಯನ್ನು ಧರಿಸಿರುವವರೇ. ಎಲ್ಲರ ಕೊರಳೂ ಕಪ್ಪು. ಎಲ್ಲರಿಗೂ ಮೂರು ಕಣ್ಣುಗಳು.

೨೬-೨೭. ಒಬ್ಬೊಬ್ಬರೂ, ಹಾರ, ಹತ್ತುಕಡಕು, ತೋಳುಬಳೆ, ಕಿರೀಟ ಮೊದಲಾದ ಆಭರಗಳಿಂದ ಭೂಷಿತರಾಗಿದ್ದರು. ಪ್ರತಿಯೊಬ್ಬರೂ, ಬ್ರಹ್ಮ, ಇಂದ್ರ, ವಿಷ್ಣುಗಳಿಗೆ ಸರಿಸಮರಾಗಿದ್ದರು. ಪ್ರತಿಯೊಬ್ಬರೂ ಅಣುಮಾದಿಸಿದ್ಧಿಗಳನ್ನು ಪಡೆದವರೇ. ಎಲ್ಲರೂ, ಸೂರ್ಯಕೋಟಿಗೆ ಸಮಾನವಾದ ತೇಜಸ್ಸುಳ್ಳವರೇ. ಇಂತಹ ಗಣೇಶ್ವರರು ಅಲ್ಲಿಗೆ ಬಂದರು.

೨೮. ಈ ಗಣಾಧಿಪತಿಗಳೆಲ್ಲರೂ, ನಿರ್ಮಲ ತೇಜಸ್ಸಿನಿಂದ ಬೆಳಗುತ್ತಿದ್ದ ಇತರ ಮಹಾತ್ಮರೂ, ಶಿವನ ದರ್ಶನವನ್ನು ಪಡೆಯಬೇಕೆಂಬ ಅಭಿಲಾಷೆಯಿಂದ, ಅಲ್ಲಿಗೆ ಮಹಾಪ್ರೀತಿಯಿಂದ ತೆರಳಿದರು.

**ಗತ್ವಾ ತತ್ರ ಶಿವಂ ದೃಷ್ಟ್ವಾ ನತ್ವಾ ಚಕ್ರುಃ ಪರಾಂ ನುತಿಂ ।**
**ಸರ್ವೇ ಸಾಂಜಲಯೋ ವಿಷ್ಣುಪ್ರಮುಖಾ ನತಮಸ್ತಕಾಃ ॥ ೨೯ ॥**

**ಇತಿ ವಿಷ್ಣ್ವಾದಿಭಿಸ್ಸಾರ್ಧಂ ಮಹೇಶಃ ಪರಮೇಶ್ವರಃ ।**
**ಕೈಲಾಸಮಗಮತ್ಪ್ರೀತ್ಯಾ ಕುಬೇರಸ್ಯ ಮಹಾತ್ಮನಃ ॥ ೩೦ ॥**

**ಕುಬೇರೋಽಪ್ಯಾಗತಂ ಶಂಭುಂ ಪೂಜಯಾಮಾಸ ಸಾದರಂ ।**
**ಭಕ್ತ್ಯಾ ನಾನೋಪಹಾರೈಶ್ಚ ಪರಿವಾರಸಮನ್ವಿತಃ ॥ ೩೧ ॥**

**ತತೋ ವಿಷ್ಣ್ವಾದಿಕಾನ್ದೇವಾನ್ಗಣಾಂಶ್ಚಾನ್ಯಾನಪಿ ಧ್ರುವಂ ।**
**ಶಿವಾನುಗಾನ್ಸಮಾನರ್ಚ ಶಿವತೋಷಣಹೇತವೇ ॥ ೩೨ ॥**

**ಅಥ ಶಂಭುಸ್ಸಮಾಲಿಂಗ್ಯ ಕುಬೇರಂ ಪ್ರೀತಮಾನಸಃ ।**
**ಮೂರ್ಧ್ನಿ ಚಾಘ್ರಾಯ ಸಂತಸ್ಥಾವಲಕಾಂ ನಿಕಷಾಽಖಿಲೈಃ ॥ ೩೩ ॥**

---

೨೯. ವಿಷ್ಣುವೇ ಮೊದಲಾದ ಅವರೆಲ್ಲರೂ, ಅಂಜಲಿ ಬದ್ಧರಾಗಿ ನಮ್ರತೆಯಿಂದ ತಲೆಬಗ್ಗಿಸಿಕೊಂಡು, ಅಲ್ಲಿಗೆ ಹೋಗಿ ಶಿವನನ್ನು ಕಂಡು ನಮಸ್ಕರಿಸಿ ಅದ್ಭುತವಾಗಿ ಸ್ತೋತ್ರವನ್ನು ಮಾಡಿದರು.

೩೦. ಹೀಗೆ ವಿಷ್ಣುವೇ ಮೊದಲಾದವರೊಡನೆ ಪರಮೇಶ್ವರನಾದ ಆ ಮಹೇಶ್ವರನು, ಮಹಾತ್ಮನಾದ ಕುಬೇರನಿಗೆ ಸೇರಿದ ಕೈಲಾಸಕ್ಕೆ ಪ್ರೀತಿಯಿಂದ ಹೊರಟನು.

೩೧. ಕುಬೇರನೂ ಸಹ ಭಕ್ತಿಯಿಂದಲೂ, ಆದರದಿಂದಲೂ, ತನ್ನ ಮನೆಗೆ ದಯಮಾಡಿಸಿದ ಶಿವನನ್ನು ತನ್ನ ಪರಿವಾರಸಮೇತನಾಗಿ ನಾನಾವಿಧವಾದ ಉಪಚಾರಗಳಿಂದ ಪೂಜಿಸಿದನು.

೩೨. ಬಳಿಕ ಶಿವನ ಜೊತೆಯಲ್ಲಿ ಬಂದಿದ್ದ ವಿಷ್ಣುವೇ ಮೊದಲಾದ ಎಲ್ಲ ದೇವತೆಗಳನ್ನೂ, ಗಣಗಳನ್ನೂ, ಇನ್ನೂ ಇತರರನ್ನೂ ಶಿವನಿಗೆ ಸಂತೋಷವಾಗಲೆಂದು ಪೂಜಿಸಿದನು.

೩೩. ಆಮೇಲೆ ಶಿವನು ಸಂತುಷ್ಟಾಂತರಂಗನಾಗಿ ಕುಬೇರನನ್ನು ಆಲಂಗಿಸಿ, ಶಿರವನ್ನಾಘ್ರಾಣಿಸಿ ಆತನ ಪಟ್ಟಣವಾದ ಅಲಕಾನಗರಿಯ ಬಳಿಯಲ್ಲಿಯೇ ಅವರೆಲ್ಲರೊಡನೆಯೂ ನಿಂತುಬಿಟ್ಟನು.

**ಶಶಾಸ ವಿಶ್ವಕರ್ಮಾಣಂ ನಿರ್ಮಾಣಾರ್ಥಂ ಗಿರೌ ಪ್ರಭುಃ ।**
**ನಾನಾಭಕ್ತೈರ್ನಿವಾಸಾಯ ಸ್ವಪರೇಷಾಂ ಯಥೋಚಿತಂ ॥ ೩೪ ॥**

**ವಿಶ್ವಕರ್ಮಾ ತತೋ ಗತ್ವಾ ತತ್ರ ನಾನಾವಿಧಾಂ ಮುನೇ ।**
**ರಚನಾಂ ರಚಯಾಮಾಸ ದ್ರುತಂ ಶಂಭೋರನುಜ್ಞಯಾ ॥ ೩೫ ॥**

**ಅಥ ಶಂಭುಃ ಪ್ರಮುದಿತೋ ಹರಿಪ್ರಾರ್ಥನಯಾ ತದಾ ।**
**ಕುಬೇರಾನುಗ್ರಹಂ ಕೃತ್ವಾ ಯಯೌ ಕೈಲಾಸಪರ್ವತಂ ॥ ೩೬ ॥**

**ಸುಮುಹೂರ್ತೇ ಪ್ರವಿಶ್ಯಾಸೌ ಸ್ವಸ್ಥಾನಂ ಪರಮೇಶ್ವರಃ ।**
**ಅಕರೋದಖಿಲಾನ್ಪ್ರೀತ್ಯಾ ಸನಾಥಾನ್ಭಕ್ತವತ್ಸಲಃ ॥ ೩೭ ॥**

**ಅಥ ಸರ್ವೇ ಪ್ರಮುದಿತಾ ವಿಷ್ಣುಪ್ರಭೃತಯಸ್ಸುರಾಃ ॥**
**ಮುನಯಶ್ಚಾಪರೇ ಸಿದ್ಧಾ ಅಭ್ಯಷಿಂಚನ್ಮುದಾ ಶಿವಂ ॥ ೩೮ ॥**

---

೩೪. ಬಳಿಕ ಪ್ರಭುವು, ತಾನೂ ಮತ್ತು ಇತರರೂ, ತಂತಮ್ಮ ಭಕ್ತರೊಡನೆ ವಾಸಮಾಡಲು ಅನುಕೂಲಿಸುವಂತೆ ಅವರವರಿಗನುಗುಣವಾಗಿ ನಿವಾಸಗಳನ್ನು ಆ ಕೈಲಾಸದಲ್ಲಿ ನಿರ್ಮಿಸುವಂತೆ ವಿಶ್ವಕರ್ಮನಿಗೆ ಅಪ್ಪಣೆಯಿತ್ತನು.

೩೫. ಆಮೇಲೆ ವಿಶ್ವಕರ್ಮನು ಶಿವನ ಅಪ್ಪಣೆಯಂತೆ ಆ ಕೈಲಾಸಪರ್ವತದಲ್ಲಿ ಬೇಗನೆ ನಾನಾ ವಿಧವಾದ ಶಿಲ್ಪಕಲಾವೈಭವಗಳಿಂದ ಬೆಳಗುವ ಬಗೆಬಗೆಯ ಭವನಗಳನ್ನು ರಚಿಸಿದನು.

೩೬. ಆಮೇಲೆ ವಿಷ್ಣುವಿನ ಪ್ರಾರ್ಥನೆಯಂತೆ ಸಂತುಷ್ಟಚಿತ್ತನಾದ ಶಿವನು ಕುಬೇರನನ್ನು ಅನುಗ್ರಹಿಸಿ ಕೈಲಾಸಪರ್ವತಕ್ಕೆ ತೆರಳಿದನು.

೩೭. ಆ ಭಕ್ತವತ್ಸಲನಾದ ಪರಮೇಶ್ವರನು ಒಳ್ಳೆಯ ಮುಹೂರ್ತದಲ್ಲಿ ತನ್ನ ನಿವಾಸವಾದ ಕೈಲಾಸವನ್ನು ಪ್ರವೇಶಿಸಿ ಎಲ್ಲರನ್ನೂ ಸನಾಥರನ್ನಾಗಿ ಮಾಡಿದನು.

೩೮. ಆಮೇಲೆ ವಿಷ್ಣುವೇ ಮೊದಲಾದ ದೇವತೆಗಳೂ, ಋಷಿಗಳೂ, ಸಿದ್ಧರೂ, ಇನ್ನೂ ಇತರರೂ ಎಲ್ಲರೂ ಸೇರಿ ಸಂತೋಷದಿಂದ ಶಿವನಿಗೆ ಅಭಿಷೇಕಮಾಡಿದರು.

ಸಮಾಸರ್ಚುಃ ಕ್ರಮಾತ್ಸರ್ವೇ ನಾನೋಪಾಯನಪಾಣಯಃ ।
ನೀರಾಜನಂ ಸಮಾಕಾರ್ಷುರ್ಮಹೋತ್ಸವಪುರಸ್ಸರಂ ॥ ೩೯ ॥

ತದಾಸೀತ್ಸುಮನೋವೃಷ್ಟಿರ್ಮಂಗಲಾಯತನಾ ಮುನೇ ।
ಸುಪ್ರೀತಾ ನನೃತುಸ್ತತ್ರಾಪ್ಸರಸೋ ಗಾನತತ್ಪರಾಃ ॥ ೪೦ ॥

ಜಯಶಬ್ದೋ ನಮಶ್ಶಬ್ದಸ್ತತ್ರಾಸೀತ್ಸರ್ವಸಂಸ್ಕೃತಃ ।
ತದೋತ್ಸಾಹೋ ಮಹಾನಾಸೀತ್ಸರ್ವೇಷಾಂ ಸುಖವರ್ಧನಃ ॥ ೪೧ ॥

ಸ್ಥಿತ್ವಾ ಸಿಂಹಾಸನೇ ಶಂಭುರ್ವಿರರಾಜಾಧಿಕಂ ತದಾ ।
ಸರ್ವೈಸ್ಸಂಸೇವಿತೋಽಭೀಕ್ಷ್ಣಂ ವಿಷ್ಣ್ವಾದ್ಯೈಶ್ಚ ಯಥೋಚಿತಂ ॥ ೪೨ ॥

ಅಥ ಸರ್ವೇ ಸುರಾದ್ಯಾಶ್ಚ ತುಷ್ಟುವುಸ್ತಂ ಪೃಥಕ್ ಪೃಥಕ್ ।
ಅರ್ಥ್ಯಾಭಿರ್ವಾಗ್ಭಿರಿಷ್ಟಾಭಿಶ್ಶಂಕರಂ ಲೋಕಶಂಕರಂ ॥ ೪೩ ॥

೩೯. ಎಲ್ಲರೂ ಬಹಳ ಸಂಭ್ರಮದಿಂದ ನಾನಾ ವಿಧವಾದ ಕಾಣಿಕೆಗಳನ್ನು ಕ್ರಮವಾಗಿ ಒಪ್ಪಿಸಿ, ಆರತಿಯನ್ನು ಬೆಳಗಿದರು.

೪೦. ಆಗ ಮಂಗಲಸೂಚಕವಾದ ಪುಷ್ಪವೃಷ್ಟಿಯು ನಡೆಯಿತು. ಅಲ್ಲಿ ಅಪ್ಸರಸ್ತ್ರೀಯರು ದಿವ್ಯವಾದ ಗಾನವನ್ನು ಹಾಡುತ್ತಾ ಸಂತೋಷವಾಗಿ ನರ್ತನ ಮಾಡಿದರು.

೪೧. ಎಲ್ಲಿ ನೋಡಿದರೂ, 'ಜಯ ಜಯ' ಎಂಬ ಶಬ್ದವೂ. ನಮಃ ಎಂಬ ಶಬ್ದವೂ ಕೇಳಿಬರುತ್ತಿತ್ತು. ಎಲ್ಲರಲ್ಲಿಯೂ, ಸುಖವನ್ನು ಹೆಚ್ಚಿಸುವಂತಹ ಮಹಾ ಉತ್ಸಾಹವು ತಾಂಡವವಾಡುತ್ತಿತ್ತು.

೪೨. ಆಗ ಸಿಂಹಾಸನದಲ್ಲಿ ಕುಳಿತಿದ್ದ ಶಿವನು ವಿಷ್ಣುವೇ ಮೊದಲಾಗಿ ಎಲ್ಲರಿಂದಲೂ ಸೇವೆಯನ್ನು ಯಥೋಚಿತವಾಗಿ ಸ್ವೀಕರಿಸುತ್ತಾ ಅತಿಶಯವಾಗಿ ಪ್ರಕಾಶಿಸುತ್ತಿದ್ದನು.

೪೩. ಬಳಿಕ ದೇವತೆಗಳೇ ಮೊದಲಾಗಿ ಎಲ್ಲರೂ, ಅರ್ಥಗರ್ಭಿತವೂ ಪ್ರೀತಿವರ್ಧಕವೂ ಆದ ವಾಕ್ಯಗಳಿಂದ ಮಂಗಲವನ್ನುಂಟುಮಾಡುವ ಶಂಕರನನ್ನು ಬೇರೆ ಬೇರೆಯಾಗಿ ಸ್ತುತಿಸಿದರು.

ಪ್ರಸನ್ನಾತ್ಮಾ ಸ್ತುತಿಂ ಶ್ರುತ್ವಾ ತೇಷಾಂ ಕಾಮಾನ್ದದೌ ಶಿವಃ ।
ಮನೋಽಭಿಲಷಿತಾನ್ಪ್ರೀತ್ಯಾ ವರಾನ್ಸರ್ವೇಶ್ವರಃ ಪ್ರಭುಃ ॥ ೪೪ ॥

ಶಿವಾಜ್ಞಯಾಥ ತೇ ಸರ್ವೇ ಸ್ವಂ ಸ್ವಂ ಧಾಮ ಯಯುರ್ಮುನೇ ।
ಪ್ರಾಪ್ತಕಾಮಾಃ ಪ್ರಮುದಿತಾ ಅಹಂ ಚ ವಿಷ್ಣುನಾ ಸಹ ॥ ೪೫ ॥

ಉಪವೇಶ್ಯಾಸನೇ ವಿಷ್ಣುಂ ಮಾಂ ಚ ಶಂಭುರುವಾಚ ಹ ।
ಬಹು ಸಂಬೋಧ್ಯ ಸುಪ್ರೀತ್ಯಾನುಗೃಹ್ಯ ಪರಮೇಶ್ವರಃ ॥ ೪೬ ॥

॥ ಶಿವ ಉವಾಚ ॥

ಹೇ ಹರೇ ಹೇ ವಿಧೇ ತಾತೌ ಯುವಾಂ ಪ್ರಿಯತರೌ ಮಮ ।
ಸುರೋತ್ತಮೌ ತ್ರಿಜಗತೋಽವನಸರ್ಗಕರೌ ಸದಾ ॥ ೪೭ ॥

ಗಚ್ಛತಂ ನಿರ್ಭಯಂ ನಿತ್ಯಂ ಸ್ವಸ್ಥಾನಂ ಚ ಮದಾಜ್ಞಯಾ ।
ಸುಖಪ್ರದಾತಾಹಂ ವೈ ವಾಂ ವಿಶೇಷಾತ್ಪ್ರೇಕ್ಷಕಸ್ಸದಾ ॥ ೪೮ ॥

---

೪೪. ಸರ್ವೇಶ್ವರನಾದ ಶಿವನು ಅವರ ಸ್ತುತಿಯನ್ನು ಕೇಳಿ ಪ್ರಸನ್ನನಾಗಿ, ಪ್ರೀತಿಯಿಂದ ವರಗಳನ್ನಿತ್ತು ಅವರವರು ಕೋರಿದ ಕೋರಿಕೆಗಳನ್ನೆಲ್ಲಾ ಸಫಲಗೊಳಿಸಿದನು.

೪೫. ಆಮೇಲೆ ಎಲ್ಲರೂ ತಮ್ಮ ಇಷ್ಟಾರ್ಥಗಳನ್ನು ಹೊಂದಿದವರಾಗಿ ಸಂತೋಷದಿಂದ ಶಿವನ ಅಪ್ಪಣೆಯನ್ನು ಪಡೆದು ತಮ್ಮತಮ್ಮ ಮನೆಗಳಿಗೆ ತೆರಳಿದರು. ನಾನೂ ವಿಷ್ಣುವಿನೊಡನೆ ಹೊರಟೆನು.

೪೬. ಆಮೇಲೆ ಜಗದೀಶ್ವರನಾದ ಶಿವನು ವಿಷ್ಣುವನ್ನೂ ನನ್ನನ್ನೂ ನಾನಾ ಪ್ರಕಾರವಾಗಿ ಸಂಬೋಧಿಸಿ, ಪ್ರೀತಿಯಿಂದ ಅನುಗ್ರಹಿಸಿ ತನ್ನ ಆಸನದಲ್ಲಿ ಕುಳ್ಳಿರಿಸಿ ಕೊಂಡು ಹೇಳಿದನು.

೪೭. ಎಲೈ ಹರಿಯೇ, ವಿಧಿಯೇ, ಓ ಸುರೋತ್ತಮರೇ, ಮೂರು ಲೋಕವನ್ನೂ ಯಾವಾಗಲೂ ಪಾಲಿಸುತ್ತಲೂ, ಸೃಷ್ಟಿಸುತ್ತಲೂ ಇರುವ ನೀವಿಬ್ಬರೂ ನನಗೆ ಬಹಳ ಪ್ರೀತಿಪಾತ್ರರು.

೪೮. ನೀವು ನನ್ನ ಅಪ್ಪಣೆಯಂತೆ ನಿರ್ಭಯವಾಗಿ ನಿಮ್ಮ ನಿಮ್ಮ ಜಾಗಗಳಿಗೆ ತೆರಳಿರಿ. ನಾನು ಯಾವಾಗಲೂ ನಿಮ್ಮಿಬ್ಬರನ್ನೂ ವಿಶೇಷವಾಗಿ ನೋಡಿಕೊಳ್ಳುತ್ತಾ ನಿಮಗೆ ಸುಖವನ್ನುಂಟುಮಾಡುತ್ತಿರುತ್ತೇನೆ.

ಇತ್ಯಾಕರ್ಣ್ಯ ವಚಶ್ಶಂಭೋಸ್ಸುಪ್ರಣಮ್ಯ ತದಾಜ್ಞಯಾ ।
ಅಹಂ ಹರಿಶ್ಚ ಸ್ವಂ ಧಾಮಾಗಮಾವ ಪ್ರೀತಮಾನಸೌ ॥ ೪೯ ॥

ತದಾನೀಮೇವ ಸುಪ್ರೀತಶ್ಶಂಕರೋ ನಿಧಿಪಂ ಮುದಾ ।
ಉಪವೇಶ್ಯ ಗೃಹೀತ್ವಾ ತಂ ಕರ ಆಹ ಶುಭಂ ವಚಃ ॥ ೫೦ ॥

॥ ಶಿವ ಉವಾಚ ॥

ತವ ಪ್ರೇಮ್ಣಾ ವಶೀಭೂತೋ ಮಿತ್ರತಾಮುಗಮಂ ಸಖೇ ।
ಸ್ವಸ್ಥಾನಂ ಗಚ್ಛ ವಿಭಯಸ್ಸಹಾಯೋಽಹಂ ಸದಾನಘ ॥ ೫೧ ॥

ಇತ್ಯಾಕರ್ಣ್ಯ ವಚಶ್ಶಂಭೋಃ ಕುಬೇರಃ ಪ್ರೀತಮಾನಸಃ ।
ತದಾಜ್ಞಯಾ ಸ್ವಕಂ ಧಾಮ ಜಗಾಮ ಪ್ರಮುದಾನ್ವಿತಃ ॥ ೫೨ ॥

ಸ ಉವಾಸ ಗಿರೌ ಶಂಭುಃ ಕೈಲಾಸೇ ಪರ್ವತೋತ್ತಮೇ ।
ಸಗಣೋ ಯೋಗನಿರತಃ ಸ್ವಚ್ಛಂದೋ ಧ್ಯಾನತತ್ಪರಃ ॥ ೫೩ ॥

೪೯. ಶಿವನು ಹೀಗೆ ನುಡಿದ ಮಾತನ್ನು ಕೇಳಿ ನಾವಿಬ್ಬರೂ ಅವನಿಗೆ ನಮಸ್ಕರಿಸಿ ಅವನ ಅಪ್ಪಣೆಯನ್ನು ಪಡೆದು ಸಂತುಷ್ಟಾಂತರಂಗರಾಗಿ ನಾನೂ ಹರಿಯೂ ನಮ್ಮ ನಮ್ಮ ನಿವಾಸಗಳಿಗೆ ಹಿಂದಿರುಗಿದೆವು.

೫೦. ಆಗಲೇ, ಸುಪ್ರೀತನಾದ ಶಂಕರನು ಸಂತೋಷದಿಂದ ನಿಧಿಪತಿಯಾದ ಕುಬೇರನನ್ನು ಕರೆದು ಬಳಿಯಲ್ಲಿ ಕೂರಿಸಿಕೊಂಡು ಆತನ ಕೈಹಿಡಿದುಕೊಂಡು ಶುಭಕರವಾದ ಈ ಮಾತನ್ನು ಹೇಳಿದನು.

೫೧. ಎಲೈ ಸ್ನೇಹಿತನೇ, ನಿನ್ನ ಪ್ರೀತಿಗೆ ವಶನಾಗಿ ನಿನ್ನ ಸಖ್ಯವನ್ನು ಸಂಪಾದಿಸಿದೆನು. ಯಾವ ಭಯವೂ ಇಲ್ಲದೆ ನಿನ್ನ ಜಾಗಕ್ಕೆ ಹಿಂದಿರುಗು. ಓ ಪಾಪರಹಿತನೇ, ನಾನು ಯಾವಾಗಲೂ ನಿನಗೆ ಸಹಾಯಕನಾಗಿರುವೆನು, ಎಂದನು.

೫೨. ಶಿವನ ಮಾತನ್ನು ಕೇಳಿ ಕುಬೇರನು ಬಹು ಸಂತೋಷಪಟ್ಟು ಆತನ ಅಪ್ಪಣೆಯಂತೆ ತನ್ನ ಸ್ಥಾನಕ್ಕೆ ಹಿಂದಿರುಗಿದನು.

೫೩. ಬಳಿಕ ಆ ಶಿವನು ತನ್ನ ಗಣಗಳೊಡನೆ, ಆ ಪರ್ವತಶ್ರೇಷ್ಠವಾದ ಕೈಲಾಸಗಿರಿಯಲ್ಲಿರುತ್ತಾ ತನ್ನ ಇಷ್ಟಬಂದಂತೆ ಯೋಗಮಾರ್ಗನಿರತನಾಗಿಯೂ, ಧ್ಯಾನಮಗ್ನನಾಗಿಯೂ ಇರುತ್ತಿದ್ದನು.

ಕ್ವಚಿದ್ದಧ್ಯೌ ಸ್ವಮಾತ್ಮಾನಂ ಕ್ವಚಿದ್ಯೋಗರತೋಽಭವತ್ ।
ಇತಿಹಾಸಗಣಾನ್ಪ್ರೀತ್ಯಾವಾದೀತ್ಸ್ವಚ್ಛಂದಮಾನಸಃ ॥ ೫೪ ॥

ಕ್ವಚಿತ್ಕೈಲಾಸಕುಧರಸುಸ್ಥಾನೇಷು ಮಹೇಶ್ವರಃ ।
ವಿಜಹಾರ ಗಣೈಃ ಪ್ರೀತ್ಯಾ ವಿವಿಧೇಷು ವಿಹಾರವಿತ್ ॥ ೫೫ ॥

ಇತ್ಥಂ ರುದ್ರಸ್ವರೂಪೋಽಸೌ ಶಂಕರಃ ಪರಮೇಶ್ವರಃ ।
ಅಕಾರ್ಷೀತ್ಸ್ವಗಿರೌ ಲೀಲಾ ನಾನಾ ಯೋಗಿವರೋಽಪಿ ಯಃ ॥ ೫೬ ॥

ನೀತ್ವಾ ಕಾಲಂ ಕಿಯಂತಂ ಸೋಽಪತ್ನೀಕಃ ಪರಮೇಶ್ವರಃ ।
ಪಶ್ಚಾದವಾಪ ಸ್ವಾಂ ಪತ್ನೀಂ ದಕ್ಷಪತ್ನೀಸಮುದ್ಭವಾಂ ॥ ೫೭ ॥

ವಿಜಹಾರ ತಯಾ ಸತ್ಯಾ ದಕ್ಷಪುತ್ರ್ಯಾ ಮಹೇಶ್ವರಃ ।
ಸುಖೀ ಬಭೂವ ದೇವರ್ಷೇ ಲೋಕಾಚಾರಪರಾಯಣಃ ॥ ೫೮ ॥

---

೫೪. ಒಮ್ಮೆ ಸ್ವಸ್ವರೂಪವನ್ನು ಧ್ಯಾನಿಸುತ್ತಿದ್ದನು ಇನ್ನೊಮ್ಮೆ ಯೋಗ ನಿರತನಾಗಿರುತ್ತಿದ್ದನು. ಮತ್ತೊಮ್ಮೆ ಸ್ವೇಚ್ಛೆಯಾಗಿ ಗಣಗಳೆಲ್ಲರಿಗೆ ಇತಿಹಾಸ ಗಳನ್ನು ಹೇಳುತ್ತಿದ್ದನು,

೫೫. ಆ ಮಹೇಶ್ವರನು ಒಂದೊಂದುಸಲ ಕೈಲಾಸಪರ್ವತದ ವಿವಿಧವೂ ಮನೋಹರವೂ ಆದ ನಾನಾ ಸ್ಥಳಗಳಲ್ಲಿ ವಿಹಾರನಿರತನಾಗಿ ಗಣಗಳೊಡನೆ ವಿಹರಿಸು ತ್ತಿದ್ದನು.

೫೬. ಈರೀತಿ ರುದ್ರಸ್ವರೂಪನೂ ಪರಮೇಶ್ವರನೂ ಆದ ಶಂಕರನು ಮಹಾ ಯೋಗಿಶ್ರೇಷ್ಠನಾಗಿದ್ದರೂ, ತನ್ನ ಕೈಲಾಸಪರ್ವತದಲ್ಲಿ ಸಾಮಾನ್ಯ ಜನರಂತೆ ನಾನಾ ರೀತಿಯಾದ ಲೀಲೆಗಳನ್ನು ತೋರ್ಪಡಿಸಿದನು.

೫೭. ಆ ಪರಮೇಶ್ವರನು ಕೆಲವುಕಾಲ ಅಪತ್ನೀಕನಾಗಿಯೇ ಇದ್ದು ಆಮೇಲೆ ದಕ್ಷನಿಗೆ ಮಗಳಾಗಿ ಹುಟ್ಟಿದ ಸತಿಯನ್ನು ತನ್ನ ಪತ್ನಿಯನ್ನಾಗಿ ಪರಿಗ್ರಹಿಸಿದನು.

೫೮. ದಕ್ಷಪುತ್ರಿಯಾದ ಆ ಸತೀದೇವಿಯೊಡಗೂಡಿ ಮಹೇಶ್ವರನು ಬಹು ವಾಗಿ ವಿಹರಿಸಿದನು. ಓ ನಾರದ, ಆ ಪರಮಪುರುಷನು ಅಲ್ಲಿ ಸಾಮಾನ್ಯ ಜನರಂತೆ ಪ್ರಪಂಚವ್ಯವಹಾರಾಸಕ್ತನಾಗಿ ಸುಖವಾಗಿದ್ದನು.

ಇತ್ಥಂ ರುದ್ರಾವತಾರಸ್ತೇ ವರ್ಣಿತೋಽಯಂ ಮುನೀಶ್ವರ ।
ಕೈಲಾಸಾಗಮನಂ ಚಾಸ್ಯ ಸಖಿತ್ವಂ ನಿಧಿಪಸ್ಯ ಹಿ ॥ ೫೯ ॥

ತದಂತರ್ಗತಲೀಲಾಪಿ ವರ್ಣಿತಾ ಜ್ಞಾನವರ್ಧಿನೀ ।
ಇಹಾಮುತ್ರ ಚ ಯಾ ನಿತ್ಯಂ ಸರ್ವಕಾಮಫಲಪ್ರದಾ ॥ ೬೦ ॥

ಇಮಾಂ ಕಥಾಂ ಪಠೇದ್ಯಸ್ತು ಶೃಣುಯಾದ್ವಾ ಸಮಾಹಿತಃ ।
ಇಹ ಭುಕ್ತಿಂ ಸಮಾಸಾದ್ಯ ಲಭೇನ್ಮುಕ್ತಿಂ ಪರತ್ರ ಸಃ ॥ ೬೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪ್ರಥಮಖಂಡೇ ಸೃಷ್ಟ್ಯುಪಾಖ್ಯಾನೇ ಕೈಲಾಸೋಪಾಖ್ಯಾನೇ
ಶಿವಕೈಲಾಸಗಮನೋ ನಾಮ ವಿಂಶೋಽಧ್ಯಾಯಃ



೫೯. ಓ ಮಹರ್ಷಿ, ಈರೀತಿ ನಿನಗೆ ರುದ್ರನ ಆವಿರ್ಭಾವವನ್ನೂ, ಆತನು ಕೈಲಾಸಪರ್ವತಕ್ಕೆ ಬಂದ ಬಗೆಯನ್ನೂ ಕುಬೇರನೊಡನೆ ಸಖ್ಯವನ್ನು ಬೆಳೆಸಿದುದನ್ನೂ ವಿವರಿಸಿದುದಾಯಿತು.

೬೦. ಇಹದಲ್ಲಿಯೂ ಪರದಲ್ಲಿಯೂ ಶಾಶ್ವತವಾಗಿ ಸಕಲ ಇಷ್ಟಾರ್ಥಗಳನ್ನೂ ನೀಡುವಂಥ ಜ್ಞಾನದಾಯಕವಾದ ಅದರೊಳಗಿನ ಲೀಲೆಗಳನ್ನೂ ವರ್ಣಿಸಿರುವೆನು.

೬೧. ಯಾವನು ಸಮಾಧಾನಚಿತ್ತದಿಂದ ಈ ಕಥೆಯನ್ನು ಓದುವನೋ, ಅಥವಾ ಕೇಳುವನೋ ಅವನು ಈ ಲೋಕದಲ್ಲಿ ಸಕಲ ಭೋಗಭಾಗ್ಯಗಳನ್ನೂ ಅನುಭವಿಸಿ ಪರದಲ್ಲಿ ಮೋಕ್ಷವನ್ನೂ ಪಡೆಯುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೊದಲನೆಯಖಂಡವಾದ ಸೃಷ್ಟ್ಯುಪಾಖ್ಯಾನದಲ್ಲಿ ಕೈಲಾಸೋಪಾಖ್ಯಾನದಲ್ಲಿ ಶಿವಕೈಲಾಸಗಮನವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಓಂ ನಮಃ ಶಿವಾಯ ॥

## ಸೃಷ್ಟಿಖಂಡವು ಮುಗಿದುದು

॥ ಮಂಗಲಂ ॥

